# ಭಗವಾನ್ ಶ್ರೀರಾಮ



ಶ್ರೀರಾಮಚಂದ್ರಕೀ ಜಯ

# ಭಗವಾನ್ ಶ್ರೀರಾಮ

## (ಅರ್ಥಾತ್ ಸಂಪೂರ್ಣ ರಾಮಾಯಣ)

ಶ್ರೀಮಜ್ಜಗದ್ಗುರು ಶ್ರೀ ವಾಲುಕೇಶ್ವರ ಭಾರತೀ
ಶ್ರೀಗಳವರ ಸಂಕ್ಷಿಪ್ತ ಚರಿತ್ರವೂ ಸೇರಿದೆ



ಮುನ್ನುಡಿ ಲೇಖಕರು:
ಬ್ರಹ್ಮಶ್ರೀ ಪಂಡಿತಾವತಾಂಶ ಶ್ರೀಮತ್ಪೂಜ್ಯ
**ಭಾಲಚಂದ್ರ ಶಾಸ್ತ್ರಿಗಳು**
ಪ್ರಧಾನಾಧ್ಯಾಪಕ ಶ್ರೀಮಜ್ಜಗದ್ಗುರು ಶಂಕರಾಚಾರ್ಯ
ಸಂಸ್ಕೃತ ಪಾಠಶಾಲಾ, ಧಾರವಾಡ.



ಲೇಖಿಕಾ:
**ಸೌ. ಸರಸ್ವತೀದೇವಿ ಚಿದಂಬರರಾವ ಕುಲಕರ್ಣಿ**



ಪ್ರಕಾಶಕರು:
**ಚಿದಂಬರ ಶ್ರೀಪಾದ ಕುಲಕರ್ಣಿ,**
ಅಧ್ಯಾತ್ಮನಿಲಯ ಪಂಬಿಗೋಳ ಕಂಪೌಂಡ ಮಾಳಮಡ್ಡಿ, ಧಾರವಾಡ



**ಬೆಲೆ: ೩ ರೂಪಾಯಿ**

# ಚತುಃಶ್ಲೋಕಿ ರಾಮಾಯಣ



ಆದೌ ರಾಮ ತಪೋವನಾದಿ ಗಮನಂ |
ಹತ್ವಾ ಮೃಗಂ ಕಾಂಚನಂ ವೈದೇಹಿ ಹರಣಂ ||

ಜಟಾಯು ಮರಣಂ ಸುಗ್ರೀವ ಸಂಭಾಷಣಂ |
ವಾಲೀ ನಿಗ್ರಹಣಂ ಸಮುದ್ರ ತರಣಂ ||

ಲಂಕಾಪುರಿ ದಾಹನಂ ಪಶ್ಚಾದ್ ರಾವಣ ಕುಂ |
ಭಕರ್ಣ ಹನನಂ ಏತದ್ಧಿ ರಾಮಾಯಣಂ ||

# ಶ್ರೀರಾಮ ಸ್ತೋತ್ರ

ಶ್ರೀರಾಮಚಂದ್ರ ಚರಣೌ ಮನಸಾ ಸ್ಮರಾಮಿ |
ಶ್ರೀರಾಮಚಂದ್ರ ಚರಣೌ ವಚಸಾ ಗೃಣಾಮಿ ||

ಶ್ರೀರಾಮಚಂದ್ರ ಚರಣೌ ಶಿರಸಾ ನಮಾಮಿ |
ಶ್ರೀರಾಮಚಂದ್ರ ಚರಣೌ ಶರಣಂ ಪ್ರಪದ್ಯೆ ||

ಮಾತಾ ರಾಮೋ ಮತ್ಪಿತಾ ರಾಮಚಂದ್ರಃ |
ಸ್ವಾಮಿ ರಾಮೋ ಮತ್ಸಖಾ ರಾಮಚಂದ್ರಃ ||

ಸರ್ವಸ್ವಂ ಮೇ ರಾಮಚಂದ್ರೋ ದಯಾಲುಃ |
ನಾನ್ಯಂ ಜಾನೇನ್ನೈವ ಜಾನೇನ ಜಾನೆ ||

ದಕ್ಷಿಣೇ ಲಕ್ಷ್ಮಣೋ ಯಸ್ಯ ವಾಮೇತು ಜನಕಾತ್ಮಜಾ |
ಪುರತೋ ಮಾರುತಿರ್ಯಸ್ಯ ತಂ ವಂದೇ ರಘುನಂದನಂ ||

ರಘುಪತಿ ರಾಘವ ರಾಜಾರಾಮ |
ಪತಿತ ಪಾವನ ಸೀತಾರಾಮ ||

ಈ ಪುಸ್ತಕವನ್ನು ಎಮ್. ಜಿ. ಪಾಲೇಕರ ಇವರು ವಸಂತ ಮುದ್ರಣಾಲಯದಲ್ಲಿ ಮುದ್ರಿಸಿದರು. ಹಾಗೂ ಜಿ. ಶ್ರೀ. ಕುಲಕರ್ಣಿ ಇವರು ವಾಳಮಟ್ಟಿಯಲ್ಲಿರುವ ತಮ್ಮ ಅಧ್ಯಾತ್ಮ ನಿಲಯದಲ್ಲಿ ಪ್ರಕಟಿಸಿದರು.

ಓಂ

ಶ್ರೀಮತ್ ಪರಮಹಂಸೇತ್ಯಾದಿ ಬಿರುದಾಂಕಿತ

ಶ್ರೀಮಜ್ಜಗದ್ಗುರು

**ಶ್ರೀ ವಿದ್ಯಾಶಂಕರ ಭಾರತಿ ಸ್ವಾಮಿಗಳವರ**

**ಕರಕಮಲ ಸಂಜಾತರಾದ**

ಶ್ರೀರಾಮಚಂದ್ರ ಸ್ವರೂಪವಲ್ಲಿ ತೋರಿದಂಥ

**( ಕೂಡ್ಲಿ - ಶೃಂಗೇರಿ )**

**ಶ್ರೀ ವಾಲುಕೇಶ್ವರ ಭಾರತಿ ಸ್ವಾಮಿಗಳವರ**

ದಿವ್ಯ ಚರಣಸನ್ನಿಧಿಯಲ್ಲಿ

ಸವಿನಯ ಭಕ್ತಿಪೂರ್ವಕವಾಗಿ

**ಈ ಅಲ್ಪ ಕೃತಿಯನ್ನು ಅರ್ಪಿಸಲಾಗಿದೆ**

# ಶ್ರೀರಾಮದೇವರ ಹಾಡು



ರಾಮ ಮೂರ್ತಿ ನೋಡು ಮನವೆ ।
ರಾಮ ಮೂರ್ತಿ ನೋಡಿ ನಿನ್ನ ॥
ಕಾಮ ಕೋಪ ದೂಡು ಮನವೆ ।
ಕಾಮ ಕೋಪ ದೂಡು ॥ ಪಲ್ಲ

ಸೇರು ಸಾಧುಗಳೆಡೆಯನು ।
ಗುರುವೇವ ಭಾವ ಕರುಣಿಪನು ॥
ನಿರಪೇಕ್ಷ ಮನದಿ ಭಜನೆಯನು ಮಾಡಿ ।
ಪರಮ ಶಾಂತಿ ಕೂಡು ಜೀವ ॥ ೧

ಜ್ಞಾನ ಬೇಕು ಭಜಿಪುದಕೆ ।
ಧನ ಮಾನ ಮೋಹ ಹರಿವುದಕೆ ॥
ವಿಷಯಾದಿಗಳನು ಕಳೆವುದಕೆ ನಿನ್ನ ।
ಮನವ ಮುಂದೆ ಮಾಡು ಜೀವ ॥ ೨

ಮೋದ ಮೂರ್ತಿ ರಘುವರನು ।
ಹೃದಯಾಂತರಾಳದೊಳಗಿಹನು ॥
ಸದ್ಬೋಧದಿಂದ ನಿಖಿಲದೊಳು ತೋರ್ಪ ।
ಮುದವ ಕೂಡಿ ನೋಡು ಜೀವ ॥ ೩

ಜಾನಕೀಶನೊಲಿಯುವನು ।
ಮನಸೋತು ಮಾಡು ಭಜನೆಯನು ॥
ಅನುಮಾನ ಬೇಡ ಯೋಗೇಶಾ ಬೇಗ ।
ತನುವ ಮರೆತು ಕೂಡು ಜೀವ ॥ ೪

# ವಿಷಯಾನುಕ್ರಮಣಿಕೆ





## ಭಗವಾನ್ ಶ್ರೀರಾಮ

### ಬಾಲಕಾಂಡ



### ಅಯೋಧ್ಯಾಕಾಂಡ



### ಅರಣ್ಯಕಾಂಡ

## ಕಿಷ್ಕಿಂಧಾಕಾಂಡ



## ಸುಂದರಕಾಂಡ



## ಯುದ್ಧಕಾಂಡ



## ಉತ್ತರಕಾಂಡ





# ಚಿತ್ರಗಳ ಸೂಚಿ

---

# ರಾಮ ನಾಮ

## (ರಾಗ: ಧನಾಸಿ ತಾಳ: ಆಟ)



ರಾಮ ಮಂತ್ರವ ಜಪಿಸೊ, ಹೇ ಮನುಜಾ || ಪಲ್ಲ ||
ಆ ಮಂತ್ರ ಈ ಮಂತ್ರ ನೆಚ್ಚಿ ನೀ ಕೆಡಬೇಡ
ಸೋಮಶೇಖರ ತನ್ನ ಭಾಮಿನಿಗೊರೆದಿಹ || ಅ. ಪಲ್ಲ ||

ಕುಲಹೀನನಾದರೂ ಕೂಗಿ ಜಪಿಸುವ ಮಂತ್ರ
ಸಲಿಬೀದಿಯೊಳು ಉಚ್ಚರಿಪ ಮಂತ್ರವು
ಹಲವು ಪಾಪಂಗಳ ಹತಗೆಡಿಸುವ ಮಂತ್ರ
ಸುಲಭದಿಂದಲಿ ಸ್ವರ್ಗ ಸೂರೆಗೊಂಬುವ ಮಂತ್ರ || ೧ ||

ಸ್ನಾನ ಮೌನಂಗಳಿಗೆ ಸಾಧನದ ಮಂತ್ರ
ಮಾನವರು ಮನದಿ ಧ್ಯಾನಿಪ ಮಂತ್ರ
ಹೀನಗುಣಂಗಳ ಹಿಂಗಿಸುತಿಹ ಮಂತ್ರ
ಏನೆಂಬೆ ವಿಭೀಷಣಗೆ ಪಟ್ಟಗಟ್ಟಿದ ಮಂತ್ರ || ೨ ||

ಸಕಲ ವೇದಗಳಿಗೆ ಸಾರವೆನಿಪ ಮಂತ್ರ
ಮುಕುತಿ ಮಾರ್ಗಕೆ ಇದೇ ಮೂಲ ಮಂತ್ರ
ಭಕುತಿರಸಕೆ ಬಟ್ಟೆಯಾಗಿ ತೋರುವ ಮಂತ್ರ
ಸುಖನಿಧಿ ಪುರಂದರ ವಿಠಲನ ಮಹಾಮಂತ್ರ || ೩ ||

|| ಶ್ರೀ ಶಂಕರಃ ಶರಣಮ್ ||

# ಮುನ್ನುಡಿ



ಸೀತಾ ವಿದ್ಯಾ ಲಿಂಗಿತಾಂಗಂ ಮಹರ್ಷಿಸ್ತೋಮ ಸಂಸ್ತುತಮ್ ।
ತಮಃಶತ್ರು ಗುಣಂ ಯಾಮಃ ಶರಣಂ ರಾಮ ಸದ್ಗುರುಮ್ ॥ ೧ ॥

ಶ್ರೀಮದ್ರಾಮಚಂದ್ರ ಪ್ರಭುವಿನ ದಿವ್ಯ ಚರಿತ್ರಾಮೃತಗಳು ಅನೇಕ ಕಾಲದಿಂದ ಶ್ರೀ ವಾಲ್ಮೀಕಿ, ವಸಿಷ್ಠ, ವಿಶ್ವಾಮಿತ್ರ, ಅಗಸ್ತ್ಯ, ಭರದ್ವಾಜ, ಗೌತಮ ಮುಂತಾದ ಮಹರ್ಷಿಗಳಿಂದ ಬೇರೆ ಬೇರೆಯಾಗಿ ರಚಿಸಲ್ಪಟ್ಟು ಆ ಆ ಮಹಾತ್ಮರ ಹೆಸರಿನಿಂದಲೇ ವಿವಿಧ ರಾಮಾಯಣಗಳು ಪ್ರಸಿದ್ಧವಾಗಿದ್ದರೂ "ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಮ್" ಎಂಬಂತೆ ಪೂರ್ಣವಾದ ಚರಿತ್ರಾಂಶವನ್ನು ತಿಳಿಯುವದು ಮಾನವರಿಗಂತೂ ಅಸಾಧ್ಯವೇ ಆಗಿದೆ. ಆದರೆ "ತಚ್ಚಿಂತನಂ ತತ್ಕಥನ ಮನ್ಯೋನ್ಯಂ ತತ್ಪ್ರಬೋಧನಂ" ಎಂಬ ಭಾಗವತದ ಉಕ್ತಿಗೆ ಅನುಸರಿಸಿ ಶ್ರೀ ಭಗವಂತನ ಚರಿತ್ರವನ್ನು ಪ್ರೇಮದಿಂದ ಓದುವದು, ಬರೆಯುವದು, ಕೇಳುವದು, ಇವು ಅನೇಕ ವಿಧವಾಗಿ ಉಪಾಸನೆಯಲ್ಲಿಯೇ ಕೆಲವು ಪ್ರಕಾರಗಳಿದ್ದು ಇದರಿಂದ ಮನುಷ್ಯನು ಕ್ರಮೇಣ ಭಗವತ್ಪ್ರೀತಿಗೆ ಪಾತ್ರನಾಗುವದರಲ್ಲಿ ಸಂದೇಹವಿಲ್ಲ.

ಶ್ರೀಮದ್ರಾಮಾಯಣದ ಕಥಾಸ್ವಾದವನ್ನು ತೆಗೆದುಕೊಳ್ಳುತ್ತಿರುವಾಗ ಚಿಕ್ಕ ಮಕ್ಕಳಿಂದ ಪ್ರಾರಂಭಿಸಿ ಎಂಥ ಪಂಡಿತ ಪಾಮರರಿಗಾದರೂ, ಕಠಿಣ ಮನಸ್ಸಿನವರಿಗೂ, ಕೆಂಬಹುನಾ ನಾಸ್ತಿಕರಿಗಾದರೂ ಕೆಲವು ಸಂದರ್ಭಗಳಲ್ಲಿ ಮನಸ್ಸಿಗೆ ಪ್ರೇಮ, ಶೋಕ, ಧರ್ಮನಿಷ್ಠೆ, ಸತ್ಯಪರಿಪಾಲನ ಮುಂತಾದ ಎಷ್ಟೋ ವಿಷಯಗಳ ಪರಿಣಾಮವಾಗದೇ ಇರಲು ಸಾಧ್ಯವೇ ಇಲ್ಲ. ಇಂಥ ಮನಸ್ಸಿನ ಸಂಸ್ಕಾರವನ್ನು ಹೊಂದದೇ ಇರತಕ್ಕವರು ಭಾರತೀಯರಲ್ಲಂತೂ ಅತ್ಯಲ್ಪ ಮನುಷ್ಯಾಭಾಸರು ಸಿಗಬಹುದೆಂದು ಅನಿಸುತ್ತದೆ.

ಶ್ರೀಸಮರ್ಥ ರಾಮದಾಸ ಸ್ವಾಮಿಗಳು ಹಾಗೂ ಅವರಂತೆ ಎಷ್ಟೋ ಸಾಧು ಸತ್ಪುರುಷರು ಶ್ರೀರಾಮ ಮಹಾತ್ಮ್ಯೆಯನ್ನು ಅನೇಕ ವಿಧವಾಗಿ ಶಿಷ್ಯರಿಗೆ ಪ್ರತ್ಯಕ್ಷವಾಗಿಯೂ ತೋರಿಸಿದ್ದು ಇತಿಹಾಸ ಪ್ರಸಿದ್ಧವಾಗಿದೆ.

ಪ್ರಸ್ತುತ ಗ್ರಂಥವನ್ನು ಶ್ರೀ ಚಿದಂಬರರಾವ ಕುಲಕರ್ಣಿ ಇವರು ಭಗವದ್ಭಕ್ತಿಯಿಂದಲೂ ಸಾಮಾನ್ಯ ಜನರಿಗೆ ಸುಲಭವಾಗಿ ತಿಳಿಯಬೇಕೆಂಬ ಉಪಕಾರ ಬುದ್ಧಿಯಿಂದಲೂ, ಶ್ರೀಕೃಷ್ಣ, ಶ್ರೀದತ್ತ ಚರಿತ್ರಾದಿಗಳನ್ನು ಪ್ರಕಟಿಸಿದಂತೆ (ಇದನ್ನು) ಈಗ ಭಾವಿಕರ ಮುಂದೆ ಇಡುತ್ತಲಿದ್ದಾರೆ. ಇದನ್ನು ಮೊದಲು ತಾವೇ ಬರೆಯಲಿಕ್ಕೆ ಪ್ರಾರಂಭಿಸಿದರು. ಯದ್ಯಪಿ ಇವರ ಸತ್ಕಾರ್ಯದ ಪ್ರತಿಯೊಂದು ಭಾಗದಲ್ಲಿ ಇವರ ಸಹಧರ್ಮಿಣಿಗೆ ಶಾಸ್ತ್ರೀಯವಾಗಿ ಅರ್ಧ ಫಲಾಂಶವು ಬರುತ್ತಿದ್ದರೂ ಪ್ರತ್ಯಕ್ಷವಾಗಿ ಸೇವೆಯನ್ನು ಸಲ್ಲಿಸುವ ಉದ್ದೇಶದಿಂದ ಮುಂದೆ ಈ ಚರಿತ್ರೆಯನ್ನು ಅವರಕಡೆಯಿಂದ ಬರೆಯಿಸಿದ್ದು ಶ್ರೀ ಕೌಸಲ್ಯಾ, ಅಹಲ್ಯಾದೇವಿ ಮುಂತಾದವರು ಬರೆದ ರಾಮಾಯಣದಂತೆ ಇವರ ಭಕ್ತಿಪೂರ್ವಕ ಸೇವೆಯು ಶ್ರೀರಾಮಚಂದ್ರ ಪ್ರಭುವಿಗೆ ಮುಟ್ಟದೇ ಇರಲಾರದು.

ಈ ಗ್ರಂಥದಲ್ಲಿ ಶ್ರೀ ವಾಲ್ಮೀಕಿ, ಅಧ್ಯಾತ್ಮ, ಆನಂದ ಮುಂತಾದ ಸಂಸ್ಕೃತ ರಾಮಾಯಣಗಳ ಹಾಗೂ ಭಾವಾರ್ಥ ಅಂತರಾರ್ಥ ತುಲಸೀದಾಸ ಮುಂತಾದ ಪ್ರಾಕೃತ ರಾಮಾಯಣಗಳಲ್ಲಿಯ ವಿಶೇಷ ಕಥಾಸಂದರ್ಭಗಳನ್ನು ಅಲ್ಲಲ್ಲಿ ಜೋಡಿಸೋಣದರಿಂದ ಇದು ಭಾವಿಕರಾದ ವಾಚಕರಿಗೆ ಹೆಚ್ಚು ಆಹ್ಲಾದಕರವೂ ಓದುವ ಉತ್ಸುಕತೆಯನ್ನು ಅಭಿವೃದ್ಧಿಗೊಳಿಸುವದೂ ಆಗಿದೆ.

ಶ್ರೀ ವಿಶ್ವಾಮಿತ್ರ ಮಹರ್ಷಿಯು ರಾಮ-ಲಕ್ಷ್ಮಣರನ್ನು ಕರೆದುಕೊಂಡು ಹೋಗುವಾಗ್ಗೆ ಶ್ರೀರಾಮಚಂದ್ರನಿಗೆ ಶ್ರೀ ವಸಿಷ್ಠ ಗುರುಗಳು ಮಾಡಿದ ಆತ್ಮಜ್ಞಾನೋಪದೇಶವು; ಶ್ರೀರಾಮಚಂದ್ರರು ಅರಣ್ಯಕ್ಕೆ ಹೋಗುವಾಗ್ಗೆ ಅಯೋಧ್ಯಾ ಪಟ್ಟಣದ ಸ್ಥಿತಿ; ಹಾಗೂ ಭರತ ಕೈಕೇಯಿ ಸಂವಾದ; ಮುಂದೆ ಭರತ ಶ್ರೀರಾಮಚಂದ್ರರ ಭೇಟಿ, ಈ ವಿಷಯಗಳನ್ನು ಓದುವ ಮುಂದೆ ಎಂಥವರಿಗೂ ಮನಸ್ಸಿಗೆ ಪರಿಣಾಮವಾಗುವದರಲ್ಲಿ ಸಂದೇಹವಿಲ್ಲ. ಜಾಬಾಲಿ ಋಷಿಯು ಪರೀಕ್ಷಾರ್ಥವಾಗಿ ನಾಸ್ತಿಕ ವಾದವನ್ನು ಶ್ರೀರಾಮಚಂದ್ರನಿಗೆ ಹೇಳಲು ಅದನ್ನು ಶ್ರೀರಾಮಚಂದ್ರನು ಖಂಡಿಸಿದ್ದು, ಮುಂದೆ ಅನೇಕ ರಾಕ್ಷಸರ ಸಂಹಾರದ ವಿಶೇಷ ಕಥೆಗಳು, ವಾಲೀ ಸುಗ್ರೀವರ ಪೂರ್ವಾಪರ ಆಖ್ಯಾಯಿಕೆಯು, ಶ್ರೀ ಮಾರುತಿಯ ಸಾಹಸ, ಭಕ್ತಿ ಮುಂತಾದವುಗಳು; ಶ್ರೀ ಸೀತಾಮಾತೆಯ ಅಚಲವಾದ ಪಾತಿವ್ರತ್ಯ, ಯುದ್ಧ ಪ್ರಸಂಗದಲ್ಲಿಯ ಚಮತ್ಕಾರ

ವಾದ ಸಂದರ್ಭಗಳು, ಶ್ರೀರಾಮೇಶ್ವರ ಸ್ಥಾಪನೆಯ ಸಮಯದಲ್ಲಿ ಮಾರುತಿಯ ಗರ್ವಹರಣ, ಹಾಗೂ ವೇದಾಂತೋಪದೇಶ, ಪುನಃ ಪುಷ್ಪಕವಿಮಾನದಿಂದ ಬರುವಾಗ್ಗೆ ಅರಣ್ಯದಲ್ಲಿಯ ಆ ಆ ಗುರುತಿನ ಪ್ರದೇಶಗಳ ವರ್ಣನೆ, ರಾಮಾಶ್ವಮೇಧ, ಲವ-ಕುಶರ ಬಾಲಲೀಲೆಗಳು, ಶ್ರೀ ವಾಲ್ಮೀಕಿ ಮಹರ್ಷಿಗಳ ಮಹಾತ್ಮೆಯು ಮುಂತಾದ ಅನೇಕ ವಿಷಯಗಳನ್ನು ನೋಡಿದಲ್ಲಿ ಎಂಥ ಆಲಸಿಗಳಿಗೂ ಕೂಡ ಉತ್ಸಾಹಜನಕವಾಗಿರುವದರಲ್ಲಿ ಸಂದೇಹವಿಲ್ಲ. ಇಂಥ ಚರಿತ್ರಾಮೃತವನ್ನು ಓದುಗರ ಸಲುವಾಗಿ ಮಧುರ ಭಾಷೆಯಲ್ಲಿ ಸಂಕ್ಷಿಪ್ತವಾಗಿ ರಚಿಸಿದ್ದಕ್ಕೆ ವಾಚಕರು ಯಥಾಶಕ್ತಿ ಲಾಭವನ್ನು ತೆಗೆದುಕೊಂಡು ಓದುವದರಿಂದಲೂ ಸಾಧ್ಯವಾದ ಮಟ್ಟಿಗೆ ಅದರಲ್ಲಿಯ ಉಪದೇಶಗಳನ್ನು ಲಕ್ಷ್ಯದಲ್ಲಿಟ್ಟು ಆಚರಿಸುವದರಿಂದಲೂ, ಅವರ ಈ ಶ್ರಮವನ್ನು ಪರಿಹರಿಸಬೇಕಾಗಿ ಆಶಿಸುತ್ತೇವೆ. ಶ್ರೀಭಗವಂತನ "ತತ್ಕುರುಷ್ವಮದರ್ಪಣಮ್" ಎಂಬ ಗೀತೋಕ್ತಿಯಂತೆ ಲೇಖಕರು ಮಾಡಿದ ಭಗವತ್ಸೇವೆಯಿಂದ ಸರ್ವಾಂತರ್ಯಾಮಿ ಶ್ರೀ ಪರಮಾತ್ಮನು ಸಂತುಷ್ಟನಾಗಿ ಅವರಿಗೆ ಸದ್ಬುದ್ಧಿಯನ್ನು ಹೆಚ್ಚಿಸಲೆಂದೂ ಪ್ರಾರ್ಥಿಸುತ್ತೇವೆ.

ಇಲ್ಲಿ ಶ್ರೀಮದ್ರಾಮಾಯಣದ ಜೊತೆಗೆ ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತ ಶ್ರೀಮಜ್ಜಗದ್ಗುರು ಪಾಲುಕೇಶ್ವರ ಭಾರತಿಮಹಾಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆಯನ್ನು ಸೇರಿಸಲಾಗಿದೆ. ಶ್ರೀರಾಮ ಚರಿತ್ರದ ಸಂಗಡ ಶ್ರೀಗಳವರ ವಿಷಯವನ್ನು ಪ್ರಕಟಿಸುವದು ಉಚಿತವೋ? ಎಂದು ಕೆಲವು ಅಪರಿಚಿತರಿಗೆ ಭಾಸವಾಗುವ ಸಂಭವವಿರಬಹುದು. ಆದರೆ ಹರಿಕೀರ್ತನದಲ್ಲಿ ಭಗವಚ್ಚರಿತ್ರ ಮಹಾತ್ಮೆಯನ್ನು ಹೇಳುವಾಗ್ಗೆ ಅದರ ಮಹಿಮೆಯಿಂದ ಉದ್ಧೃತರಾದ ಸತ್ಪುರುಷರ ದೃಷ್ಟಾಂತವನ್ನು ನಿರೂಪಿಸುವದುಹೇಗೆ ಪ್ರಸಿದ್ಧವಾಗಿದೆಯೋ ಅದರಂತೆ ಯಾವಾಗಲೂ ರಾಮನಾಮ, ಜಪ, ಧ್ಯಾನ, ಅನುಸಂಧಾನ, ನಿರೂಪಣ ಮುಂತಾದ ಅನೇಕವಿಧ ಉಪಾಸನೆಗಳಿಂದ ಸಾಧಕಾವಸ್ಥೆಯನ್ನು ಪೂರ್ಣಗೊಳಿಸುತ್ತಿದ್ದು ಹಾಗು ಬ್ರಹ್ಮಚರ್ಯ, ಯೋಗಾಭ್ಯಾಸ, ಅನನ್ಯ ಸಾಧಾರಣವಾದ ತುರೀಯಾಶ್ರಮ, ಜಗದ್ಗುರು ಪೀಠಾದಿರೋಹಣ ಮತ್ತು ವೈರಾಗ್ಯಾತಿಶಯದಿಂದ ಅದರ ತ್ಯಾಗ, ಜಗತ್ಕಲ್ಯಾಣಕ್ಕೋಸ್ಕರ ಶ್ರೀ ಸಹಸ್ರಚಂಡೀ ಯಾಗ, ಶ್ರೀ ಮಹಾಸಾಮ್ರಾಜ್ಯ ಪಟ್ಟಾಭಿಷೇಕ, ಶ್ರೀಶಂಕರ ಭಗವತ್ಪಾದಾಚಾರ್ಯರ

ಪ್ರತಿಷ್ಠಾ ಮುಂತಾದ ಅನೇಕ ಮಹಾ ಕಾರ್ಯಗಳನ್ನು ಇಂಥ ವಿಷಮ ಕಾಲ ದಲ್ಲಿಯೂ ಯಥಾಸ್ಥಿತವಾಗಿ ಜರುಗಿಸಿದ್ದು, ಈ ಎಲ್ಲವುಗಳಿಂದ ಶ್ರೀರಾಮಚಂ ದ್ರಾನುಗ್ರಹವನ್ನು ವ್ಯಕ್ತಪಡಿಸುತ್ತಿದ್ದ ಈ ಮಹನೀಯರ ಚರಿತ್ರವನ್ನು ತಿಳಿ ಯುವದು ಐತಿಹಾಸಿಕ ದೃಷ್ಟಿಯುಳ್ಳ ಈಗಿನ ಜನತೆಗೆ ಅವಶ್ಯವೆಂದು ತೋರು ವದರಲ್ಲಿ ಸಂದೇಹವಿಲ್ಲ. ಇವರ ಚರಿತ್ರಗಳಲ್ಲಿಯ ಸದ್ಗುರೂಪದೇಶ, ಸಾಧನ ಸಂಪತ್ತು, ಶಿಷ್ಯಾನುಗ್ರಹ, ವಿರಕ್ತಿ ಈ ಪ್ರಕರಣಗಳಂತೂ ಇವರ ಮಹಿಮೆ ಯನ್ನು ತೋರಿಸುವದಲ್ಲದೆ ಆಶ್ಚರ್ಯಕಾರಕಗಳೂ ಶ್ರೀಗಳವರಲ್ಲಿಯ ಪೂಜ್ಯ ಭಾವನೆಯನ್ನು ಹೆಚ್ಚಿಸುವಂಥವುಗಳೂ ಆಗಿವೆ. ಅವರು ಭಕ್ತರ ಭಾವನಾನು ರೂಪವಾಗಿ ದೃಷ್ಟಾಂತಗಳನ್ನು ತೋರಿಸುವದೂ ಕೂಡ ಪ್ರಸಿದ್ಧವಾಗಿದೆ. ಅಂಥವರ ಪ್ರೇರಣೆಯಿಂದ ಹಾಗೂ ಅವರ ಸಾಕ್ಷಾತ್ ಉಪದೇಶಾಮೃತಗಳಿಂದ ಅನುಗೃಹಿತರಾದ ಲೇಖಕರು ಅವರ ಮುಖದಿಂದಲೇ ಬಂದ ಎಷ್ಟೋ ವಿಷಯ ಗಳನ್ನು ಕಾಣಿಸಿರುವದರಿಂದ ಈ ಚರಿತ್ರೆಯು ವಿಶೇಷವಾಗಿ ವಿಶ್ವಸನೀಯವೂ ಶ್ಲಾಘನೀಯವೂ ಆಗಿದೆ. ಕಾರಣ ಶ್ರೀರಾಮಚರಿತ್ರೆಯನ್ನು ಅದರ ಜೊತೆಗೆ ಶ್ರೀರಾಮೋಪಾಸಕರಾದ ಶ್ರೀಗಳವರ ಚರಿತ್ರೆಯನ್ನು ಒಟ್ಟಿಗೆ ಪ್ರಕಟಿಸಿ ಭಾವಿ ಕರಿಗೆ ವಿಶೇಷ ಉಪಕಾರ ಮಾಡುವ ಈ ದಂಪತಿಗಳಿಗೆ ಶ್ರೀಸದ್ಗುರು ರಾಮ ಚಂದ್ರ ಸ್ವಾಮಿಯು ಇತೋಪ್ಯಧಿಕವಾಗಿ ಸತ್ಕಾರ್ಯ ನಿಷ್ಠೆಯನ್ನು ದಯಪಾ ಲಿಸಿ ಆಯುರಾರೋಗ್ಯಾದಿ ಐಹಿಕವನ್ನು ಪರಮಾರ್ಥ ಪರಾಯಣತೆಯನ್ನು ಅನುಗ್ರಹಿಸಲೆಂದು ಶ್ರೀರಾಮಚಂದ್ರ ಪರಬ್ರಹ್ಮ ಮೂರ್ತಿಯಲ್ಲಿ ಯಾವಾಗಲೂ ಸದಂತಃಕರಣದಿಂದ ಪ್ರಾರ್ಥಿಸುತ್ತೇವೆ.

೧೮೭೩
ಖರಸಂವತ್ಸರ
ಶ್ರೀಗಣೇಶ ಚತುರ್ಥಿ
ಬುಧವಾರ

**ಭಾಲಚಂದ್ರ ಶಾಸ್ತ್ರಿ ಉಪ್ಪಿನಬೆಟಗೇರಿ**
ಪ್ರಧಾನಾಧ್ಯಾಪಕ
ಶ್ರೀಮಜ್ಜಗದ್ಗುರು ಶಂಕರಾಚಾರ್ಯ
ಸಂಸ್ಕೃತ ಪಾಠಶಾಲಾ, ಧಾರವಾಡ

# ನನ್ನ ನುಡಿ



ಸೃಷ್ಟಿಕರ್ತನ ವಿಷಯವಾಗಿ ಪ್ರೇಮ, ಆದರ, ಭಕ್ತಿ, ವಿಶ್ವಾಸಗಳನ್ನು ಜನರಲ್ಲಿ ನೆಲೆಗೊಳಿಸುವದಕ್ಕಾಗಿ "ಭಗವಾನ್ ಶ್ರೀಕೃಷ್ಣ", "ಗುರು ಚರಿತ್ರ", "ದತ್ತ ಮಹಾತ್ಮ್ಯ" ಮುಂತಾದ ಗ್ರಂಥಗಳನ್ನು ಪ್ರಕಟಿಸಿ ಆಯಿತು. ಅದ ರಂತೆ "ಭಗವಾನ್ ಶ್ರೀರಾಮ" ಎಂಬ ಪುಸ್ತಕವನ್ನು, ಶ್ರೀರಾಮನು ಕೇವಲ ಐತಿಹಾಸಿಕ ಪುರುಷನಾಗಿರದೆ ಪರಮಾತ್ಮನ ಪೂರ್ಣಾವತಾರವೆಂಬುದನ್ನು ತೋರಿಸುವದಕ್ಕಾಗಿ ಈ ಕೃತಿಯನ್ನು ಕೈಯಲ್ಲಿ ತೆಗೆದುಕೊಂಡೆ. ಅದರ ಪರೀ ಕ್ಷೆಯ ಕಾಲವು ಒದಗಿ ಬಂದಿತು. ಸೀತಾ–ರಾಮರ ಚರಿತ್ರೆಯನ್ನು ಅರಿಯ ದವರೇ ಇಲ್ಲ.ಆದರೆ ಪರಮಾತ್ಮನಲ್ಲಿ ಅನಂತ ಶಕ್ತಿಗಳಿವೆ ಎಂಬುದನ್ನು ತೋರಿಸು ವದಕ್ಕಾಗಿ ಹೊಸ ದೃಷ್ಟಿಯಿಂದ ಬರೆಯುವ ಪ್ರಯತ್ನದ ಸಂಕಲ್ಪ ಮಾಡಿದೆ. ಅದರಂತೆ ಮೊದಲನೆಯ ಪ್ರಕರಣವನ್ನು ಬರೆದು ಮುಗಿಸಿಯೂ ಆಯಿತು. ಕಿರಾತನಂಥ ಕೊಲೆಗಡಕನು ರಾಮನಾಮ ಸ್ಮರಣೆಯಿಂದ ವಾಲ್ಮೀಕಿ ಮಹ ರ್ಷಿಯಾಗಿ ಒಂದು ಸಾವಿರ ವರುಷದ ಮೇಲೆ ಜರುಗಿದ ಶ್ರೀರಾಮಕಥೆಯನ್ನು ಮೊದಲೇ ಕಾವ್ಯ ರೂಪದಲ್ಲಿ ರಚಿಸಿದನು. ಅದು ಇಂದಿಗೂ ಆದಿಕಾವ್ಯವಾಗಿ ಪರಿಣಮಿಸಿದೆ. ಅಂದಮೇಲೆ ಶ್ರೀರಾಮ ಕಥೆಯನ್ನು ಭಕ್ತಿಯಿಂದ ಆತನ ನಾಮವನ್ನು ಸ್ಮರಿಸುತ್ತ ಯಾರು ಬರೆದರೂ ಅದು ಪವಿತ್ರವಾದುದಾಗುವ ದೆಂದು ಮನಗಂಡು ಶ್ರೀರಾಮನ ಪ್ರೇರಣೆಯಿಂದ ನನ್ನ ಸಹಧರ್ಮಿಣಿಗೆ ಇದನ್ನು ಬರೆಯಲು ಸೂಚಿಸಿದೆ. ಆದರಂತೆ ಆಕೆಯು ಶ್ರೀರಾಮನನ್ನು ನೆನೆ ಯುತ್ತ ಶ್ರೀರಾಮಚಂದ್ರ ಚರಣಗಳಲ್ಲಿ ಸಕಲ ಭಾರವನ್ನಿಟ್ಟು ರಾಮಾಯಣ ವನ್ನು ಬರೆದು ಮುಗಿಸಿದಳು. ಅದೇ ಪುಸ್ತಕವು ಈಗ ಶ್ರೀರಾಮನ ಅನುಗ್ರಹ ದಿಂದ ವಾಚಕರ ಕೈಸೇರುತ್ತಲಿದೆ. ಪರಮಾತ್ಮನ ಅನುಗ್ರಹವಾದರೆ ತೃಣವು ಪರ್ವತವಾಗುವಲ್ಲಿ ಏನಾಶ್ಚರ್ಯ ? ವಾಚಕರು ಭಾವನಾಪ್ರಧಾನರಾಗಿ ಬರೆದ ಈ ಗ್ರಂಥವನ್ನು ಹಂಸಕ್ಷೀರ ನ್ಯಾಯದಂತೆ ನಿರೀಕ್ಷಿಸಬೇಕೆಂದು ನನ್ನ ನಮ್ರ ಪ್ರಾರ್ಥನೆ.

ಶ್ರೀ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನನಿಷ್ಟ ತಪಶ್ಚಕ್ರ ವರ್ತ್ಯನಾದ್ಯ ವಿಚ್ಛಿನ್ನ ಗುರುಪರಂಪರಾಪ್ರಾಪ್ತ ಷಟ್ದರ್ಶನ ಸ್ಥಾಪನಾಚಾರ್ಯ ವ್ಯಾಖ್ಯಾನ ಸಿಂಹಾಸನಾಧೀಶ್ವರ ಸಕಲ ವೇದಾರ್ಥ ಪ್ರಕಾಶಕ ಸಾಂಖ್ಯತ್ರಯಿ ಪ್ರತಿಪಾದಕ ಸಕಲ ನಿಗಮಾಗಮಸಾರ ಹೃದಯ ವೈದಿಕ ಮಾರ್ಗಪ್ರವರ್ತಕ ಸರ್ವತಂತ್ರ ಸ್ವತಂತ್ರಾದಿ ರಾಜಧಾನಿ ವಿದ್ಯಾನಗರ ಮಹಾರಾಜಧಾನಿ ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರುಭೂಮಂಡಲಾಚಾರ್ಯ ತುಂಗಭದ್ರಾ ತೀರ ವಾಸ ಋಷ್ಯಶೃಂಗ ಪುರವರಾಧೀಶ್ವರ ಶೃಂಗೇರಿ ಶ್ರೀ ವಿದ್ಯಾಶಂಕರ ದೇವ ದಿವ್ಯ ಶ್ರೀಪಾದ ಪದ್ಮಾರಾಧಕ ಕೂಡ್ಲಿ ಶೃಂಗೇರೀ ಶ್ರೀಮಜ್ಜಗದ್ಗುರು ಶ್ರೀ ವಿದ್ಯಾಶಂಕರ ಭಾರತಿ ಸ್ವಾಮಿನಾಂ ಕರಕಮಲ ಸಂಜಾತ ಕೂಡ್ಲಿ ಶೃಂಗೇರಿ ಶ್ರೀ ವಾಲುಕೇಶ್ವರ ಭಾರತಿ ಸ್ವಾಮಿಗಳವರು ಶ್ರೀರಾಮ ಧ್ಯಾನದಿಂದ ರಾಮರೂಪರಾಗಿ ತೋರುತ್ತ, ಶ್ರೀರಾಮ ಪ್ರಭುವಿನಂತೆ ಅತ್ಯದ್ಭುತ ಕಾರ್ಯಗಳನ್ನು ಮಾಡುತ್ತ ನಿಜ ಭಕ್ತರನ್ನುದ್ಧರಿಸುತ್ತ ಗುಪ್ತವಾಗುತ್ತಲೂ ಪ್ರಕಟವಾಗುತ್ತಲೂ ಇರುವರು. ಶ್ರೀಗಳವರ ದರ್ಶನದ ಲಾಭವು ಧಾರವಾಡದ ನಾಗರಿಕರಿಗೆ ಒದಗುವ ಸುಯೋಗವು ಬಂದಿತು. ವೇ|| ಬಾಲಚಂದ್ರ ಶಾಸ್ತ್ರಿಗಳವರು ಸಂಸ್ಕೃತ ಪಾಠಶಾಲೆಯ ಹೀರಕ ಮಹೋತ್ಸವಕ್ಕಾಗಿ ಯೋಗ್ಯ ಅಧ್ಯಕ್ಷರನ್ನು ಹುಡುಕುವದರಲ್ಲಿದ್ದರು. ಆದರೆ ಧಾರವಾಡ ನಿವಾಸಿಗಳ ಪುಣ್ಯಾಂಶದಿಂದ ಶಾಸ್ತ್ರಿಗಳಿಗೆ ಶ್ರೀಗಳವರನ್ನು ಧಾರವಾಡಕ್ಕೆ ಕರೆದುಕೊಂಡು ಬಂದು ಪ್ರಕಟ ಮಾಡುವ ಪ್ರೇರಣೆಯಾಯಿತು. ಆ ರೀತಿ ವಿಕೃತಿನಾಮ ಸಂವತ್ಸರ ಮಾಘ ಮಾಸದಲ್ಲಿ (ಫೆಬ್ರುವರಿ ೧೯೫೧ ನೇ ಇಸ್ವಿ) ಶ್ರೀಗಳವರು ಧಾರವಾಡಕ್ಕೆ ದಯಮಾಡಿಸಿ ಶ್ರೀರಾಮಚಂದ್ರ ಮಹಾಸಾಮ್ರಾಜ್ಯ ಪಟ್ಟಾಭಿಷೇಕ ಮಹೋತ್ಸವ, ಶತಚಂಡಿ ಹೋಮ, ಅದ್ವೈತ ಬ್ರಹ್ಮವಿದ್ಯಾ ಪರಿಷತ್ತುಗಳನ್ನು ಬಹು ವಿಜೃಂಭಣೆಯಿಂದ ತಮ್ಮ ಸ್ವಂತ ಖರ್ಚಿನಿಂದ ನೆರವೇರಿಸಿ ಪ್ರತಿಸೂರ್ಯನಂತೆ ಪ್ರಕಾಶಿಸಿದರು. ಇಂಥ ಕಾರ್ಯಗಳನ್ನು ಕಲಿಕಾಲದಲ್ಲಿ ಸಾಂಗವಾಗಿ ಕೊನೆಗಾಣಿಸುವದು ಮಹಾತ್ಮರಲ್ಲದೆ ಇತರರಿಗೆ ಅಸಾಧ್ಯವಾದುದು. ಆಗ ಶ್ರೀಗಳವರ ಬಗ್ಗೆ ತಿಳಿದು

ಕೊಳ್ಳಬೇಕೆಂಬ ಕುತೂಹಲವು ಪ್ರತಿಯೊಬ್ಬ ಕನ್ನಡಿಗನಲ್ಲಿ ಜನಿಸಿತು. ಸಮುದ್ರದಂತಿರುವ ಗುರು ಚರಿತ್ರೆಯನ್ನು ನೊಣದಂತಿರುವ ನಾವು ಎಷ್ಟು ಸಂಗ್ರಹಿಸಲು ಸಾಧ್ಯ? ಆದರೂ ಅವರ ವಿಶೇಷ ಕೃಪಾಪ್ರಭಾವದಿಂದಲೇ ಈ ಗ್ರಂಥವು ಪೂರ್ಣವಾದ ಮೂಲಕವೂ ಹಾಗೂ ಯಾವಾಗಲೂ ಅವರು ಶ್ರೀ ರಾಮಚಂದ್ರ ಸ್ವರೂಪದಲ್ಲಿಯೇ ತೋರುತ್ತಿರುವದರಿಂದಲೂ ಅವರ ಅಲ್ಪ ಪರಿಚಯವನ್ನು ಈ ಪುಸ್ತಕದಡಿಯಲ್ಲಿ ಸೇರಿಸಿದರೆ ಅಪ್ರಾಸಂಗಿಕವಾಗಲಾರದೆಂದು ತಿಳಿದು ಆದರಂತೆ ಮಾಡಲಾಗಿದೆ.

ಶ್ರೀಗಳವರ ಚರಿತ್ರೆಯನ್ನು ಬರೆಯುವದರಲ್ಲಿ ತುಂಬಾ ಸಹಾಯ ನೀಡಿ ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟು ಪ್ರೋತ್ಸಾಹಿಸಿದಂಥ ಬ್ರಹ್ಮಶ್ರೀ ಪಂಡಿತಾವತಾಂಶ ಶ್ರೀಮತ್ಪೂಜ್ಯ ಭಾಲಚಂದ್ರ ಶಾಸ್ತ್ರಿ ಉಪ್ಪಿನ ಬೆಟಗೇರಿ ಪ್ರಧಾನಾಧ್ಯಾಪಕ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಸಂಸ್ಕೃತ ಪಾಠಶಾಲಾ, ಧಾರವಾಡ ಇವರ ಆಭಾರವನ್ನು ಎಷ್ಟು ಮನ್ನಿಸಿದರೂ ಕಡಿಮೆಯೇ.

ಈ ಗ್ರಂಥ ಪ್ರಕಾಶನಕ್ಕೆ ತನು, ಮನಧನಗಳಿಂದ ಸೇವೆ ಸಲ್ಲಿಸಿ ಸಹಾಯ ನೀಡಿದ ಶ್ರೀ ಎಮ್. ಜಿ. ಪಾಲೇಕರ . ಜನರಲ್ ಮ್ಯಾನೇಜರ ವಸಂತ ಪ್ರೆಸ್ ಇವರಿಗೆ ಶ್ರೀರಾಮಚಂದ್ರನು ಅನುಗ್ರಹಿಸಲೆಂದು ಆತನ ಅಡಿದಾವರೆ ಪ್ರಾರ್ಥಿಸುವೆವು.

ಸಜ್ಜನ ವಿಧೇಯ,

**ಚಿದಂಬರ ಶ್ರೀಪಾದ ಕುಲಕರ್ಣಿ**

# ಆತ್ಮನಿವೇದನೆ



ಪ್ರಿಯ ವಾಚಕರೇ, ನಾನೇನು ಬಹು ಜಾಣೆಯಲ್ಲ. ನಾನು ನಾಲ್ಕನೇ ಇಯತ್ತೆಯ ವರೆಗೆ ಓದಿದವಳು. ಆದರೆ ನನಗೆ ಮೊದಲಿನಿಂದಲೂ ಶ್ರೀರಾಮ ಚರಿತ್ರೆ, ಶ್ರೀಕೃಷ್ಣ ಚರಿತ್ರೆ, ಶ್ರೀಮದ್ಭಾಗವತ, ಮಹಾಭಾರತ ಇತ್ಯಾದಿ ಗ್ರಂಥಗಳನ್ನು ಓದುವ ಹವ್ಯಾಸವು ಬಹಳ ಇದ್ದಿತು. ಅದರಲ್ಲಿಯೂ ಸಹ ನನಗೆ ರಾಮಾಯಣವೆಂದರೆ ಬಹಳ ಪ್ರಿಯವಾದದ್ದಿರುತ್ತದೆ. ಕಾರಣ ನನಗೆ ಬಹಳ ದಿವಸಗಳಿಂದಲೂ ರಾಮಾಯಣವನ್ನು ಜನಸಾಮಾನ್ಯರಿಗೆ ತಿಳಿಯುವಂತೆ ಬರೆಯಬೇಕೆಂಬ ಆಶೆ ಇದ್ದಿತು. ಆ ಆಶೆಯು ಕೈಗೂಡುವ ಬಗೆ ಹೇಗೆಂದು ಆಲೋಚಿಸುತ್ತಿದ್ದೆ. ಏಕೆಂದರೆ ನಾನು ಮರಾಠಿ ಓದಿದವಳು. ಆದ್ದರಿಂದ ಕನ್ನಡದಲ್ಲಿ ಸರಿಯಾಗಿ ಬರೆಯಲು ಹೇಗೆ ಬರುವದೆಂದು ಚಿಂತಿತಳಾದೆ. ನನ್ನ ಪತಿದೇವರು "ನೀನು ರಾಮಾಯಣವನ್ನು ಬರೆ" ಎಂದು ಹೇಳಿದರು. ನಾನು ಮನದಲ್ಲಿ ಧೈರ್ಯವನ್ನು ತಂದುಕೊಂಡೆ. ಶ್ರೀರಾಮ ಚಂದ್ರನನ್ನು ನೆನೆದೆ. ಅವನ ಮೇಲೆ ಭಾರವನ್ನಿಟ್ಟೆ. ನನ್ನ ಪರಮಪೂಜ್ಯ ಗುರುಗಳಾದ ಶ್ರೀ ಮಾಧವೇಶ್ವರ ಭಾರತಿ ಸ್ವಾಮಿಗಳನ್ನು ಮನದಲ್ಲಿ ಬಹುಮನ ಯಾಗಿ ಪ್ರಾರ್ಥಿಸಿಕೊಂಡೆ. ಮುಂದೆ ಶ್ರೀರಾಮ ಚರಿತ್ರೆಯನ್ನು ಬರೆಯಲು ಪ್ರಾರಂಭಿಸಿದೆ. ಅವರ ಗುರು ಅನುಗ್ರಹದಿಂದಲೂ, ಶ್ರೀರಾಮಚಂದ್ರನ ಕೃಪೆ ಯಿಂದಲೂ ಕೊನೆಗಾಣಿತು. ಇಂಥ ಸುಯೋಗವನ್ನು ಒದಗಿಸಿಕೊಟ್ಟ ನನ್ನ ಪತಿದೇವರಿಗೆ ಚಿರಋಣಿಯಾಗಿರುವೆನು. ಇವರೇ ಜನ್ಮ ಜನ್ಮಾಂತರ ದಲ್ಲಿಯೂ ನನಗೆ ಪತಿಯಾಗಿ ದೊರಕಲೆಂದು ಶ್ರೀರಾಮಚಂದ್ರನನ್ನು ಬೇಡಿ ಕೊಳ್ಳುತ್ತೇನೆ. ಈ ಕೃತಿಯನ್ನು ತಾವೆಲ್ಲರೂ ಓದಿಕೊಂಡು ತಪ್ಪು ಒಪ್ಪುಗಳನ್ನು ಲೆಕ್ಕಿಸದೆ ನನಗೆ ಸಹಾಯವನ್ನು ನೀಡುವಿರೆಂದು ಆಶಿಸುವೆ.

ತಮ್ಮ

ಶ್ರೀರಾಮಚಂದ್ರನ ಸೇವಕಳಾದ,

**ಸೌ. ಸರಸ್ವತೀಬಾಯಿ ಕುಲಕರ್ಣಿ**

## ಶ್ರೀ ಕೂಡ್ಲಿ ಶೃಂಗೇರೀ ಶ್ರೀಮಜ್ಜಗದ್ಗುರು



ಶ್ರೀಮತ್ಪರಮಹಂಸ ಇತ್ಯಾದಿ ಬಿರುದಾಂಕಿತರಾದ

**ಶ್ರೀ ವಾಲುಕೇಶ್ವರಭಾರತಿ ಸ್ವಾಮಿಗಳವರು**

ಶ್ರೀಮಜ್ಜಗದ್ಗುರು

# ಶ್ರೀ ನಾಲುಕೇಶ್ವರ ಭಾರತಿ ಮಹಾಸ್ವಾಮಿಗಳವರು

( ಲೇಖಕ: ಚಿದಂಬರ ಶ್ರೀಪಾದ ಕುಲಕರ್ಣಿ )



ಗುರುರ್ಬ್ರಹ್ಮಾ ಗುರುರ್ವಿಷ್ಣುಃ ।
ಗುರುರ್ದೇವೋ ಮಹೇಶ್ವರಃ ।
ಗುರುಃ ಸಾಕ್ಷಾತ್ ಪರಂಬ್ರಹ್ಮ ।
ತಸ್ಮೈ ಶ್ರೀ ಗುರವೇ ನಮಃ ॥

## ಜನನ ಮತ್ತು ಬಾಲ್ಯ

ವರ್ಣಾಶ್ರಮ ಧರ್ಮಗಳು ಆರ್ಯ ಜನರ ಆತ್ಮಜ್ಞಾನದ ಅಂಗಗಳು. ಶ್ರೀಕೃಷ್ಣ ಪರಮಾತ್ಮನು ಅರ್ಜುನನು ತನ್ನ ಕ್ಷತ್ರಿಯ ಧರ್ಮವಾದ ಯುದ್ಧವನ್ನು ಬಿಟ್ಟು ಕ್ಲೀಬನಂತೆ ಸುಮ್ಮನೆ ಇರಲು ವರ್ಣಾಶ್ರಮ ಧರ್ಮವನ್ನು ಸ್ಥಾಪನೆ ಮಾಡಲು ಭಗವದ್ಗೀತೆಯನ್ನು ಬೋಧಿಸಿದ್ದಲ್ಲದೇ ತಾನೂ ಸಹ ವರ್ಣಾಶ್ರಮ ಧರ್ಮಗಳನ್ನು ಆಚರಿಸಿ ಜಗತ್ತಿಗೆ ಮಾರ್ಗದರ್ಶನ ಮಾಡಿತೋರಿಸಿದನು. ಜಗತ್ತಿನಲ್ಲಿ ಅಧರ್ಮವು ಹೆಚ್ಚಾದಾಗ ಭಗವಂತನು ಅವತಾರತಾಳಿ ಧರ್ಮೋದ್ಧಾರದ ಕಾರ್ಯವನ್ನು ಮಾಡುವನು. ಅಂದಿನಿಂದ ಇಂದಿನ ವರೆಗೆ ಭಾರತದಲ್ಲಿ ಎಷ್ಟೋ ಅವತಾರಗಳಾಗಿವೆ. ಅನೇಕ ಸಾಧುಸಂತರೂ, ಮಹಾಪುರುಷರೂ ಜನಿಸಿ ಪರಮೇಶ್ವರನ ಕಾರ್ಯಕ್ಕೆ ನೆರವಾಗಿದ್ದಾರೆ. ಅಂಥ ಭಗವದ್ಭಕ್ತರಿಗಾಗಿಯೇ ಭೂಮಿತಾಯಿಯು ಹೇರಳ ಫಲ-ಪುಷ್ಪ, ದವಸ-ಧಾನ್ಯಗಳನ್ನು

ಶ್ರೀಮಜ್ಜಗದ್ಗುರು

# ಶ್ರೀ ನಾಲುಕೇಶ್ವರ ಭಾರತಿ ಮಹಾಸ್ವಾಮಿಗಳವರು

( ಲೇಖಕ: ಚಿದಂಬರ ಶ್ರೀಪಾದ ಕುಲಕರ್ಣಿ )



**ಗುರುರ್ಬ್ರಹ್ಮಾ ಗುರುರ್ವಿಷ್ಣುಃ ।**
**ಗುರುರ್ದೇವೋ ಮಹೇಶ್ವರಃ ।**
**ಗುರುಃ ಸಾಕ್ಷಾತ್ ಪರಂಬ್ರಹ್ಮ ।**
**ತಸ್ಮೈ ಶ್ರೀ ಗುರವೇ ನಮಃ ॥**

## ಜನನ ಮತ್ತು ಬಾಲ್ಯ

ವರ್ಣಾಶ್ರಮ ಧರ್ಮಗಳು ಆರ್ಯ ಜನರ ಆತ್ಮಜ್ಞಾನದ ಅಂಗಗಳು. ಶ್ರೀಕೃಷ್ಣ ಪರಮಾತ್ಮನು ಅರ್ಜುನನು ತನ್ನ ಕ್ಷತ್ರಿಯ ಧರ್ಮವಾದ ಯುದ್ಧವನ್ನು ಬಿಟ್ಟು ಕ್ಲೀಬನಂತೆ ಸುಮ್ಮನೆ ಇರಲು ವರ್ಣಾಶ್ರಮ ಧರ್ಮವನ್ನು ಸ್ಥಾಪನ ಮಾಡಲು ಭಗವದ್ಗೀತೆಯನ್ನು ಬೋಧಿಸಿದ್ದಲ್ಲವೇ ತಾನೂ ಸಹ ವರ್ಣಾಶ್ರಮ ಧರ್ಮಗಳನ್ನು ಆಚರಿಸಿ ಜಗತ್ತಿಗೆ ಮಾರ್ಗದರ್ಶನ ಮಾಡಿತೋರಿಸಿದನು. ಜಗತ್ತಿನಲ್ಲಿ ಅಧರ್ಮವು ಹೆಚ್ಚಾದಾಗ ಭಗವಂತನು ಅವತಾರತಾಳಿ ಧರ್ಮೋದ್ಧಾರದ ಕಾರ್ಯವನ್ನು ಮಾಡುವನು. ಅಂದಿನಿಂದ ಇಂದಿನ ವರೆಗೆ ಭಾರತದಲ್ಲಿ ಎಷ್ಟೋ ಅವತಾರಗಳಾಗಿವೆ. ಅನೇಕ ಸಾಧುಸಂತರೂ, ಮಹಾಪುರುಷರೂ ಜನಿಸಿ ಪರಮೇಶ್ವರನ ಕಾರ್ಯಕ್ಕೆ ನೆರವಾಗಿದ್ದಾರೆ. ಅಂಥ ಭಗವದ್ಭಕ್ತರಿಗಾಗಿಯೇ ಭೂಮಿತಾಯಿಯು ಹೆದರಿ ಫಲ-ಪುಷ್ಪ, ದವಸ-ಧಾನ್ಯಗಳನ್ನು

ಕೊಡುತ್ತಾಳೆ. ಅವರ ತಪಃಪ್ರಭಾವಕ್ಕೆ ಅಂಜಿ ಮೇಘರಾಜನು ಮಳೆಯನ್ನು ಸುರಿಸುತ್ತಾನೆ. ಅಂಥವರು ಪೃಥ್ವಿಯ ಮೇಲೆ ಇರುವುದರಿಂದಲೇ ಸೃಷ್ಟಿದೇವಿಯು ಸಕಲರಿಗೆ ಸೊಬಗನ್ನೀಯುತ್ತಿದ್ದಾಳೆ. ಆದರೆ ಅಂಥ ಮಹಾಪುರುಷರನ್ನು ತಿಳಿಯುವ ಪಾತ್ರತೆಯು ಮಾತ್ರ ನಮ್ಮಲ್ಲಿರಬೇಕಾಗುತ್ತದೆ. ಶ್ರೀಕೃಷ್ಣ ಪರಮಾತ್ಮನನ್ನು ದುರ್ಯೋಧನನು ತಿಳಿಯದೇ ಬಂಧಿಸಲು ಹೋಗಿ ಭವಣೆಗೀಡಾದನು. ಪ್ರಸ್ತುತ ನಮ್ಮ ಚರಿತ್ರನಾಯಕರಾದ ಜಗದ್ಗುರು ಕೂಡ್ಲೀ ಶೃಂಗೇರಿ ಪೀಠದ ಶ್ರೀ ಶಾಂಕರೇಶ್ವರ ಭಾರತಿ ಮಹಾಸ್ವಾಮಿಗಳವರು ಅಂಥ ಮಹಾಪುರುಷರಲ್ಲೊಬ್ಬರು. ಅವರು ಮಹಾ ತಪಸ್ವಿಗಳೂ, ನೈಷ್ಠಿಕ ಬ್ರಹ್ಮಚಾರಿಗಳೂ, ಆದರ್ಶ ಸನ್ಯಾಸಿಗಳೂ ಆಗಿರುವರು. ಆದ್ದರಿಂದ ಅಂಥ ಸದ್ಗುರುಗಳ ಸನ್ನಿಧಿಯ ಲಾಭವನ್ನು ಮುಮುಕ್ಷುಗಳು ಪಡೆದು ಧನ್ಯರಾಗಬೇಕೆಂದು ಬಯಸಿ ಅವರ ಈ ಅಲ್ಪ ಪರಿಚಯವನ್ನು ಇದರಡಿಯಲ್ಲಿ ಬರೆಯಲಿಸುವಾದೆವು.

ಶ್ರೀಮತ್ ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನಾದ ಶ್ರೀ ಮಹಾವಿಷ್ಣುವಿನ ಅವತಾರರೂಪವಾದ ಶ್ರೀ ವೆಂಕಟರಮಣ ಸ್ವಾಮಿಯ ಅನುಗ್ರಹದಿಂದ (ಶಕೆ ೧೮೦೮) ವ್ಯಯನಾಮ ಸಂವತ್ಸರ ಮಾಘ ಬಹುಳ ತ್ರಯೋದಶಿಯ ಶುಭಲಗ್ನದಲ್ಲಿ ಸುಬ್ರಹ್ಮಣ್ಯ ನಾಮಕರಾಗಿ ಆಂಧ್ರ ದೇಶದ ನೆಲ್ಲೂರು ಜಿಲ್ಲೆ ಉದಯಗಿರಿ ಗ್ರಾಮದಲ್ಲಿ ಶ್ರೀಗಳವರು ಜನಿಸಿದರು. ಇವರ ಮಾತಾ-ಪಿತೃಗಳು ಆದಿ ಲಕ್ಷ್ಮ್ಯಂಬಾ-ಸುಬ್ರಹ್ಮಣ್ಯ ಶಾಸ್ತ್ರಿಗಳೆಂಬ ಹೆಸರುಳ್ಳವರು. ಇವರ ತಂದೆಯವರು ಶಾಸ್ತ್ರವನ್ನು ಓದಿದವರಲ್ಲದೇ ವರ್ಣಾಶ್ರಮ ಧರ್ಮಗಳಲ್ಲಿ ತದನುಷ್ಠಾನದಲ್ಲಿ ಸಂಪೂರ್ಣ ಶ್ರದ್ಧಾಭಕ್ತಿನಿರತರು. ಇವರ ಮಾತೋಶ್ರೀಯವರು ಅವರ ಚಿಕ್ಕತನದಲ್ಲಿಯೇ ಶ್ರೀಮತ್ ಅಖಿಲಗುಣಗಣಾಭಿರಾಮ ಶ್ರೀರಾಮ ದಿವ್ಯ ಚರಣಾರವಿಂದ ಭಕ್ತಿಪೂರಿತ, ಪರಮ ಪ್ರೇಮಪೂರಿತ ಸ್ವಾಂತರು. ಇಂಥ ಪರಮ ಪವಿತ್ರರಾದ ಜನನಿ-ಜನಕರಿಗೆ ಈ ಸ್ವಾಮಿಗಳವರಿಗೆ ಜ್ಯೇಷ್ಠರಾದ ಶ್ರೀ ವೆಂಕಟನರಸಿಂಹ ಶರ್ಮ ಶಾಸ್ತ್ರಿಗಳವರು ಜನಿಸಿದರು. ಅನುಜರಾದ ಶ್ರೀಗಳವರು ಹಾಗೂ ಅವರು ಇಬ್ಬರೂ ರಾಮ-ಲಕ್ಷ್ಮಣರಂತೆ ಪ್ರೀತಿ, ಭಕ್ತಿಯುಳ್ಳವರಾಗಿ ಶೋಭಿಸಿದರು. ಇವರಿಬ್ಬರಿಗೂ ಜ್ಯೇಷ್ಠ ಸಹೋದರರಿಬ್ಬರು, ಕನಿಷ್ಠ ಸಹೋದರಿಯೊಬ್ಬಳು ಇದ್ದರು.

ಶ್ರೀಗಳವರು ತಮ್ಮ ಬಾಲ್ಯದಲ್ಲಿ ಮಾತಾ–ಪಿತೃಗಳಿಗೂ, ಮನೆಯವರಿಗೂ ಅಷ್ಟೇ ಏಕೆ ನೆರೆಹೊರೆಯವರಿಗೂ ಮುದ್ದಿನ ಕುವರರಾಗಿದ್ದರು. ಶ್ರೀಗಳವರು ತಮ್ಮ ಬಾಲ್ಯದಲ್ಲಿ ಯಾರು ಕರೆದರೂ ಎತ್ತಿಕೊಂಡರೂ ಅಳದೇ ಹಸನ್ಮುಖರಾಗಿ ಶೋಭಿಸುತ್ತ ಕರೆದುಕೊಂಡವರ ಮನಸ್ಸಿಗೆ ದಿನದಿನಕ್ಕೂ ಪ್ರೀತಿಯನ್ನು ಅಭಿವೃದ್ಧಿಪಡಿಸುತ್ತಿದ್ದರು. ಸ್ತನ್ಯಪಾನಕ್ಕಾಗಲಿ, ಊಟಕ್ಕಾಗಲಿ ತೊಂದರೆ ಪಡದೇ ಶಾಂತಚಿತ್ತರಾಗಿರುತ್ತಿದ್ದರು. ಯಾವಾಗಲೂ ಬಾಲ್ಯಾವಸ್ಥೆಯಲ್ಲಿಯೇ ನಗುಮೊಗವುಳ್ಳವರಾಗಿ ಇವರು ತಾಯಿಯ ಹತ್ತಿರ ಕಾಲದಲ್ಲಿ ಎಷ್ಟು ಶಾಂತರಾಗಿ ಸಂತುಷ್ಟರಾಗಿ ಇರುತ್ತಿದ್ದರೋ ಇತರರ ಅಂಗದಲ್ಲಿಯೂ ಸಹ ಹಾಗೇ ಶಾಂತ–ಸಂತುಷ್ಟವುಳ್ಳವರಾಗಿ ಅವರವರ ಮನಸ್ಸಿಗೆ ಪ್ರೀತಿಯನ್ನು ಉಂಟುಮಾಡುತ್ತಿದ್ದರು. ಜಾತಿ, ನೀತಿ ಭೇದವಿಲ್ಲದೆ ಅನ್ಯ ಜಾತೀಯರೂ ವಿದೇಶಿಯರೂ, ಸಹ ಮಕ್ಕಳಿಲ್ಲದವರೂ ಇವರ ಆಕರ್ಷಣಕ್ಕೆ ಪಾತ್ರರಾಗುವರಲ್ಲದೇ ಅವರವರ ಮನಸ್ಸಿಗೆ ಶಿಶುವಿನಂತೆ ಪ್ರೀತಿಗೋಳಿಸುತ್ತಿದ್ದರು. ಶ್ರೀಗಳವರಲ್ಲಿ ಶೈಶವದಲ್ಲಿಯೇ ಕಂಡುಬಂದ ಆ ಶಾಂತಿಯು ಅಚಲವೂ ಅಪೂರ್ವವೂ ಆಗಿದ್ದವು.

ಅಕ್ಷರಾಭ್ಯಾಸ ಪೂರ್ವದಲ್ಲಿಯೇ ಸಂಸ್ಕೃತ, ಆಂಧ್ರ ಭಾಷೆಗಳ ಗದ್ಯ–ಪದ್ಯಗಳನ್ನು ಶ್ರೀಗಳವರು ಪಠಣಮಾಡುತ್ತಿದ್ದರು. ಹೀಗಾಗಿ ಶ್ರೀಗಳವರು ಅಭಿನವ ಪಾಂಡಿತ್ಯವನ್ನು ತಮ್ಮ ಬಾಲ್ಯದಲ್ಲಿಯೇ ಪ್ರಕಟಿಸಹತ್ತಿದರು.

## ವಿದ್ಯಾಭ್ಯಾಸ



ಶ್ರೀಗಳವರಿಗೆ ಪಂಚಮ ವರ್ಷದಲ್ಲಿ ಅಕ್ಷರಾಭ್ಯಾಸವು ಆರಂಭವಾಯಿತು. ಅಕ್ಷರಾಭ್ಯಾಸ ನಂತರ ಬರೆಯಲಿಕ್ಕೆ ತಕ್ಕಸ್ಥಳ ಸಿಕ್ಕಕಾಲದಲ್ಲಿ ಸಹಜವಾಗಿ ಅನ್ಯರ ಪ್ರೇರಣೆಯಿಲ್ಲದೆ ಅಕ್ಷರಗಳನ್ನೂ ಸಂಖ್ಯೆಗಳನ್ನೂ ಬರೆಯುತ್ತಾ ಇರುವರು. ಹೀಗೆ ಎಂಟು ವರ್ಷದ ಪರ್ಯಂತರ ಬಾಲ್ಯವನ್ನು ಕಳೆಯುವದರಲ್ಲಿಯೇ ಅಷ್ಟಮವರ್ಷದಲ್ಲಿ ಶ್ರೀಯೋಗಿರಾಜ ನಾಮಕರಾದ ಶ್ರೀಮದ್ಯೋಗಿರಾಜರಿಂದ ತಾರಕ ನಾಮೋಪದೇಶವನ್ನು ಪಡೆದವರಾಗಿ ತಾರಕನಾಮಧ್ಯಾನ

ತತ್ಪರರಾಗುತ್ತಿದ್ದರು. ಎಂಟನೆಯವರ್ಷದಕೊನೆಗೆ ಆಂಧ್ರ ಆಂಗ್ಲೇಯ ಪ್ರಥಮ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇವರ ಚರಿತ್ರಕ್ಕೆ ೫೦–೫೫ ವರ್ಷದಹಿಂದೆಯೇ ಆರಂಭವಾಗಿರುತ್ತದೆ. ಆ ಕಾಲದಲ್ಲಿ ವೈದಿಕ ಬ್ರಾಹ್ಮಣರು ಧರ್ಮ ಸಂರಕ್ಷಣ ಬದ್ಧಕಂಕಣರಾಗಿ ಸ್ವಧರ್ಮಾನುಷ್ಠಾನ ನಿರತರಾಗಿ, ಪರಧರ್ಮ ವಿಮುಖ ರಾಗಿ ಪಾಪಭೀರುಗಳಾಗಿ ಇರುವದರಿಂದ ಶ್ರೀಗಳವರ ತಂದೆಯವರು ಕೇವಲ ಬಡವರಾಗಿ ನಿಜಧರ್ಮಾರ್ಜಿತ ವಿತ್ತದಿಂದ ಸಂಸಾರವನ್ನು ತೂಗಿಸಿಕೊಳ್ಳು ವವರಾಗಿರುತ್ತಿದ್ದರು. ಅಧರ್ಮದಿಂದ ಅಪಾತ್ರರಿಂದ ಧನವನ್ನು ಸಂಪಾದಿಸು ವದು ಆಗಿನ ಕಾಲದ ಜನರಿಗೆ ಮರಣಪ್ರಾಯವಾಗಿ ಇದ್ದದ್ದರಿಂದ ಶ್ರೀಗಳ-ವರನ್ನು ಮುಂದೆ ಆಂಗ್ಲೇಯಾದಿ ಭಾಷೆಗಳನ್ನು ಓದಿಸಲು ಶಕ್ತಿಹೀನರಾಗಿ ಬಹಳ ಕಷ್ಟಪಡುತ್ತಿದ್ದರು. ಮತ್ತು ಆಗಿನಕಾಲದ ಮಾತಾ–ಪಿತೃಗಳು ವಿದ್ಯಾರ್ಥಿಗಳಾದ ತಮ್ಮ ಮಕ್ಕಳನ್ನು ಪಾಪಭೀರುಗಳಾಗಿ ಖಾನಾವಳಿ–ಚಹಾದಅಂಗಡಿ ಇತ್ಯಾದಿ ಸ್ಥಳಗಳಲ್ಲಿ ಅಸ್ಪೃಷ್ಟಾನ್ನವನ್ನು ಗ್ರಹಿಸುವದಕ್ಕೆ ಒಪ್ಪದೇ ಕಷ್ಟಪಡುತ್ತಿದ್ದರು. ಶ್ರೀಗಳವರು ಮಾತಾ–ಪಿತ್ರಾಜ್ಞಾವಿಧೇಯ ರಾಗಿ ಆಂಗ್ಲೇಯಭಾಷಾಭಿವೃದ್ಧಿ ಮಾತಾಪಿತ್ರಾಜ್ಞೆಗಿಂತಲೂ ಶ್ರೇಷ್ಠವೆಂದು ತಿಳಿಯದೇ ನೀಚವೆಂದು ಗ್ರಹಿಸಿ ಪಿತ್ರಾಜ್ಞಾನುಸಾರ ಆಂಧ್ರ ಸಂಸ್ಕೃತ ಭಾಷೆ ಗಳನ್ನು ಕಲಿಯುತ್ತಿದ್ದರು. ಶ್ರೀಗಳವರ ಜೇಷ್ಠಭ್ರಾತೃಗಳವರು ಕಾವ್ಯ ನಾಟ ಕಾಲಂಕಾರ ಸಾಹಿತ್ಯ ವಿದ್ವಾಂಸರಲ್ಲದೇ ವ್ಯಾಕರಣ ಶಾಸ್ತ್ರವನ್ನು ಅಭ್ಯಸಿಸು ತ್ತಿದ್ದರು. ಮತ್ತು ಶ್ರೀಗಳವರ ಅಣ್ಣಂದಿರು ನಿತ್ಯನೈಮಿತ್ತಿಕ ಕರ್ಮಾನು ಷ್ಠಾನಗಳನ್ನು ಅತ್ಯಂತ ಮನಃಪೂರ್ವಕವಾಗಿ ಮಾಡುವರಲ್ಲದೇ ಶ್ರೀಮದ್ರಾಮ ಚರಣಾರವಿಂದ ಧ್ಯಾನವನ್ನು ಮುಮುಕ್ಷುಗಳಾಗಿ ಅತ್ಯಂತ ಆರ್ತರಾಗಿ ನಡೆ ಸುತ್ತ ಇದ್ದರು. ಅವರು ಮುಕ್ತಿಗಾಗಿ ಪಡುವ ಸಂತಾಪವನ್ನು ಅಳುವದನ್ನು ಶ್ರೀಗಳವರು ತಮಗಿಂತಲೂ ಜೇಷ್ಠರಾದವರು ಮಾಡುವದನ್ನು ಕಂಡು ಶ್ರೇಷ್ಠ ರಾದವರು ಮಾಡಿದ್ದು ಪ್ರಮಾಣವೆಂದು ನಿಶ್ಚಯಿಸಿ ಶ್ರೇಷ್ಠರಾದ ಜೇಷ್ಠರು ಹಿಡಿದ ಮಾರ್ಗವನ್ನು ತಾವು ಅವಲಂಬಿಸಲೇಬೇಕೆಂದು ಶ್ರೀಗಳವರು ತಾವು ಅದುವರಿಗೂ ನಡೆಸಿದ ಶ್ರೀತಾರಕನಾಮ ಬ್ರಹ್ಮನಾಮೋಚ್ಚಾರಣಕ್ಕೆ ಫಲ ವೆಂದು ಮನಸಿನಲ್ಲಿ ನಿರ್ಧರಿಸಿ ವಿಶೇಷವಾಗಿ ತಮ್ಮ ಜೇಷ್ಠಭ್ರಾತೃಗಳು ಅವ ಲಂಬಿಸಿದ ಮಾರ್ಗವನ್ನೇ ನಡೆಸಲಿಕ್ಕೆ ಹತ್ತಿದ್ದರು. ತತ್ಕಾಲದಲ್ಲಿಯೇ

ಆಂಗ್ಲೇಯ ಭಾಷೆಯನ್ನು ಸಂಸ್ಕೃತಾಂಧ್ರ ಭಾಷೆಗಳನ್ನು ಸಹ ಪಠಿಸುತ್ತ ಬಂದರು. ಆಗಿನ ಕಾಲದಲ್ಲಿರುವ ಬಡತನದಿಂದ ಮಾತಾ ಪಿತೃಗಳು ಪೀಡಿತ ರಾಗಿ ಶ್ರೀಗಳವರಿಗೆ ಬಹು ಕಷ್ಟದಿಂದ ಸ್ವಲ್ಪ ಆಲಸ್ಯವಾಗಿ ೧೧–೧೨ ವರ್ಷ ಗಳಿಗೆ ಉಪನಯನ ಸಂಸ್ಕಾರಮಾಡಿದರು. ಈ ಸಂಸ್ಕಾರವಾದ ಕೂಡಲೇ ಅವರ ಪೂರ್ವಜನ್ಮಾನುಗುಣವಾಗಿ ಗಾಯಿತ್ರೀಜಪವನ್ನು ವಿಶೇಷವಾಗಿ ಮಾಡುತ್ತ ಬಂದರು. ಆಗಿನಕಾಲಕ್ಕೆ ಶ್ರೀಗಳವರಿಗಿರುವ ಗೀರ್ವಾಣ ಭಾಷಾ ಭಿಜ್ಞಾನದಿಂದ ವೇದಾಂತ ಪಂಥದಶೀತ್ಯಾದಿ ಸಂಸ್ಕೃತ ಗ್ರಂಥಗಳನ್ನೂ ಸೀತಾ ರಾಮಾಂಜನೇಯ ಸಂವಾದೇತ್ಯಾದಿ ಆಂಧ್ರಗಂಥಗಳನ್ನೂ ನೋಡುತ್ತ ಆಯಾ ಕಾಲದಲ್ಲಿ ಪ್ರಾಪ್ತರಾಗುವ ಸಾಧುಸಂತರನ್ನೂ ಸನ್ಯಾಸಿಗಳನ್ನೂ ಸೇವಿಸುತ್ತ ಮೋಕ್ಷ ದುಃಖಭರಿತ ಸ್ವಾಂತರಾಗುತ್ತ ಇದ್ದರು. ಅದುವರೆಗೂ ಶ್ರೀಗಳವರು ನಡೆಸಿದ ಶ್ರೀರಾಮನಾಮೋಚ್ಚರಣ ತಪಃ ಪ್ರಭಾವದಿಂದ ಶ್ರೀಮಚ್ಛಂಕರ ಭಗವತ್ಪೂಜ್ಯಪಾದರು ರಚಿಸಿದ "ಶ್ರೀರಾಮಕರ್ಣಾಮೃತಂ" ಎಂಬುವ ಸ್ತೋತ್ರಗ್ರಂಥ ರತ್ನವನ್ನು ಪ್ರತಿದಿನವೂ ಪಾರಾಯಣಮಾಡುತ್ತ ದುಃಖಪಡು ತ್ತಿದ್ದರು. ಈ ರೀತಿ ಶ್ರೀಗಳವರ ವಿದ್ಯಾಭ್ಯಾಸವು ಬಹಿರಂಗದಲ್ಲಿ ವ್ಯವಹಾರಿಕ ರೀತಿಯಲ್ಲಿ ನಡೆದಿದ್ದರೂ ಅಂತರಂಗದಲ್ಲಿ ಭಗವಂತನನ್ನು ಕಾಣಬೇಕೆಂಬ ಹಂಬಲದಿಂದ ದುಃಖಪಡುತ್ತ ಅಧ್ಯಾತ್ಮದಲ್ಲಿ ಒಂದೊಂದು ಹೆಜ್ಜೆಯನ್ನು ಮುಂದಿಡುತ್ತ ನಡೆದಿದ್ದಿತು.

## ಸದ್ಗುರು ಸಮಾಗಮ.



ಶ್ರೀಗಳವರಿಗೆ ಗುರುಪ್ರಾಪ್ತಿಯ ತೃಷ್ಣೆಯು ಬಲವತ್ತರವಾಯಿತು. ಶ್ರೀಗಳವರಿಗೆ ಗುರುವನ್ನು ಕಾಣುವ ಹಂಬಲವು ಹಿರಿದಾಯಿತು. ಕುಳಿತಲ್ಲಿಯೇ ಗುರುಧ್ಯಾನ, ನಿಂತಲ್ಲಿಯೇ ಗುರುಧ್ಯಾನ, ಮನಸ್ಸಿನಲ್ಲಿ, ಕನಸಿನಲ್ಲಿ ಗುರು ಧ್ಯಾನ. ಆದರೆ ನಿಜವಾದ ಸದ್ಗುರುಗಳು ಯಾರೆಂಬುದನ್ನು ತಿಳಿಯುವದು ಕಷ್ಟಸಾಧ್ಯವಾದಮಾತು. ಸದ್ಗುರುವಿನ ತದೇಕ ಧ್ಯಾನದಿಂದ ಸದ್ಗುರುವೇ ಅಂಥ ಶಿಷ್ಯನನ್ನು ಹುಡುಕುತ್ತ ಬರುವನು. ಅಥವಾ ಭಗವಂತನೇ ಆತನ ಉದ್ಧಾರಕ್ಕಾಗಿ ಸದ್ಗುರು ರೂಪವನ್ನು ತಾಳಿ ಬರುವನು.

ಶ್ರೀ ಮಾತಾ–ಪಿತೃಗಳ ಅನುಗ್ರಹದಿಂದಲೂ ಜ್ಯೇಷ್ಠ ಭ್ರಾತೃರದು ತೋರಿಸಿದ ಭಕ್ತಿಭಾವದಿಂದಲೂ ಶ್ರೀಮದ್ರಾಮಚಂದ್ರ ಪರಮಾನುಗ್ರಹದಿಂದಲೂ ಮುಖ್ಯವಾಗಿ ವಂಶದೇವತನಾದ ಶ್ರೀಮದ್ರಮಾರಮಣನಾದ ಶ್ರೀಲಕ್ಷ್ಮೀವೆಂಕಟೇಶನ ಕೃಪಾಲವಲೇಶದಿಂದಲೂ ಪರಮಯೋಗಿ ಪುಂಗವ ದರ್ಶನವಾಯಿತು. ಅವರ ಚರಣ ದರ್ಶನ, ಸ್ಪರ್ಶನ, ಪೂಜನ, ಆತ್ಮ ನಿವೇದನಾದಿಗಳಿಂದ ಮನಸ್ಸಿಗೆ ಸ್ವಲ್ಪ ಶಾಂತಿ ಒದಗಿತು. ಆ ಮಹಾಯೋಗಿಪುಂಗವ ಚರಣಾರವಿಂದದಲ್ಲಿ ಶ್ರೀಗಳವರು ತಮ್ಮ ಆತ್ಮನಿವೇದನ ಮಾಡಲು ನಾಲ್ಕೆತ್ತು ಮುಂದಿನ ದಿವಸ ಪರ್ಯಂತರವೂ ಶ್ರೀ ಮಹಾಸರಸ್ವತಿದೇವಿ ಶ್ರೀಗಳವರಿಗೆ ಉಪದೇಷ್ಟರಾಗಬೇಕೆಂದು ಆ ಯೋಗಿ ಮಹಾಪುಂಗವರಿಗೆ ಅಪ್ಪಣೆಕೊಟ್ಟಳು. ಅದೇ ದಿವಸದಲ್ಲಿಯೇ ಶ್ರೀರಾಮಚಂದ್ರ ಪರಬ್ರಹ್ಮ ಮೂರ್ತಿ ಶ್ರೀಗಳವರಿಗೆ ಆ ಯೋಗಿ ಮಹಾಪುಂಗವರನ್ನೇ ಗುರುಗಳನ್ನಾಗಿ ಮಾಡಿಕೊಳ್ಳಬೇಕೆಂದು ಅಪ್ಪಣೆ ಕೊಡಿಸಿದರು. ಅದೇ ಪರಮದಿವಸವು; ಶ್ರೀಗಳವರು ಆ ಯೋಗಿಪುಂಗವರ ದರ್ಶನಕ್ಕೆ ಹೋಗಿ ಅವರ ಚರಣಸನ್ನಿಧಿಯಲ್ಲಿ ಶ್ರೀರಾಮಚಂದ್ರನ ಆಜ್ಞೆಯನ್ನು ನಿವೇದಿಸಿದರು. ತತ್ಕಾಲದಲ್ಲಿಯೇ ಆ ಮಹಾಯೋಗಿ ಪುಂಗವರು ತಮಗೆ ಮಹಾಸರಸ್ವತಿಯು ಮಾಡಿದ ಆಜ್ಞೆಯನ್ನು ಶ್ರೀಗಳವರಿಗೆ ಅಪ್ಪಣೆಕೊಡಿಸಿದಳು. ಶ್ರೀಗಳವರ ಶ್ರೀಗುರುಗಳವರೇ ಶ್ರೀರಂಗರಾಜ ಯೋಗೀಂದ್ರ ಪೂಜ್ಯಪಾದರು.

ಶ್ರೀಗುರುಗಳಲ್ಲಿ ಶ್ರೀಗಳವರು ಭೂಲೋಕದಲ್ಲಿರುವ ಮಾತಾ–ಪಿತ್ರಾದಿಗಳಿಗಿಂತಲೂ, ಸ್ವರ್ಗಲೋಕದಲ್ಲಿರುವ ಇಂದ್ರಾದಿದೇವತೆಗಳಿಗಿಂತಲೂ, ಸತ್ಯವೈಕುಂಠ ಕೈಲಾಸಲೋಕಗಳಲ್ಲಿರುವ ಬ್ರಹ್ಮ ವಿಷ್ಣು ಮಹೇಶ್ವರರಿಗಿಂತಲೂ, ಬ್ರಹ್ಮಲೋಕದಲ್ಲಿರುವ ಹಿರಣ್ಯಗರ್ಭನಿಗಿಂತಲೂ, ಶ್ರೀಗುರುಗಳವರೇ ಶ್ರೇಷ್ಠರೆಂದು ಭಾವಿಸಿದರು. ಇಷ್ಟಲ್ಲದೆ ಶ್ರೀಗುರುಗಳ ಚರಣವೇ ಪರಾಕಾಷ್ಠ, ಪರಾಗತಿಯೆಂದು ಆನಂದ ಮಗ್ನಚಿತ್ತರಾದರು. ತದನಂತರ ಘಟಿಕಾಸಮಯದಲ್ಲಿ ಹಸ್ತಮಸ್ತಕ ಸಂಯೋಗವೂ ಪಾದಾಭಿವಂದನೆಯೂ ನಡೆಯಿತು. ಈ ದೀಕ್ಷೆಯಿಂದ ಗುರುಶಿಷ್ಯ ಸಂಘಟನವು ಪ್ರಾಪ್ತವಾಯಿತು.

ಶ್ರೀಸದ್ಗುರೂಪದಿಷ್ಟ ಗುರುಮಹಿಮಾದಿ ವರ್ಣನವು—"ತಂದೆತಾಯಿಗಳು ಜನ್ಮದಾತೃಗಳು ಆಗಿ ಗುರುಗಳಾದರು. ಅಕ್ಷರಾಭ್ಯಾಸ ಮಾಡಿಸಿದವರು

ಅಕ್ಷರಾಭ್ಯಾಸ ಗುರುಗಳಾದರು. ವಿದ್ಯಾಭ್ಯಾಸಮಾಡಿಸಿದವರು ವಿದ್ಯಾಗುರುಗಳಾದರು. ಗಾಯಿತ್ರಿ ಉಪದೇಶಕರು ವೇದರೂಪ ಬ್ರಹ್ಮೋಪದೇಶ ಗುರುಗಳಾದರು. ಶಿವಪಂಚಾಕ್ಷರಿ ಇತ್ಯಾದಿ ಮಂತ್ರೋಪದೇಶಕರು ಮಂತ್ರೋಪದೇಶಕ ಗುರುಗಳಾದರು. ತಾರಕನಾಮಾದಿ ಉಪದೇಶಕರು ನಾಮೋಪದೇಶಕಗುರುಗಳಾದರು. ಹಠಾತ್‌ಯೋಗ ಉಪದೇಶಕರು ಯೋಗಗುರುಗಳಾದರು. ಅಣಿಮಾದಿ ಸಿದ್ಧವಿದ್ಯೋಪದೇಶಕರು ಮಹಿಮದಾತರಾದ ಗುರುಗಳಾದರು. ಘಟಿಕಾ ಸಿದ್ಧಿ, ಪಾದುಕಾಸಿದ್ಧಿ, ವಿಷಯುವಾದ ರಸವಾದ ಉಪದೇಶಕರು ಧಾತುವಾದ ಗುರುಗಳಾದರು. ಇದರಂತೆ ಅನಂತಸಿದ್ಧಿಗಳನ್ನು ಉಪದೇಶಮಾಡುವ ಗುರುಗಳು ಅನಂತರಾಗಿರುತ್ತಾರೆ. ಈ ವಿದ್ಯೆಗಳಿಂದ ನೀಚ, ಮಧ್ಯಮೋತ್ಕೃಷ್ಟ ಜನ್ಮ ಪರಂಪರೆಗಳನ್ನು ಹೊಂದುವ ಫಲವೇ ಪ್ರಾಪ್ತವಾಗುತ್ತದೆ. ಹೊರತು ಜನ್ಮನಾಶದ ಫಲವಿಲ್ಲ. ಅಂದರೆ ಸಂಸಾರ ಪ್ರಾಪ್ತಿಯೇ ಹೊರತು ಸಂಸಾರ ನಾಶನವಿಲ್ಲ. 'ಗುರು' ಎಂಬುವ ಶಬ್ದಕ್ಕೆ ಗುಣವರ್ಜಿತವೂ ರೂಪವರ್ಜಿತವೂ ಎಂದು ಅರ್ಥವಿರುವದರಿಂದ ಗುಣವೂ, ರೂಪವೂ, ಅಹಂಕಾರದಿಂದ ಪ್ರಾಪ್ತವಾಗುತ್ತದೆಂದು ಬೋಧಿಸಿ ಅಹಂಕಾರವಿಲ್ಲದ ರೂಪವಾದ ಗುಣರೂಪವೂ, ಇಲ್ಲದ ಸ್ವರೂಪವೇ ಸಕಲಗುಣಗಳಿಗೂ, ಸಕಲರೂಪಗಳಿಗೂ, ಸಕಲವಿದ್ಯೆಗಳಿಗೂ, ಸರ್ವದೇವತೆಗಳಿಗೂ ಸರ್ವ ಈಶ್ವರಗಳಿಗೂ, ಎಲ್ಲರಿಗೂ ಕಾರಣವಾದ ನಾನು ಎಂಬುವ ಸ್ವರೂಪವನ್ನು ಉಪದೇಶಮಾಡುವವರೇ ಗುರುಗಳು. ತತ್‌ಸ್ವರೂಪವೇ ಗುರುತತ್ವವು. ಎಂದು ಪರಮಾರ್ಥೋಪದೇಶವನ್ನು ಮಾಡಿದರು. ಮತ್ತು ಇಂಥ ಗುರುತತ್ವವನ್ನು ಪಡೆಯುವ ಜನ್ಮದ ಹಿಂದಿನ ಜನ್ಮದಲ್ಲಿ ವರ್ಣಾಶ್ರಮ ಧರ್ಮಕರ್ಮಾನುಷ್ಠಾನವು ಭಗವದ್ಭಕ್ತಿನಾದಾದಿ ಯೋಗಾಭ್ಯಾಸವು ಮಾಡಿ ಚಿತ್ತ ಶುದ್ಧಿ ಚಿತ್ತ ಏಕಾಗ್ರತೆ ಹೊಂದಿದವರಿಗೇನೇ ಪರಮಗುರುಗಳು ಸಿಕ್ಕುವರು. ಅಖಂಡ ಪರಿಪೂರ್ಣನಿರುಪಾಧಿಕ ಬ್ರಹ್ಮ ತತ್ವವನ್ನು ಉಪದೇಶಮಾಡುವ ಗುರುಗಳನ್ನು ಅಮೂರ್ತವಾದ ಬ್ರಹ್ಮದ ಮೂರ್ತರೂಪವೆಂದು ಭಾವಿಸಿ ಆತ್ಮ, ಅಂಗ, ಸ್ಥಾನ, ಸದ್ಭಾವ, ಶೂಶ್ರೂಷಗಳನ್ನು ಮನೋವಾಕ್ಕಾಯ ಕರ್ಮಗಳಿಂದ ಮಾಡುವವರಿಗೆ ಪರಮಾರ್ಥ ಸಿದ್ಧಿ ಪ್ರಾಪ್ತವಾಗುತ್ತದೆ. ಸಾಮಾನ್ಯ ಗುರುಗಳನ್ನು ಸೇವಿಸುವದರಿಂದ ತತ್ ತತ್ ಸಿದ್ಧಿ ಪ್ರಾಪ್ತವಾಗುತ್ತದೆ. ಜ್ಞಾನ

ಸಿದ್ಧಿ ಪ್ರಾಪ್ತವಾಗುವದಿಲ್ಲ. ಪರಮಗುರುಗಳು ದರ್ಶನಕೊಟ್ಟರೂ ಬಾಲ ಭಾವದಿಂದ ಶುಶ್ರೂಷಾದಿಗಳನ್ನು ಮಾಡದೇ ಅವರ ಉಪದೇಶದಂತೆ ಚಾಚೂ ಸಹ ತಪ್ಪದೇ ಸಾಧನಮಾಡದೇ ಹೋದರೆ ಜ್ಞಾನಸಿದ್ಧಿ ಪ್ರಾಪ್ತವಾಗುವದಿಲ್ಲ. ಇದೇ ಜ್ಞಾನ ಸಾಧನವೆಂದು ಸರ್ವ ಶಾಸ್ತ್ರೋಪದೇಶಸಾರವೆಂದು ಅಪ್ಪಣೆ ಕೊಡಿಸಿದರು.

## ಸಾಧನ ಸಂಪತ್ತು



ಶ್ರೀಗಳವರು ಗುರೂಪದೇಶ ಮಹಿಮೆಯಿಂದ ಆತ್ಮೋದ್ಧಾರ ಮಾರ್ಗ ವನ್ನು ಕಂಡುಕೊಂಡರು. ಅವರ ಸಂಶಯ ಗ್ರಂಥಿಗಳು ಬಿಚ್ಚಿದವು. ಲೌಕಿಕದ ಮೋಹವು ನಷ್ಟವಾಯಿತು. ಸೇವಾವೃತ್ತಿಯು ಶ್ವವೃತ್ತಿ ಎಂದು ತುಚ್ಛೀಕರಿ ಸಿದರು. ಭೋಗವಾಸನೆ ಪೂರ್ಣವಾಗಿ ಅಳಿಯಿತು. ಅಖಂಡ ಬ್ರಹ್ಮಚರ್ಯ ಗುರೂಪದಿಷ್ಟ ಜ್ಞಾನ, ಯೋಗ ಇವುಗಳ ಸಾಧನೆ ಇವುಗಳಲ್ಲಿ ಮಗ್ನರಾದರು. ಶ್ರೀರಂಗರಾಜ ಯೋಗೀಂದ್ರ ಗುರುಗಳ ಉಪದೇಶಾನುಗುಣವಾಗಿ ನಮ್ಮ ಗುರುಗಳು ಕರ್ಮಕಾಂಡವನ್ನು ಮೂರು ಭಾಗವಾಗಿ ವಿಭಜಿಸಿದರು. ಕರ್ಮ ವಿಷಯವಾಗಿ ನಿತ್ಯನೈಮಿತ್ತಿಕ ಕರ್ಮಾನುಷ್ಠಾನಗಳನ್ನು ಮಾಡಹತ್ತಿದರು. ಭಕ್ತಿವಿಷಯವಾಗಿ ಶ್ರೀರಾಮಚಂದ್ರನ ನಾಮಸ್ಮರಣ, ಕಥಾಶ್ರವಣ ಧ್ಯಾನಾ ದಿಗಳನ್ನು ಆರಂಭಿಸಿದರು. ಯೋಗ ವಿಷಯವಾಗಿ ಅದ್ವಯತಾರಕೋಪ ನಿಷತ್ ಪ್ರೋಕ್ತ ಪಂಚಮುದ್ರೆಗಳನ್ನೂ ದೃಷ್ಟಿತ್ರಯ, ಲಕ್ಷತ್ರಯಗಳನ್ನೂ ಪ್ರಾಣಾಯಾಮವನ್ನೂ ಕ್ರಮಕ್ರಮವಾಗಿ ಯಮನಿಯಮಾಸನಾ ಪೂರ್ವಕ ವಾಗಿ ಗುರೂಪದೇಶದಂತೆ ಅಭ್ಯಾಸಿಸತೊಡಗಿದರು. ಪ್ರತಿ ದಿನವೂ ಸಾಧನ ಮಾಡಿದ ವಿಷಯವನ್ನು ಶ್ರೀಗುರುಚರಣಕಮಲಗಳಲ್ಲಿ ಅರಿಕೆ ಮಾಡುತ್ತಿದ್ದರು. ಕೆಲವು ತಿಂಗಳುಗಳು ಕಳೆದ ನಂತರ ದಶವಿಧನಾದಾಭ್ಯಾಸವನ್ನು ಶ್ರೀಗುರು ಗಳು ಉಪದೇಶ ಮಾಡಿದರು. ಮತ್ತು ಕೆಲವು ಕಾಲದ ನಂತರ ಬ್ರಹ್ಮವಿದ್ಯಾ ಧಿಕಾರ ಯೋಗ್ಯತೆಯನ್ನುಂಟುಮಾಡುವ ಆತ್ಮ ಮಂತ್ರಾಭ್ಯಾಸವ ಸ್ಥೂಲ, ಸೂಕ್ಷ್ಮ, ಸೂಕ್ಷ್ಮತರ, ಸೂಕ್ಷ್ಮತಮ, ಬಿಂದುಧ್ಯಾನವನ್ನು, ಬ್ರಹ್ಮ

ಚರ್ಯಾದಿ ಸರ್ವ ನಿಯಮಬದ್ಧಪೂರ್ವಕವಾಗಿ ಸಾಧಿಸಲು ಗುರುಗಳು ಅನುಗ್ರಹಿಸಿದರು. ಒಂದೊಂದು ದಿವಸವು ಇಂಥ ರೂಪಮೂರ್ತಿ, ಇಂಥ ರೂಪವೇ ಮತ್ತೊಂದು ದಿವಸ ಕಾಣಿಸುತ್ತದೆಂದು ಶ್ರೀಗುರುಗಳು ಅಪ್ಪಣೆ ಕೊಡಿಸಿದಂತೆ ಸಾಧ್ಯವಾಗುತ್ತ ಬಂದಿತು. ಅಹಂಕಾರವನ್ನು ಕಳೆಯಲು ನೂರಾರು ಜನರು ಕಲೆತಿರುವ ಸಂಘದಲ್ಲಿ ದಂಡನಪೂರ್ವಕ ವಿವಿಧ ಸಂಭಾಷಣೆಗಳನ್ನು ಮಾಡಲು ಶ್ರೀಗುರುಗಳು ಅನುಗ್ರಹಿಸಿದರು. ಧರ್ಮ, ಕರ್ಮ ವಿರುದ್ಧವಾದ ವೇದಾಂತವು ಕಲಿಯುಗದ ವೇದಾಂತವೆನ್ನುವದು ನಿಷ್ಫಲವಾದದ್ದೆಂದು ತಿಳಿಯಪಡಿಸಿದರು. ಮತ್ತು ಪ್ರಲ್ಹಾದಾದಿ ಪೂರ್ವಭಕ್ತರ ಚರಿತ್ರವೂ ಮತ್ತು ವಶಿಷ್ಠ,ವಾಮದೇವ ನಾರದಾದಿ ಋಷಿಗಳ ಅನುಷ್ಠಾನವು ಮಾತ್ರವೇ ಅವಲಂಬನ ಮಾಡತಕ್ಕದ್ದು, ಪೂರ್ವತಮ ಭಕ್ತಜ್ಞಾನಿಗಳ ಆಚರಣವು ಮಾತ್ರವೇ ಗ್ರಾಹ್ಯವೇ ಹೊರತು ತದಿತರ ಅಂದರೆ ಆಧುನಿಕ ಅನುಷ್ಠಾನವು ಗ್ರಾಹ್ಯವಲ್ಲವೆಂದು ಅಪ್ಪಣೆಕೊಡಿಸಿದರು. ಈ ಅನುಷ್ಠಾನಕ್ರಮವು ಋಷಿ ಸಾಂಪ್ರದಾಯಸಿದ್ಧವೆಂತಲೂ ತದಿತರ ಸಾಂಪ್ರದಾಯವು ಕಲಿಯುಗ ಲಕ್ಷಣಕಾರಣವೆಂತಲೂ ಅನುಗ್ರಹಿಸಿದರು.

ಈ ರೀತಿ ಮೂರು ವರ್ಷವಾದ ನಂತರವೂ ಸದ್ಗುರುಗಳು ಇವರಿಗೆ ಮಹಾವಾಕ್ಯೋಪದೇಶವನ್ನು ಬೋಧಿಸಿದರು. ತತ್ವ ದೃಷ್ಟಿಯನ್ನು ಹಚ್ಚಿದರು. ಉತ್ತರ ಶಾಂಭವಿಯನ್ನು ತೋರಿಸಿದರು. ಈ ರೀತಿ ಶ್ರೀಗಳವರು ಮುಂದೆ ನಾಲ್ಕು ವರ್ಷ ಸದ್ಗುರು ಸಮಾಗಮವನ್ನು ಪಡೆದು ಜ್ಞಾನಭಾಂಡಾರವನ್ನು ಹೃದಯದಲ್ಲಿ ತುಂಬಿಕೊಂಡು ತಮ್ಮ ವಯಸ್ಸಿನ ೨೧ನೇ ವಯಸ್ಸಿನಲ್ಲಿಯೇ ತೇಜೋಮಯ ಶರೀರವುಳ್ಳವರಾಗಿ ಮುಮುಕ್ಷುಗಳಿಗೆ ಉಪದೇಶ ಮಾಡುವಂತೆ ಶ್ರೀಗುರುಗಳು ಅನುಗ್ರಹಿಸಿದರು.

ಮಧು ಇದ್ದಲ್ಲಿ ಜೇನ್ನೊಣಗಳು ಬಂದು ಮುತ್ತುವಂತೆ ಶ್ರೀಗಳವರ ಹತ್ತಿರ ಶಿಷ್ಯ ಸಮುದಾಯವು ನೆರೆಯಹತ್ತಿತು. ಆಗ ಗುರುಗಳಿಗೆ ಚಿಂತೆ ಉತ್ಪನ್ನವಾಯಿತು. "ಶ್ರೀಗಳವರು ಸಂಪಾದಿಸಿದ್ದನ್ನೆಲ್ಲ ಇಷ್ಟರಲ್ಲಿಯೇ ಪರೋಪಕಾರ ಬುದ್ಧಿಯಿಂದ ಹಂಚಿ ಬಿಡುವರಲ್ಲ!" ಎಂದು ಭಾವಿಸಿ ಶ್ರೀಗಳವರಿಗೆ— "ಗುರುಗಳಿರುವ ಕಾಲದಲ್ಲಿ ಶಿಷ್ಯರು ಗುರುಗಳಾಗುವದು ಯೋಗ್ಯ

ವಾಗಲಾರದು. ಆದಕಾರಣ ನೀನು ಯಾರಿಗೂ ಈಗಲೇ ಮಂತ್ರೋಪದೇಶ ಮಾಡಕೂಡದು." ಎಂದು ಆಜ್ಞಾಪಿಸಿದರು. ಆಗ ಶ್ರೀಗಳವರು—"ಗುರುಗಳೇ, ನಾನು ಅನ್ಯಥಾ ಹಾಗೆ ಮಾಡಲಾರೆನು. ತಮ್ಮ ಪಾದದಲ್ಲಿಯೇ ಭಾರವನ್ನಿಟ್ಟು ಉಪದೇಶವನ್ನು ಮಾಡಿರುವೆನು. ಹಾಗೂ ತಮ್ಮ ಆಜ್ಞೆಯಂತೆ ವರ್ತಿಸಲು ಸದಾ ಸಿದ್ಧನಿರುವೆನು." ಎಂದು ನುಡಿದರು. ಆಗ ಗುರುಗಳು ಶಿಷ್ಯನ ಮಾತನ್ನು ಕೇಳಿ ಸಂತುಷ್ಟರಾಗಿ— " ನಿನ್ನ ವಿದ್ಯೆಯು ಉತ್ತರೋತ್ತರ ಅಭಿವೃದ್ಧಿ ಹೊಂದಲಿ " ಎಂದು ಆಶೀರ್ವದಿಸಿ ಪೂರ್ಣಾನುಗ್ರಹ ಮಾಡಿದರು.

ಶ್ರೀಗಳವರು ಈ ರೀತಿ ದೇಹವನ್ನೆಲ್ಲ ಹಗಲಿರುಳು ಸಾಧನದಲ್ಲಿ ತೊಡಗಿಸಿ ಅಪಾರ ಜ್ಞಾನಸಂಪತ್ತನ್ನು ದೊರಕಿಸಿದರೂ ಕೂಡ ತಾವು ಸಮುದ್ರೋದಧಿಯಲ್ಲಿಯ ಮಳಲರಾಶಿಯ ಒಂದು ಕಣದಷ್ಟು ಜ್ಞಾನಸಂಪಾದನೆಯನ್ನು ಮಾಡಿರುವೆನೆಂಬ ಭಾವನೆಯನ್ನು ವಹಿಸಿ ಅಹಂಕಾರ, ಮಮಕಾರವಿರಹಿತರಾಗಿ ಸಾಧುಗಳನ್ನೂ, ಸಂನ್ಯಾಸಿಗಳನ್ನೂ, ಭಕ್ತರನ್ನೂ, ಯೋಗಿಗಳನ್ನೂ ವಿನಯ, ಭಯ, ಭಕ್ತಿಪೂರ್ವಕವಾಗಿ ಸೇವಿಸುತ್ತ ಅವರವರ ಆಜ್ಞೆಗಳನ್ನು ಪಾಲಿಸುತ್ತ ಆನಂದದಿಂದ ದಿನಗಳನ್ನು ಕಳೆಯತೊಡಗಿದರು.

ಸದ್ಗುರುವಿನ ಕೃಪೆಗೆ ಪಾತ್ರರಾದ ಮೇಲೆ ಎಲ್ಲ ಸತ್ಪುರುಷರು ಅನುಗ್ರಹಿಸುವಲ್ಲಿ ಆಶ್ಚರ್ಯವೇನು ? ಇವರ ಹಿರಿಯ ಸಹೋದರಿಯ ಶ್ವಶುರರಾದ ಶ್ರೀ ವೆಂಕಟೇಶ ಯೋಗಿಗಳೆಂಬವರು ಇವರ ಸಾಧನ ಮಾರ್ಗವನ್ನು ಕಂಡು ಸಂತೋಷಚಿತ್ತರಾಗಿ ಇವರಿಗೆ ಶಿವಷಡಕ್ಷರಿ, ರಾಮಷಡಕ್ಷರಿ ಇತ್ಯಾದಿ ಮಹಾಮಂತ್ರಗಳನ್ನುಉಪದೇಶ ಮಾಡಿದರು. ಅವರು ಇವರಿಗೆ ವಿವಿಧರಹಸ್ಯಗಳನ್ನು ತಿಳಿಯಪಡಿಸಿದ್ದರಿಂದ ಇವರ ಸಾಧನಮಾರ್ಗವು ಸುಗಮವಾಯಿತು. ಅಂಥವರ ಸಂಗತಿಯ ಲಾಭವು ದೊರೆತಬಳಿಕ ಕೇಳುವದೇನು ? ಸತ್ಪುರುಷರ ದರ್ಶನವು ಸಾಧನದಿಶೆಯಲ್ಲಿ ದೊರೆತರೆ ಸಾಧಕರಿಗೆ ಮುಂದಿನಮಾರ್ಗವು ಸುಗಮವಾಗುವದು. ತದನಂತರ ಶ್ರೀಗಳವರ ತಂದೆಯವರ ಗುರುಗಳಾದ ಶ್ರೀವೆಂಕಟೇಶಾನುಯೋಗಿಗಳವರ ದರುಶನವು ಶ್ರೀಗಳವರಿಗೆ ಲಭಿಸಿತು. ಪ್ರಕೃತ ಶೃಂಗೇರಿಸ್ವಾಮಿ (ಶ್ರೀ ಶ್ರೀ ಚಂದ್ರಶೇಖರ ಭಾರತಿ ಶ್ರೀಪಾದಂಗಳವರು) ಗಳಿಗೆ ಪರಮೇಷ್ಠಿ ಗುರುಗಳಾದ ಶ್ರೀನರಸಿಂಹಭಾರತಿ ಸ್ವಾಮಿಗಳಿಂದ "ಕಲಿಯುಗದ ಶುಕಮುನಿಗಳೆಂಬ" ಬಿರುದಾಂಕಿತರಾದ ವೆಂಕಟರಾಮ ಯೋಗಿ

ಗಳು ಇವರಿಗೆ ವಿವಿಧ ರಹಸ್ಯಗಳನ್ನು ಅನುಗ್ರಹಿಸಿದರು. ಈ ಗುರುಗಳಿಂದ ಭಕ್ತಿಯೋಗಪೂರ್ವಕ ಕರ್ಮಾನುಷ್ಠಾನವು ರೋಮ ರೋಮಾಂಕಿತ ಗಾತ್ರವು ಆವರ ಬಾಷ್ಪಪೂರಿತ ನೇತ್ರವು, ಗದ್ಗದಿತ ಸ್ವರಪೂರಿತ ಕಂಠವು ಭಕ್ತಿಸ್ತಬ್ಧ ಮಾನಸಪೂರ್ವಕ ಮೌನವು ನಿರುದ್ಧಪ್ರಾಣವು, ಇವುಗಳಿಂದ ಶೋಭಿಸುತ್ತಿದ್ದ ಶ್ರೀಗಳವರಿಗೆ ಈ ಸ್ವಾಮಿಗಳ ಪರಮ ಗುರುಗಳಾದ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತಿ ಸ್ವಾಮಿಗಳವರು ಬೆಂಗಳೂರಿನಲ್ಲಿ ಅನುಗ್ರಹಿಸಿದರು. ಶ್ರೀಗಳವರಿಗೆ ಶೃಂಗೇರಿ ಸ್ವಾಮಿಗಳಲ್ಲಿ ನಿರ್ವಿವಾದ ಭಕ್ತಿಯು ನೆಲೆಗೊಂಡು ತಮ್ಮ ಗುರುಗಳೇ - ಜಗದ್ಗುರುಗಳು, ಜಗದ್ಗುರುಗಳೇ ತಮ್ಮ ಗುರುಗಳು. ಎಂಬುವ ಐಕ್ಯಭಾವರೂಪ ಚಾತುರ್ಥ್ಯ ಭಕ್ತಿ ಪ್ರಾದುರ್ಭಾವವಾಯಿತು.

ಶ್ರೀಗಳವರು ತಮ್ಮ ಮಾತಾ–ಪಿತ್ರಾದಿಗಳು ಜೀವಂತವಿರುವ ಕಾಲಕ್ಕೆನೇ ಕಾಶೀ–ರಾಮೇಶ್ವರಗಳನ್ನು ಸಂದರ್ಶಿದರು. ಕಾಶಿಯಲ್ಲಿ ಬ್ರಹ್ಮಾನಂದ ಸ್ವಾಮಿಗಳಿಂದ ದತ್ತಾತ್ರೇಯ ಮಂತ್ರೋಪದೇಶವಾಯಿತು. (ಕ್ರಿ.ಶ. ೧೯೦೯) ದತ್ತಾತ್ರೇಯ ಮಂತ್ರೋಪದೇಶದಾರಭ್ಯವಿಶೇಷವಾಗಿ ದತ್ತಾತ್ರೇಯ ಮಂತ್ರಾನುಷ್ಠಾನವನ್ನು ಮಾಡಹತ್ತಿದರು. ತದನಂತರ ಒಂದು ವರ್ಷಕ್ಕೆ ದತ್ತಾತ್ರೇಯ ಮೂಲಮಂತ್ರವನ್ನು ನಿಯಮಬದ್ಧರಾಗಿ, ಯೋಗಪೂರ್ವಕವಾಗಿ ಪುರಶ್ಚರಣಮಾಡಹತ್ತಿದರು. ಶ್ರೀದತ್ತದಿಗಂಬರರ ಮೂಲಮಂತ್ರದಿಂದ ವಿವಿಧರೋಗಗಳನ್ನು ನಿವಾರಿಸಿದರು. ಪಿಶಾಚಿಬಾಧೆಯನ್ನು ಬಂಧಿಸಿದರು. ಇಷ್ಟಾರ್ಥಗಳನ್ನು ಕೊಟ್ಟರು. ವಿವಿಧೋಪಕಾರಗಳನ್ನು ಮಾಡಿದರು. ಇವರು ಯೋಗಪೂರ್ವಕ ಜಪಾನುಷ್ಠಾನದಿಂದ ವಿವಿಧ ಜನರನ್ನು ಶಿಷ್ಯರನ್ನು ಮಾಡಿಕೊಳ್ಳುತ್ತಿದ್ದರು. ಜನರಿಗೆ ಅಧ್ಯಾತ್ಮ ಮಹಿಮೆಗಳನ್ನು ತೋರಿಸಲಿಕ್ಕೆ ಉತ್ಸಾಹದಿಂದ ಪ್ರವರ್ತಿಸುತ್ತಿದ್ದರು. ಇವರು ಶಿಷ್ಯರಿಗೆ ತೋರಿಸಿದ ಮಹಿಮೆಗಳು ಸಾವಿರಾರು ಇರುತ್ತವೆಂದು ಹೇಳಲು ಅಣುಮಾತ್ರವೂ ಸಂದೇಹವಿಲ್ಲ. ದೃಷ್ಟಾಂತಕ್ಕೆ ಒಂದೆರಡು ತಿಳಿಸುವಾ.

೨೧ ನೇಯ ವಯಸ್ಸಿನಲ್ಲಿಯೇ (೧೯೧೦ರಲ್ಲಿ) ೧೦ವರ್ಷಗಳಿಂದ ಅನ್ನ, ನೀರು, ಬಟ್ಟೆಗಳಿಗೆ ಅವಕಾಶಕೊಡದಂತೆ ಬಾಧಿಸುವ ಪಿಶಾಚವನ್ನು ತೊಲಗಿಸಿದರು. ೨೨–೨೩ ನೆಯ ವಯಸ್ಸಿನಲ್ಲಿ ದೇಹವು ಕುಬ್ಜರೂಪಕವಾಗಿದುದ್ದನ್ನು ಆ ರೋಗಿಯ ದೇಹಸ್ಪರ್ಶಮಾಡದೇ ದಂಡಸ್ಪರ್ಶದಿಂದ ತದ್ರೋಗವನ್ನು ನಿವಾರ

ಣಮಾಡಿದರು. ೨೪-೨೫ ನೆಯದರಲ್ಲಿ ವೃಶ್ಚಿಕ, ಸರ್ಪ, ಮಾರಿಕಾ ಇತ್ಯಾದಿ ಬಾಧೆಗಳನ್ನು ಉಚ್ಚಾರಣಮಾತ್ರದಿಂದಲೇನಿವಾರಿಸಿದರು. ಶ್ರೀಗಳವರು ಕಾಶೀ ಪುರಿಯಲ್ಲಿರುವಾಗ ಜಾನಕೀರಾಮ ಎಂಬುವವನಿಗೆ ಉಪದೇಶಮಾಡಿದರು. ಶ್ರೀಗಳವರು ರಾಜಕೀಯ ಯಾವ ಉದ್ಯೋಗವನ್ನೂ ನೌಕರಿಯನ್ನು ಅಪೇಕ್ಷಿಸದೇ ತಮ್ಮ ಕಾಲವನ್ನು ಸಂಸ್ಕೃತವ್ಯಾಸಂಗವನ್ನೂ ವೇದಾಂತಗ್ರಂಥಗಳ ಅವಲೋಕನವನ್ನೂ ಮಾಡುವದರಲ್ಲಿ ವೇಳೆಯನ್ನು ಕಳೆಯಹತ್ತಿದರು. ಗುರುಗಳ



ಶ್ರೀಮಜ್ಜಗದ್ಗುರು ಶ್ರೀ ಪಾಲುಕೇಶ್ವರ ಭಾರತಿ ಮಹಾಸ್ವಾಮಿಗಳವರು
ಕೌಪೀನಧಾರಿಗಳಾಗಿ ಧ್ಯಾನಮಗ್ನರಾಗಿರುವರು.

ಉಪದೇಶಾಮೃತದಂತೆ ಶೀತೋಷ್ಣಗಳ ದ್ವಂದ್ವಗಳಿಗೊಳಪಡದೇ ಕೌಪೀನಧಾರಿಗಳಾಗಿರಹತ್ತಿದರು. ಕಠೋರವಾದ ಬ್ರಹ್ಮಚರ್ಯವನ್ನು ದೃಢವಾಗಿ ಸಾಧಿಸುತ್ತ ಬಂದರು. ಶ್ರೀಗಳವರ ತಂದೆಯವರು ಶ್ರೀಗಳವರಿಗೆ ವಿವಾಹ ಮಾಡಲು ವಿವಿಧಪೂರ್ವಕವಾಗಿ ಪ್ರಯತ್ನಪಟ್ಟರು. ಆದರೆ ಶ್ರೀಗಳವರು ಸಂಸಾರದ ವ್ಯಾಮೋಹಕ್ಕೊಳಗಾಗದೆ ಬ್ರಹ್ಮಚಾರಿಗಳಾಗಿಯೇ ಉಳಿಯುವ ತಮ್ಮ ನಿರ್ಧಾರವನ್ನು ವ್ಯಕ್ತಪಡಿಸಿದರು. ಶ್ರೀಗಳವರ ಅಣ್ಣಂದಿರೂ ದೃಢ ವಿರಾಗಿಗಳಾಗಿ ವಿಶೇಷಶಾಸ್ತ್ರಪರಿಚಯವುಳ್ಳವರಾಗಿ ಶಾಸ್ತ್ರೋಕ್ತ ಅನುಷ್ಠಾನವನ್ನೇ ಅವಲಂಬಿಸಿದ್ದರು.

೧೯೧೦ನೇ ಇಸ್ವಿಯಲ್ಲಿ ಶ್ರೀಗಳವರ ತಂದೆಯವರು ಸ್ವರ್ಗಸ್ಥರಾದರು. ಆಗ ಇವರ ತಾಯಿಯವರೂ ಹಾಗು ಅಣ್ಣಂದಿರೂ ಶ್ರೀಗಳವರ ಹತ್ತಿರ ಬಂದಿರ ಹತ್ತಿದರು.

ಒರೆಗಲ್ಲಿಗೆ ಹಚ್ಚದಹೊರತು ಚಿನ್ನದ ಪರೀಕ್ಷೆಯಾಗುವದಿಲ್ಲ. ಅದರಂತೆ ಶ್ರೀಗಳವರಿಗೆ ಬ್ರಹ್ಮಚರ್ಯದ ಪರೀಕ್ಷೆಯ ಕಾಲವೂ ಒಂದು ಬಂದಿತು. ಕೆಲವು ವರ್ಷಗಳು ಕಳೆಯಲು ಶಂಕರಯೋಗಿ ನಾಮಕ ಮಂತ್ರಯೋಗಿಗಳು ಶ್ರೀಗಳವರಿಗೆ ಶಾಕ್ತೇಯ ದೀಕ್ಷೆಯನ್ನು ಅನುಗ್ರಹಿಸಿದರು. ಪರಾಶಕ್ತಿಯು ಶ್ರೀಗಳವರನ್ನು ವಿವಿಧರೂಪಕವಾಗಿ ಪರೀಕ್ಷಿಸಿದರೂಸಹ ಶ್ರೀಗುರುಚರಣ ಧ್ಯಾನ ಪ್ರಭಾವ ಜನಿತಯೋಗಶಕ್ತಿಯಿಂದ ಪರಮೇಶ್ವರರಿಗೆ ವಿಧೇಯರಾಗಿ ಜಪಿಸುತ್ತ ಸ್ತುತಿಸುತ್ತ ಪರೀಕ್ಷೆಗಳಿಗೊಳಪಡದೆ ಈ ಪರೀಕ್ಷೆಗಳಷ್ಟೂ ಮುಂದೆ ಪ್ರಾಪ್ತವಾಗುವ ತೊಂದರೆಗಳೆಂದು ನಿರ್ಧರಿಸಿಕೊಂಡರು. ಮತ್ತು ಶ್ರೀಗುರೂಪದಿಷ್ಟ ಕರ್ಮ ಭಕ್ತಿಯೋಗ ಜ್ಞಾನ ವೈರಾಗ್ಯಗಳನ್ನು ವೃದ್ಧಿಮಾಡಿಕೊಳ್ಳುತ್ತ ಉತ್ತರ ಶಾಂಭವಿಯ ವೃಷ್ಟಿಯನ್ನು ವೃಢಮಾಡಿಕೊಳ್ಳುತ್ತ ಪ್ರಜ್ಞಾನ ಘನಯೋಗ ನಿಷ್ಠಾಗರಿಷ್ಠರಾಗಿ ಪ್ರಕಾಶಿಸುತ್ತಿದ್ದರು. ಹೀಗೆ ವ್ಯವಹರಿಸುತ್ತ ಸಂಚರಿಸುತ್ತ ಬೋಧಿಸುತ್ತ ಉಪಕಾರಮಾಡುತ್ತಿರುವ ಕಾಲದಲ್ಲಿ ಕೆಲವು ದಂಪತಿಗಳು ನಮ್ಮ ಬ್ರಹ್ಮಚಾರಿಗಳ ದರ್ಶನಕ್ಕೆ ಬಂದರು. ಅವರು ಶ್ರೀಗುರುಗಳಿಗೆ ಸೇವಾ ಸತ್ಕಾರವಂದನ ಪೂಜನಾದಿಗಳನ್ನು ಮಾಡುತ್ತ ಅಧ್ಯಾತ್ಮವಿದ್ಯೋಪದೇಶವನ್ನು ಬಯಸುತ್ತಿರುವರು. ಹೀಗೆ ವಿವಿಧ ಜನರಿಗೆ ಬಾಲ, ಯುವಕ, ವೃದ್ಧ, ಸ್ತ್ರೀ, ಪುರುಷ, ದಂಪತಿಗಳಿಗೆ ಉಪದೇಶಮಾಡುತ್ತ ಇರಲು ಒಬ್ಬರು ಸುವಾಸಿನಿಯರು ಭರ್ತೃಸಮೇತವಾಗಿ ಗುರುಗಳನ್ನು ಸೇರಿ

ಆಧ್ಯಾತ್ಮ ವಿದ್ಯೋಪದೇಶವನ್ನು ಮಾಡಲು ಬೇಡಿಕೊಂಡರು. ಅವರಿಷ್ಟದಂತೆ ಗುರುಸಾಂಪ್ರದಾಯಾನುಸಾರವಾಗಿ ಕರ್ಮ, ಭಕ್ತಿ, ಯೋಗ ಸಾಧನಗಳನ್ನು ಉಪದೇಶಿಸಿದರು. ಹೀಗಿರುತ್ತಿರಲು ಆ ಸುವಾಸಿನಿಯುರು ತನುಗೆ ಅಧ್ಯಾತ್ಮ ಬುದ್ಧಿಯು ಸ್ಥಿರವಾಗಲು ಉಪಭೋಗದ ಬುದ್ಧಿಯು ನಿರ್ಮೂಲವಾಗಲು ಅನುಗ್ರಹಿಸಬೇಕೆಂದು ವಿಜ್ಞಾಪಿಸಿದರು. ಆ ವಿಜ್ಞಾಪನಕ್ಕೆ ಶ್ರೀಗುರುಗಳವರು "ನಿಮ್ಮ ಇಷ್ಟಾರ್ಥವನ್ನು ಅನುಗ್ರಹಿಸುವದಕ್ಕೆ ಸರ್ವಗುರುರೂಪಿಗಳಾದ ಶ್ರೀ ಶೃಂಗೇರಿ, ಜಗದ್ಗುರುಗಳಾದ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತಿಸ್ವಾಮಿಗಳವರು ಇದ್ದಾರೆಂದು" ಸಂಪೂರ್ಣಭಕ್ತಿ ಪ್ರಯುಕ್ತಿಗಳಿಂದ ಹೇಳಿ ವಿಶ್ವಾಸವೇ ಮುಖ್ಯಕಾರಣವೆಂದು ಉದ್ಘಾಟಿಸಿದರು. ಶ್ರೀಗಳವರು ಪ್ರತಿಯೊಂದು ಕಾರ್ಯದಲ್ಲಿ ಶ್ರೀ ಸಚ್ಚಿದಾನಂದ ಶಿವಾಭಿನವ ಭಾರತೀ ಸ್ವಾಮಿಗಳನ್ನೇ ಸರ್ವ ದೇವತಾರೂಪಿಯಾಗಿಯೂ, ಸರ್ವ ಗುರುರೂಪಿಯಾಗಿಯೂ ನಿಶ್ಚಯಿಸಿ ಅವರ ಆಜ್ಞಾಪ್ರಕಾರವೇ ಪ್ರವರ್ತಿಸುತ್ತಿದ್ದರು. ಆ ರಾತ್ರಿ ಆ ಸುವಾಸಿನಿಯರಿಗೆ ಬ್ರಹ್ಮಚಾರಿಗಳನ್ನು ಪುತ್ರರೆಂದು ಭಾವಿಸಿ ನಡೆಯಬೇಕೆಂತಲೂ ಬ್ರಹ್ಮಚಾರಿಗಳು ಆ ಸಾವಿತ್ರಿ ಸುವಾಸಿನಿಯರನ್ನು ಮಾತೃರೂಪದಿಂದ ಭಾವಿಸಿ ನಡೆಯಬೇಕಂತಲೂ ಶ್ರೀ ಶೃಂಗೇರಿ ಸಚ್ಚಿದಾನಂದ ಶಿವಾಭಿನವ ಭಾರತಿ ಸ್ವಾಮಿಗಳು ಸ್ವಪ್ನದಲ್ಲಿ ಅಪ್ಪಣೆಕೊಡಿಸಿದರು.

ನಮ್ಮ ಗುರುಗಳಲ್ಲಿ ಅಮೋಘವಾದ ಇಂದ್ರಿಯ ನಿಗ್ರಹವಿದ್ದಿತು. ಅವರು ಜಗದ್ಗುರುಗಳ ಆಜ್ಞಾ ಪ್ರಕಾರ ಜಿತೇಂದ್ರಿಯರಾಗಿದ್ದರು. ಅವರು ಆ ಸುವಾಸಿನಿಯರನ್ನು ಮಾತೃರೂಪಿಣಿ ಎಂದು ತ್ರಿಕರಣಪೂರ್ವಕವಾಗಿ ಭಾವಿಸಿ ಅವರ ಆಜ್ಞೆಗಳನ್ನು ಪಾಲಿಸುತ್ತಿದ್ದರು. ಆ ಸುವಾಸಿನಿಯು ತಮ್ಮ ಮಾತೆಯೆಂಬ ಭಾವನೆ ಬ್ರಹ್ಮಚಾರಿಗಳಿಗೆ ದೃಢವಾಯಿತು. ಆ ಸುವಾಸಿನಿಗೆ ಬ್ರಹ್ಮಚಾರಿಗಳು ತನ್ನ ಮಗನೆಂಬ ಭಾವನೆ ದೃಢವಾಯಿತು. ಮಾತೃರೂಪಿಣಿಯಾದ ಆ ಸುವಾಸಿನಿಯರ ಆಜ್ಞೆಗಳನ್ನು ಪರಿಪಾಲನಮಾಡುತ್ತ ಅವರು ನಿಷೇಧಿಸುವ ವಿಷಯಗಳನ್ನು ಬಿಡುತ್ತ ಇರುತ್ತಿದ್ದರು. ಸ್ವಲ್ಪವಾದರೂ ಸಂದೇಹವಿಲ್ಲದೇ ಸಂಪೂರ್ಣ ಭಯಭಕ್ತಿ ಶ್ರದ್ಧಾ ವಿಶ್ವಾಸಗಳಿಂದ ಅವರ ಮಾತುಗಳನ್ನು ಪರಿಪಾಲಿಸುತ್ತಿದ್ದರು. ಆ ಸುವಾಸಿನಿಯರಿಗೆ ಗುರುಗಳ ವಿನಃ ಬೇರೆ ಪುತ್ರರಾಗಲಾರರೆಂದು ಶ್ರೀ ಶೃಂಗೇರಿ ಸ್ವಾಮಿಗಳವರ ಅಪ್ಪಣೆಯು ಪ್ರಕಾರ ಆ ಸುವಾಸಿನಿಯರಿಗೆ ಭಾವವು ದೃಢವಾಗುವಂತೆ ಪ್ರವರ್ತಿಸಿ ಅವರಿಗೆ

ಸಂಪೂರ್ಣಮಾತ್ರ ಭಾವವನ್ನು ಉಂಟುಮಾಡಿಸಿದರು. ನಮ್ಮ ಬ್ರಹ್ಮಚಾರಿಗಳು ಪ್ರತಿದಿನವೂ ಅಹಲ್ಯಾ ಸ್ತೋತ್ರವನ್ನೂ ಪಾರಾಯಣ ಮಾಡುತ್ತಿದ್ದರು.

ಒಂದು ದಿವಸ ಪ್ರಾತ:ಕಾಲದಲ್ಲಿ ಆ ಸುವಾಸಿನಿಯರು ಬಂದು ಗುರುಗಳವರ ಪಾದದಲ್ಲಿ ಅಭಿವಂದನೆಯನ್ನೂ ಮಾಡಲು ಶ್ರೀರಾಮಚಂದ್ರಚರಣ ಭಕ್ತಿಪರಿಪೂರಿತ ಯೋಗದೃಷ್ಟಿಯಿಂದ ಆ ಸುವಾಸಿನಿಯರ ಮಸ್ತಕವನ್ನು ವಾಮಹಸ್ತದಿಂದ ಸ್ಪರ್ಶಿಸಲು ಅಖಂಡ ನಿರ್ವಿಕಲ್ಪ ಸಮಾಧಿ ಪ್ರಾಪ್ತವಾಯಿತು. ಹದಿನೈದು ನಿಮಿಷಕಾಲವು ಜಾಗ್ರತಾವಸ್ಥೆಯಲ್ಲಿಯೇ ಪ್ರಪಂಚ ಭಾನವು ಸಂಪೂರ್ಣವಾಗಿರಲಿಲ್ಲ. ನಿದ್ದೆಗಿಂತಲೂ ನಿದ್ದೆಯಂತಾಯಿತು. ಇದು ಶಕ್ತಿಪಾತ ರಹಸ್ಯವೆಂದೂ ಶ್ರೀಪರಾಶಕ್ತಿ ಅನುಗ್ರಹ ರಹಸ್ಯವೆಂದೂ ಗುರುಗಳವರು ಪರಾಶಕ್ತಿಗೆ ನಮಸ್ಕರಿಸಿದರು.

ಎರಡು ಮೂರು ವರ್ಷಗಳು ಕಳೆಯಲು ಆ ಸುವಾಸಿನಿಯರ ಭರ್ತೃರಿಗೆ ಆಸನ್ನ ಮರಣವಾದಂತೆ ವ್ಯಾಧಿ ಪ್ರಾಪ್ತವಾಯಿತು. ಮಾತೃರೂಪಿಣಿಯಾದ ಆ ಸುವಾಸಿನಿಯರ ದುಃಖವನ್ನು ಪರಿಹಾರಮಾಡಲು ಅವರ ಆಜ್ಞಾಪ್ರಕಾರ ಕುಂಭಕ ಪೂರಕ ದತ್ತಾತ್ರೇಯ ಮೂಲಾಮಂತ್ರದಿಂದ ಆಕರ್ಷಣ ಮಾಡಲು ಆ ಸುವಾಸಿನಿಯರ ಹತ್ತಿರ ಭರ್ತೃದು ಹನ್ನೆರಡುತಾಸು ಸ್ವಪ್ನವಿಲ್ಲದೆ ನಿದ್ದೆಯನ್ನು ಹೊಂದಿ ರೋಗವಿಮುಕ್ತರಾದರು. ಮುಂದೆ ೨-೩ ವರ್ಷಗಳ ತರುವಾಯ ಆ ಸುವಾಸಿನಿಯರ ಮಾವಂದಿರಿಗೆ ರೋಗವು ಪ್ರಾಪ್ತವಾಯಿತು. ಆ ಸುವಾಸಿನಿಯರ ಅತ್ತೆ ಮಾವಂದಿರೂ ಸಹ ಗುರುಗಳಿಂದ ಉಪದೇಶಿಸಲ್ಪಟ್ಟವರಾಗಿದ್ದರು. ಅವರ ಮಾವಂದಿರಿಗೆ ಆತ್ಮಮಂತ್ರಾರ್ಥ ಲಕ್ಷವನ್ನು ಶ್ರೀಗುರುಗಳವರು ಬೋಧಿಸಿದರು. ರೋಗಿಗಳಾಗಿದ್ದ ಕಾಲದಲ್ಲಿ ಅವರಿಗೆ ಒಂದು ವಿಷಯವನ್ನು ಉಪದೇಶಿಸಿದರು. "ಮರಣಕಾಲದಲ್ಲಿ ನಾವು ಬರುತ್ತೇವೆ ನೀವು ಉಸಿರಾಡಿಸದೆ ಬಾಯಿತೆಗೆಯುತ್ತೀರಿ. ಆಗಿನ ಕಾಲಕ್ಕೆ ನಾವು ತೋರಿಸುವ ಲಕ್ಷವನ್ನು ನೀವು ಬಾಯಿಮುಚ್ಚಿಕೊಂಡು ಲಕ್ಷಿಸಬೇಕೆಂದು" ಆಜ್ಞೆಮಾಡಿದರು. ಅದರಂತೆ ಮರಣಕಾಲ ಒದಗಿತು. ಗುರುಗಳವರ ಅಪ್ಪಣೆಯಂತೆ ಲಕ್ಷದಲ್ಲಿ ಅವರು ಪ್ರಾಣವನ್ನು ಬಿಟ್ಟರು. ಇಂಥ ಗುರುಗಳವರ ಮಹಿಮಾತಿಶಯಗಳು ಹೇರಳವಾಗಿರುತ್ತವೆ. ಈ ಮಾಂತ್ರಿಕ ಯೋಗಿಕ ಮಹಿಮಾತಿಶಯಗಳು ಅಹಂಕಾರಕ್ಕೆ ಕಾರಣವಾಗುವವೆಂದು ಇವುಗಳನ್ನು ಗುರುಗಳು ಕಡಿಮೆ ಮಾಡುತ್ತ ಬಂದರು.

# ಸದ್ಗುರು ಮತ್ತು ಲೋಕೋಪಕಾರ



೧೯೧೯ ರಲ್ಲಿ ಶ್ರೀಗಳವರು ದತ್ತಾತ್ರೇಯಾಂಶಸಂಭೂತರಾದ ಮಾಣಿಕ ಪ್ರಭುಗಳ ಕ್ಷೇತ್ರಕ್ಕೆ ಹೋಗಿ ದತ್ತಾತ್ರೇಯ ಅನುಗ್ರಹವನ್ನು ಬಲಪಡಿಸಿಕೊಂಡರು. ಇವರು ತ್ರಿಕಾಲಗಳಲ್ಲಿ ಶೀತೋದಕ ಸ್ನಾನವು ಕೌಪೀನ ಧಾರಣವು ಆತ್ಮಧ್ಯಾನವು, ಭಸ್ಮಲೇಪನವು, ಸದ್ಗುಣಾಭರಣವು ಇತ್ಯಾದಿಗಳಿಂದ ಶೋಭಿಸುತ್ತಿರುವಾಗ ಆಂಧ್ರ, ಕರ್ನಾಟಕ ದೇಶಗಳಿಂದ ಜಾತಿಬೇಧವಿಲ್ಲದೆ ವಿವಿಧ ಜಾತಿಯ ಜನರು ಬರಹತ್ತಿದರು. ವೈಷ್ಣವರು, ಶ್ರೀವೈಷ್ಣವರು, ಲಿಂಗಧಾರಿಗಳು, ಮ್ಲೇಂಛರು ಸಹ ದ್ವೇಷಭಾವವಿಲ್ಲದೆ ಇವರ ದರ್ಶನಕ್ಕೆ ಪರಮಾರ್ಥಬೋಧ ಶ್ರವಣಕ್ಕೆ, ರೋಗಾದಿಗಳ ನಿವಾರಣಕ್ಕೆ ತಂಡೋಪತಂಡವಾಗಿ ಬರಹತ್ತಿದರು. ಇಂಥ ಸಮಯದಲ್ಲಿ ಗದ್ವಾಲ ಆಸ್ಥಾನ ಸಂಗೀತ ವಿದ್ಯಾಪರೀಕ್ಷಕರಾದ ಗಾಯಕ ಶಿರೋಮಣಿ ವೈದ್ಯನಾಥ ಶಾಸ್ತ್ರಿಗಳೆಂಬವರು ಆಂಧ್ರ ದೇಶದಿಂದ ಗುರುಗಳ ದರ್ಶನಕ್ಕೆ ಬಂದರು. ಅವರು ತಮ್ಮ ಸಂದೇಹಗಳನ್ನು ಗುರುಗಳ ಅಣ್ಣಂದಿರಲ್ಲಿ ನಿವೇದಿಸಿ ಅವರಿಂದ ಪಡೆದ ಉತ್ತರಗಳಿಗೆ ತೃಪ್ತಿ ಹೊಂದದೆ ಖಿನ್ನರಾಗಿ ಗುರುಗಳನ್ನು ಈಶ್ವರ ದರ್ಶನ ವಿಷಯವಾಗಿ ಪ್ರಶ್ನೆ ಮಾಡಿದರು. ಆ ಪ್ರಶ್ನೆಗೆ ನಮ್ಮ ಗುರುಗಳು— "ಈ ಪ್ರಶ್ನೆ ಉತ್ತರ ಕೊಡಿಸಲ್ಪಡಿಸುವ ಪ್ರಶ್ನವಲ್ಲ. ದರ್ಶನ ಪಡೆಯುವ ಪ್ರಶ್ನವು." ಎಂದು ಪರಮೋತ್ತಮ ಸಮಾಧಾನವನ್ನು ಹೇಳಿ— "ನಿಮಗೆ ಇಷ್ಟ ಇದ್ದು ದರ್ಶನ ಹೊಂದುವದಕ್ಕೆ ಸಿದ್ಧರಾದಲ್ಲಿ ಶ್ರೀಗುರುಚರಣಾನುಗ್ರಹದಿಂದ ದರ್ಶನ ಕೊಡುವದಕ್ಕೆ ಸಿದ್ಧರಾಗಿದ್ದೇವೆ." ಎಂದು ನಮ್ಮ ಪೂಜ್ಯ ಆರ್ಯರು ನಿವೇದಿಸಿದರು. ಇಂಥ ಪರಿಸ್ಥಿತಿಯಲ್ಲಿ ಒಂದು ರಾತ್ರಿ ಹತ್ತು ಘಂಟೆಯ ಸಮಯದಲ್ಲಿ ಆ ಶಾಸ್ತ್ರಿಗಳು ದರ್ಶನಾಭಿಲಾಷಿಗಳಾಗಿ ಸಿದ್ಧರಾದರು. ನಮ್ಮ ಯೋಗಿ ಪುಂಗವರು ಆ ಶಾಸ್ತ್ರಿಗಳನ್ನು ಕೂಡುವದಕ್ಕೆ ನಿಯಮಿಸಿ ಹತ್ತಿರ ಕುಳಿತುಕೊಂಡು ಕುಂಭಕಾನುಷ್ಠಾನಪೂರ್ವಕ ದತ್ತಮಾಲಾಮಂತ್ರ ಜಪವನ್ನು ಮಾಡುತ್ತ ಅವರ ವೀಣಾದಂಡವನ್ನು ಸ್ಪರ್ಶಿಸಿ ೪-೫ ನಿಮಿಷಗಳಲ್ಲಿ ಒಂದು ಸ್ಥಾನದಲ್ಲಿ ಲಕ್ಷ್ಯವನ್ನು ತೋರಿಸಿ ಅಲ್ಲಿ ವಿಚ್ಛಿನ್ನವಾಗದಂತೆ ಕಣ್ಣು ಮುಚ್ಚಿಕೊಂಡು ನೋಡಲು

ಶಾಸ್ತ್ರಿಗಳಿಗೆ ಅನುಗ್ರಹಿಸಿದರು. ಕೂಡಲೇ ಆ ಶಾಸ್ತ್ರಿಗಳಿಗೆ ಪರಮಾದ್ಭುತ ಪರಂಜ್ಯೋತಿಯ ದರುಶನವಾಯಿತು. ತಜ್ಜ್ಯೋತಿಯನ್ನು ಐದಾರು ನಿಮಿಷ ನೋಡಿದರು. ಗುರುಗಳವರು ಆ ಶಾಸ್ತ್ರಿಗಳನ್ನು ಎಚ್ಚರಗೊಳಿಸಿ ಏನು ದರುಶನ ವಾಯಿತೆಂದು ಪ್ರಶ್ನಿಸಿದರು. ಶಾಸ್ತ್ರಿಗಳು ಗದ್ಗದ ಸ್ವರದಿಂದ ಜ್ಯೋತಿ ದರ್ಶನ ವಾಯಿತೆಂದು ಹೇಳಿಕೊಂಡರು. ಪುನಃ ಕಣ್ಣು ಮುಚ್ಚಿಕೊಂಡು ನೋಡಲು ಆ ಲಕ್ಷ್ಯವನ್ನು ತೀರಿಸಿದ ನಂತರ ಪುನಃ ಆ ಜ್ಯೋತಿಯನ್ನೇ ದರ್ಶನಮಾಡಿ ದರು. ಇವರಂತೆ ೩-೪ ಸಲ ಜ್ಯೋತಿ ದರ್ಶನವನ್ನು ಮಾಡಿಕೊಂಡು ಮುಂದೆ ಕೂಡಲು, ನೋಡಲು ಶಕ್ತಿ ಸಾಲದೆಂದು ಶಾಸ್ತ್ರಿಗಳು ವಿಜ್ಞಾಪಿಸಿಕೊಂಡರು. ಅನಂತರ ನಮ್ಮ ಪೂಜ್ಯರು ಆ ಪರಂಜ್ಯೋತಿಯ ಬೆಳಕು ಎದುರಿಗಿದ್ದ ದೀಪದ (ಲ್ಯಾಂಪ) ಬೆಳಕಿನಂತೆ ಇರುತ್ತದೆ. ಹೇಗೆ ಎಂದು ಪ್ರಶ್ನಿಸಲು ಈ ದೀಪದ ಬೆಳ ಕಿನ ಸಾವಿರದಷ್ಟು ಪ್ರಕಾಶವಿರುತ್ತದೆಂದು ಉತ್ತರ ಕೊಟ್ಟು ನಮಸ್ಕರಿಸಿದರು. ಶಾಸ್ತ್ರಿಗಳು ತಮಗೆ ಈ ಜ್ಯೋತಿ ದರುಶನವು ಹೃದಯಾಸೆಯಲ್ಲವೆಂತಲೂ ಮಾರ್ಕಂಡೇಯುನಿಗೆ ದರುಶನ ಕೊಟ್ಟ ರೂಪವು ನೋಡಲು ಕುತೂಹಲವಾದ ಹೃದಯಾಸೆ ಇರುತ್ತದೆಂದೂ ವಿಜ್ಞಾಪಿಸಿ ತತ್ಸಾಧನವು ಅನುಗ್ರಹಿಸಬೇಕೆಂದು ಪ್ರಾರ್ಥನೆ ಮಾಡಿದರು. ಅದಕ್ಕೆ ನಿರಾಹಾರಿಯಾಗಿ ಪಯಃಪಾನಾಮೃತದಿಂದ ವಿರುಪಾಕ್ಷ(ಹಂಪಿ) ಕ್ಷೇತ್ರದಲ್ಲಿ (೪೮ ದಿವಸ) ಮಂಡಲವ್ರತವನ್ನುಅನುಷ್ಠಿಸಲು ಶ್ರೀಗಳವರು ಅಪ್ಪಣೆ ಕೊಟ್ಟು ಇದರಂತೆ ಈ ದಿವಸ ರಾತ್ರಿ ಸೂಕ್ಷ್ಮದೇಹದಲ್ಲಿ ನಿನಗೆ ಉಪದೇಶವಾಗುತ್ತದೆಂದು ಹೇಳಿದರು. ಅದಕ್ಕೆ ಶಾಸ್ತ್ರಿಗಳು—"ನಾನು ಇತಃಪೂರ್ವವೂ, ಇದಕ್ಕೆ ಹಿಂದೆ ಶೃಂಗೇರಿ ಸ್ವಾಮಿಗಳ ಕಡೆಗೆ, ಮಾಣಿಕ್ಯ ಪ್ರಭುಗಳ ಕಡೆಗೆ ಹೋದ ಕಾಲದಲ್ಲಿ ಅವರುಗಳು ನಿಮಗೆ ಸ್ವಪ್ನವಾಗುವದು. ಅದರಿಂದ ನಿಮ್ಮ ಇಷ್ಟಾರ್ಥವು ಫಲಿಸುವದೆಂದು ಅನುಗ್ರಹಿಸಿದ್ದರು. ಆದರಂತೆ ನನಗೆ ಏನೂ ಸ್ವಲ್ಪವಾದರೂ ನಿದರ್ಶನವಾಗಲಿಲ್ಲ. ನಾನು ಇದನ್ನು ನಂಬುವ ದಿಲ್ಲ." ಎಂದು ವಿನಯಪೂರ್ವಕವಾಗಿ ಹೇಳಿಕೊಂಡರು. ಅದಕ್ಕೆ ನಮ್ಮ ಬ್ರಹ್ಮಚಾರಿಗಳು— "ಹಾಗೆ ಮಾಡಬಾರದು. ಈ ದಿವಸ ನೀವು ಪರೀಕ್ಷಿಸ ಬೇಕು. ಬೆಳಿಗ್ಗೆ ಜರುಗಿದ ವಿಷಯುವನ್ನು ನಮಗೆ ತಿಳಿಸಬೇಕು." ಎಂದು ಅಪ್ಪಣೆ ಕೊಡಿಸಿದರು. ಆ ರಾತ್ರಿ ಸೂಕ್ಷ್ಮ ದೇಹದಲ್ಲಿ ನಿದರ್ಶನಪೂರ್ವಕ ವಾಗಿ ಉಪದೇಶವಾಯಿತು. ಆ ರಾತ್ರಿ ಬೆಳಗಿತು. ಗುರುವಿಗಿಂತಲೂ ಮುಂಚೆ

ತವಾಗಿ ಆ ಬ್ರಾಹ್ಮಣರು ಎದ್ದು ಆ ಸ್ಥಲವನ್ನು ಬಿಟ್ಟು ಮುಂದಕ್ಕೆ ಹೋಗಿ ಸ್ವಲ್ಪ ದೂರದಲ್ಲಿದ್ದ ಒಂದು ಕಟ್ಟೆಯ ಮೇಲೆ ಕುಳಿತುಕೊಂಡರು. ಆ ಕಟ್ಟೆ ಸಾಧುಗಳ ನಿವಾಸಗೃಹದ ಹಾದಿಯಲ್ಲಿ ಇತ್ತು. ಗುರುಗಳು ಎದ್ದು ಆ ಕಟ್ಟೆಯ ಮುಂದೆ ನಡೆಯಲು ಆ ಪೂಜ್ಯ ದ್ವಿಜರು ಎದ್ದು ಅಭಿವಂದನವನ್ನು ಮಾಡಿ "ತಮ್ಮ ಆಜ್ಞೆಯಂತೆ ಸ್ವಪ್ನದಲ್ಲಿ ಉಪದೇಶಾನುಗ್ರಹವಾಯಿತು." ಎಂದು ನುಡಿದು ಸಂತೋಷಪಟ್ಟು ಅವಿಚ್ಛಿನ್ನವಾಗಿ ಆಶೀರ್ವಾದ ಮಾಡಬೇಕೆಂದು ವಿಜ್ಞಾಪಿಸಿಕೊಂಡರು. "ತಥಾಸ್ತು" ಎಂದು ಗುರುಗಳು ನುಡಿದು ತಮ್ಮ ಗೃಹಕ್ಕೆ ತೆರಳಿದರು. ಇದು ಸ್ವಭಾವಾತೀತ ಪರಮಾದ್ಭುತ ಶ್ರೀಗುರುಚರಣಪ್ರಭಾವವಷ್ಟೇ?

ಹೀಗೆ ಸಂವತ್ಸರಗಳು ಕಳೆಯುತ್ತ ಬಂದವು. ಗುರುಗಳ ದರ್ಶನಕ್ಕೆ ಬಂದ ಭಕ್ತ ಜನರಿಗೆ ತಮ್ಮ ಪಂಚಭೌತಿಕ ದೇಹ ದರ್ಶನವನ್ನು ಕೊಡುವದು ವಿಶೇಷವಲ್ಲವೆಂದು ನಮ್ಮ ಆರ್ಯರು ನಿಶ್ಚಯಿಸಿ ಅಧ್ಯಾತ್ಮ ವಿದ್ಯಾಂಗಗಳಾದ ದಿವ್ಯ ಶಬ್ದ ಶ್ರವಣವು, ದಿವ್ಯ ರೂಪ ದರ್ಶನವು, ದಿವ್ಯ ಸಂಸ್ಪರ್ಶವು, ಸ್ವಸಂಕಲ್ಪ ಆವಿರ್ಭಾವವು ವಿಕಲ್ಪರಹಿತ, ಮನೋಸ್ತಂಭೀಭೂತ ಪ್ರಾಣವು ಮುಂತಾದ ಆಧ್ಯಾತ್ಮಿಕ ಶಕ್ತಿಗಳನ್ನು ಬೋಧಿಸುತ್ತ, ತೋರಿಸುತ್ತ ಪೋಷಿಸುತ್ತಿದ್ದರು. ಶ್ರೀ ಪರಮ ಸದ್ಗುರು ಮಹಾರಾಜ ಚರಣಾನುಗ್ರಹದಿಂದ ಪ್ರಾಪ್ತವಾದ ಶ್ರೀ ದತ್ತಗುರು ಮಂತ್ರದಿಂದಲೂ, ಯೋಗಾಭ್ಯಾಸ ಬಲದಿಂದಲೂ, ಭಕ್ತಜನ ಚಿತ್ತಾಕರ್ಷಣವಾಗುತ್ತ ಅಧ್ಯಾತ್ಮ ಸಂಬಂಧ ದರ್ಶನಾದಿಗಳು ಭಕ್ತ ಜನರಿಗೆ ಆಗಲಿಕ್ಕೆ ಹತ್ತಿದವು. ವಿವಿಧ ದೇಶಗಳಲ್ಲಿ ಶ್ರೀಗುರುಚರಣ ಪ್ರಭಾವ ಕೀರ್ತಿ ಚಂದ್ರಿಕೆ ಪ್ರಕಾಶಿಸಹತ್ತಿತು. ಇಂಥ ಕಾಲದಲ್ಲಿ ದಾಸನೆಂಬ ಒಬ್ಬ ತರುಣನು ನಮ್ಮ ಗುರುಗಳ ಸೇವೆ ಮಾಡುತ್ತ ಅಧ್ಯಾತ್ಮವಿಷಯದಲ್ಲಿ ಆಸಕ್ತಿ ಉಳ್ಳವನಾಗಿದ್ದನು. ನೂರಾರು ಜನರ ಮಧ್ಯದಲ್ಲಿ ಈ ದಾಸನೆಂಬವನು ಯೋಗ್ಯನೆಂದು ತೋರ್ಪಡಿಸುವ ಕಾಲವು ಪ್ರಾಪ್ತವಾಯಿತು. ಆಗ ಶ್ರೀಗಳವರು ಗುರುಗಳನ್ನು ಲಕ್ಷಿಸಿ ನೋಡುವ ಅಭ್ಯಾಸದಲ್ಲಿ ಒಂದು ರಾತ್ರಿ ಆ ದಾಸನೆಂಬವನಿಗೆ ಸುಷುಮ್ನಾ ನಾಡಿಯನ್ನು ಊರ್ಧ್ವಮುಖ ಮಾಡಿಸಿ ಕವಾಟ ಭೇದವನ್ನು ಮಾಡಿಸಿ ೧೨ ವಾರ ಶ್ರೀ ಶಂಕರಾಚಾರ್ಯ ಮೂರ್ತಿ ಸುದರ್ಶನವನ್ನು ಮಾಡಿಸಿದರು. ಇದರಂತೆ ಗುರುಚರಣ ಪ್ರಭಾವವನ್ನು ತೋರಿಸುವ ಕಾಲದಲ್ಲಿ ಮತ್ತೊಬ್ಬ ಯುವಕನು ರುದ್ರಪ್ಪ ಎಂಬುವ ಶಿವಪಾಖಂಡನು ಶಿವಪ್ರಾಶಸ್ತ್ಯವನ್ನು ವಾದ ಮಾಡಹತ್ತಿದನು. ಅವನಿಗೆ ಇದು ಶಿವ-ವಿಷ್ಣು

ಉತ್ಕರ್ಷಾಪಕರ್ಷಗಳ ವಾದದಿಂದ ನಿರ್ಣಯವಾಗಲಾರವೆಂದು ಅವನ ಹತ್ತಿರ ಕೂತುಕೊಂಡು ಬೆನ್ನು ಚಪ್ಪರಿಸಿ ವೀಣಾದಂಡವನ್ನು ಸಂಸ್ಪರಿಸಿ ಲಕ್ಷ್ಯವನ್ನು ತೋರಿಸಿದರು. ಕೂಡಲೇ ಅವನಿಗೆ ಸಮಾಧಿಸ್ಥಿತಿ ಪ್ರಾಪ್ತವಾಯಿತು. ಅವನು ವಿಸ್ಮಯವನ್ನು ಹೊಂದಿ ನಾನು ಪುನಃ ಪ್ರಾಣಬುದ್ಧಿ ಸ್ತಂಭೀಭೂತ ಸ್ಥಿತಿಯನ್ನು ಸಹಿಸಲಾರೆನೆಂದು ವಿಜ್ಞಾಪಿಸಿ ಮಲಗಿದನು. ಆ ರಾತ್ರಿ ನಮ್ಮ ಶ್ರೀಗಳವರ ಗುರುಗಳು ದರ್ಶನವನ್ನುಕೊಟ್ಟು ನಿಶ್ಚಯ ಜ್ಞಾನ ವನ್ನು ಉಪದೇಶಿಸಿದರು. ಇದರಂತೆ ಅನೇಕ ನಿದರ್ಶನಗಳು ಇರುತ್ತವೆ. ಇದ ರಂತೆ ೨೫-೨೬ ವಯಸ್ಸು ಕಳೆಯಿತು. ನಮ್ಮ ಶ್ರೀಗಳವರನ್ನು ಪರಗ್ರಾಮದವರು ತಮ್ಮ ತಮ್ಮ ಸ್ಥಳಗಳಿಗೆ ಕರೆದುಕೊಂಡು ಹೋಗುವವಕ್ಕೆ ಪ್ರಾರಂಭಿಸಿದರು. ಆಯಾ ಗ್ರಾಮಗಳಲ್ಲಿ ಭಕ್ತರಿಗೆ ಅಧ್ಯಾತ್ಮಿಕ ಮತ್ತು ಆದಿಭೌತಿಕ ಪಾಪ ತಾಪ ಗಳನ್ನು ಶ್ರೀಗುರು ಚರಣಾನುಗ್ರಹ ಸಂಪೂರಿತ ಯೋಗ ದೃಷ್ಟಿ ಮಂತ್ರಪ್ರಭಾವ ಗಳಿಂದ ನಿವಾರಿಸುತ್ತ ಅಧ್ಯಾತ್ಮ ರಹಸ್ಯಗಳನ್ನು ಸಾಂಪ್ರದಾಯಾನುಸಾರ ವಾಗಿ ಬೋಧಿಸುತ್ತ ಶೋಭಿಸುತ್ತಿದ್ದರು. ಈ ವಯಸ್ಸಿನಲ್ಲಿ ೪೫ ಜನರು ಕೂಡಿ ಕೊಂಡು ಉತ್ತರಯಾತ್ರೆಯನ್ನು ಕೈಕೊಂಡರು. ಇದು ದ್ವಿತೀಯ ಯಾತ್ರೆಯು.

## — ಸಂನ್ಯಾಸ —

ಶ್ರೀದಕ್ಷಿಣಾಮೂರ್ತಿ ನಾರದರ ವಿಜ್ಞಾಪನದಂತೆ ಭೂಲೋಕದಲ್ಲಿ ಜ್ಞಾನ ಕಾಂಡವನ್ನು ಉದ್ಧರಿಸಲು ಕೇರಳದೇಶದಲ್ಲಿ ಶಂಕರಾಚಾರ್ಯ ನಾಮಕರಾಗಿ ಅವತರಿಸಿ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪನ ಮಾಡಿದರು. ಅವುಗಳ ಪೈಕಿ ದಕ್ಷಿಣ ದಿಕ್ಕಿನಲ್ಲಿ ಮೈಸೂರ ದೇಶದ ಕಡೂರ ಜಿಲ್ಲೆಯಲ್ಲಿ ಇರುವ ಶ್ರಿಂಗಗಿರಿ ಗ್ರಾಮದಲ್ಲಿ ದಕ್ಷಿಣಾಮ್ನಾಯ ಪೀಠವನ್ನು ಸ್ಥಾಪನಮಾಡಿ ಶ್ರೀಮಹಾಕಾಳಿ, ಮಲ್ಲಿಕಾರ್ಜುನ, ಕಾಳಭೈರವ ಆಂಜನೇಯ, ಶ್ರೀಶಾರದಾ ದೇವತಾದಿಗಳನ್ನು ಸ್ಥಾಪನೆಯನ್ನು ಮಾಡಿದರು. ಅಲ್ಲಿ ಸುರೇಶ್ವರಾಚಾರ್ಯ ರನ್ನು ಪೀಠಾಧಿಷ್ಠಿತರನ್ನುಮಾಡಿ ಸುರೇಶ್ವರಾಚಾರ್ಯರ ಪೂರ್ವಾಶ್ರಮದ ಮಂಡನಮಿಶ್ರ ಪಂಡಿತರ ಅರ್ಧಾಂಗಿಯಾದ ಉಭಯ ಭಾರತಿ ದೇವಿ ಸತ್ಯ ಲೋಕಕ್ಕೆ ಹೊರಡಲು ತಮ್ಮ ತಪಃಶಕ್ತಿಯಿಂದ ಆ ಭಾರತಿಯನ್ನು ಆಕರ್ಷಣ ವನ್ನುಮಾಡಿ, ಭೂಲೋಕದ ಶ್ರೀಂಗೇರಿಯಲ್ಲಿ ಇರುವಂತೆ ನಿಶ್ಚಯಿಸಿ ಸ್ಥಾಪಿಸಿ

ದರು. ಮುಂದೆ ಶ್ರೀಗುರು ಪರಂಪರೆ ವಿದ್ಯಾರಣ್ಯಾದಿ ಗುರುಗಳಿಂದ ಬೆಳೆಯುತ್ತ ಬಂತು. ಈಗ ಸುಮಾರು ಐದುನೂರು ವರುಷಗಳಹಿಂದೆ ಶ್ರೀಶೃಂಗೇರಿ ಜಗದ್ಗುರು ಶ್ರೀನರಸಿಂಹ ಭಾರತಿ ಸ್ವಾಮಿಗಳವರು ಉತ್ತರಯಾತ್ರೆಯನ್ನು ದಿಗ್ವಿಜಯಮಾಡಿ ನೇಪಾಳ—ಕಾಶ್ಮೀರ ದೇಶಗಳಿಗೆಹೋಗಿ ಇಪ್ಪತ್ತೈದು ಮೂವತ್ತು ವರುಷ ಪರ್ಯಂತವು ಸ್ವಸ್ಥಲವಾದ ಶ್ರೀಂಗೇರಿಗೆ ಬಂದಿರುವದಿಲ್ಲ. ಶ್ರೀಗುರುಸ್ಥಾನವು ಗುರುಗಳಿಲ್ಲದೆ ಶೋಭಿಸದೆ ಇದ್ದುದನ್ನು ಆಗಿನ ಕಾಲದಲ್ಲಿ ಇದ್ದ ಶಿಷ್ಯ ವೃಂದವು ರಾಜಾಧಿರಾಜಗಳು ಕಂಡು ದುಃಖಿತರಾಗಿ ಗುರುಸ್ಥಾನಕ್ಕೆ ಒಬ್ಬರನ್ನು ಅಭಿಷೇಕಿಸಲು ನಿಶ್ಚಯಮಾಡಿ ಒಬ್ಬ ಗುರುಗಳನ್ನುಮಾಡಿ ಪೀಠ ಗೌರವವನ್ನುಸ್ಥಾಪಿಸಿದರು. ಏತತ್ಕಾಲಾನಂತರ ಬಂದು ವರುಷಕ್ಕೆ ಶ್ರೀಜಗದ್ಗುರು ನರಸಿಂಹಭಾರತಿಸ್ವಾಮಿಗಳವರು ತುಂಗಾ-ಭದ್ರಾ ಸಂಗಮ ಸ್ಥಾನವಾದ ಕೂಡ್ಲೀ ಕ್ಷೇತ್ರಕ್ಕೆ ದಯಮಾಡಿಸಿದರು. ಆವಾಗ ಶ್ರೀಂಗೇರಿಯಲ್ಲಿ ಬೇರೆ ಗುರುಗಳನ್ನು ಏರ್ಪಾಟು ಮಾಡಿದ ವಿಷಯವು ತಿಳಿದು ಅದಕ್ಕೆ ಒಪ್ಪದೆ ಆಗಿನ ಪಾಳೆಯಗಾರರನ್ನು ಕರೆಸಿ ಶ್ರೀಂಗೇರಿಯಲ್ಲಿ ನಡೆಸಿದ ಆಶ್ರಮ ಸ್ವೀಕಾರ ವನ್ನು ಒಪ್ಪುವದಿಲ್ಲ ವೆಂತಲೂ ವಿಧಿಪೂರ್ವಕವಾಗಿ ವಿವಾಹಿತರಾದ ಮಾತಾ-ಪಿತೃಗಳಿಗೆ ಹುಟ್ಟಿದವನು ಪುತ್ರನು ಹ್ಯಾಗೋ ಅದರಂತೆ ಗುರುಗಳಿಂದ ಅಭಿಷೇಕ್ತಿಸಲ್ಪಟ್ಟವನು ಮಾತ್ರವೇ ಗುರುನಾಗುವನು. ಎಂದು ಅಪ್ಪಣೆ ಕೊಡಿಸಿದರು. ರಾಜರಗಳಿಂದ ವಿಶೇಷವಾಗಿ ಶ್ರೀಗಳವರು ಪ್ರಾರ್ಥಿಸಲ್ಪಟ್ಟ ವರಾಗಿ ಶ್ರೀಂಗೇರಿಯಲ್ಲಿ ಜನರಿಂದ ಏರ್ಪಾಟಾಗಿರುವ ಸ್ವಾಮಿಗಳಿಗೆ ಶ್ರೀನರ ಸಿಂಹ ಭಾರತಿ ಸ್ವಾಮಿಗಳವರು ಉಪದೇಶಾದಿಗಳನ್ನುಮಾಡಿ, ಕೂಡ್ಲಿಯಲ್ಲಿ ರುವ ಸ್ವಾಮಿಗಳು ಗುರುಸ್ವಾಮಿ ಪರಂಪರೆಯೆಂತಲೂ ಶ್ರೀಂಗೇರಿಯಲ್ಲಿರುವ ಸ್ವಾಮಿಗಳು ಶಿಷ್ಯ ಪರಂಪರೆಯೆಂತಲೂ ತೀರ್ಮಾನವನ್ನುಮಾಡಿ ಕಾಗದ ಪತ್ರಗಳನ್ನು ಮಾಡಿದ್ದಾಯಿತು. ಇದಕ್ಕೆ ಆಗಿನಕಾಲದ ಕೆಳದಿಬಸಪ್ಪ ನಾಯಕರು ಕೊಟ್ಟಿರುವ ಅಧಿಕಾರ ಪತ್ರದಲ್ಲಿ ಆಸೇತು ಹಿಮಾಚಲ ಪರ್ಯಂತ ಆಚಾರ-ವಿಚಾರಾಧಿಕಾರವು ಕೂಡ್ಲಿಯಲ್ಲಿರುವ ಗುರು ಪರಂಪರೆಯ ಸ್ವಾಮಿ ಗಳಿಗೆ ಇರುತ್ತದೆಂತಲೂ ಶೃಂಗೇರಿಯಲ್ಲಿ ಪುಸ್ತಕ ಸನ್ಯಾಸಮಾತ್ರವಿರು ತ್ತದೆಂತಲೂ ಮೊಹರನಿಶಿಯಿಂದ ಅಧಿಕಾರ ಪತ್ರವನ್ನು ಕೊಟ್ಟಿರುತ್ತದೆ. ಮತ್ತು ಪೂರ್ಣಯ್ಯನವರು ದಿವಾನರಾಗಿರುವಕಾಲಕ್ಕೆ ಶೃಂಗೇರಿ ಸ್ವಾಮಿಗಳು

ಸಂಚಾರ ಹೊರಡಲು ರಹದಾರಿಯನ್ನು ಅಪೇಕ್ಷಿಸಿದ ಕಾಲದಲ್ಲಿ ನಿಮಗೆ ಸಂಚಾರಾಧಿಕಾರವು ಇಲ್ಲ, ನೀವು ಶೃಂಗೇರಿಗೆ ಮರಳಿ ಹೋಗಬೇಕೆಂದು ಪ್ರೋಹರನಿಸಿ ದಸ್ಕತ ಪೂರ್ವಕವಾಗಿ ಬರೆದುಕೊಟ್ಟ ಪತ್ರವಿರುತ್ತದೆ. ಹೀಗೆ ಕೂಡ್ಲಿಯಲ್ಲಿ ಅವಿಚ್ಛಿನ್ನ ಗುರುಪರಂಪರಾ ಶೋಭಿಸುತ್ತದೆ. ಇದು ಅಲ್ಲದೆ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತಿ ಶ್ರೀಗಳವರು ಶಿಷ್ಯಪರಿಗ್ರಹ ವನ್ನು ಮಾಡದೆ ಹೋದರು. ಒಂದು ತಿಂಗಳನಂತರದಲ್ಲಿ ಪ್ರಕೃತ ಶ್ರೀಜಗದ್ಗುರು ಚಂದ್ರಶೇಖರ ಭಾರತಿ ಶ್ರೀಗಳವರಿಗೆ ಆಶ್ರಮವಾಗಿರುತ್ತದೆ.

ಶ್ರೀಗಳವರು ಶ್ರೀರಾಮಚಂದ್ರನ ದಿವ್ಯನಾಮ ಪ್ರಭಾವವು ಶ್ರೀದತ್ತ ಗುರುಮಹಾರಾಜನ ಮಾಲಾಮಂತ್ರ ಪ್ರಭಾವವು ಶ್ರೀಸದ್ಗುರು ರಂಗ ರಾಜೇಂದ್ರ ಮಹಾರಾಜರ ಉಪದೇಶ ಯೋಗಕ್ರಮವು ಪ್ರಾಣಿಗಳಿಗೆ ತೋರಿಸುತ್ತ, ಅನುಗ್ರಹಮಾಡುತ್ತ ಶೋಭಿಸುತ್ತಿದ್ದರು. ಇಂಥ ಸುಸಮಯದಲ್ಲಿ ಶ್ರೀಶಂಕರ ಭಗವತ್ಪಾದಾಚಾರ್ಯರು ಶ್ರೀಗಳವರಿಗೆ ಸ್ವಪ್ನ ದಲ್ಲಿ ದರುಶನವನ್ನು ಕೊಟ್ಟು ನೀವು ಶೀಘ್ರದಲ್ಲಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕು. ನೀವು ಏಳು ವರುಷದ ವಯಸ್ಸಿನಲ್ಲಿಯೇ ತುರೀಯಾಶ್ರಮ ವನ್ನು ಸ್ವೀಕರಿಸಬೇಕಾಗಿತ್ತು. ಕೆಲವು ಕಾರಣಗಳಿಂದ ಅದು ತಪ್ಪಿತ್ತು ಮುಂದೆ ಶೀಘ್ರದಲ್ಲಿ ಸಂನ್ಯಾಸವನ್ನು ಸ್ವೀಕರಿಸಬೇಕು. ಎಂದು ಅಪ್ಪಣೆ ಕೊಟ್ಟರು. ಆಕಾಲದಲ್ಲಿ ಶ್ರೀಗಳವರು ಅಭ್ಯಾಸಮಾಡಿದ ಯೋಗ ಪದ್ಧತಿ ಯಲ್ಲಿ ಅನೇಕ ಅಧ್ಭುತವಿಷಯಗಳು ಇದ್ದವು. ನಾರದಾದಿ ಮಹಾಋಷಿಗಳ ದರುಶನವು ಅವರ ಸಂಭಾಷಣವು ಮತ್ತು ಶ್ರೀವೇಂಕಟೇಶ ಮಾಣಿಕ್ಯಪ್ರಭು ಇತ್ಯಾದಿ ದಿವ್ಯಮೂರ್ತಿಗಳ ಸಂದರ್ಶನೋಪದೇಶಾದಿಗಳು ಶೋಭಿಸುತ್ತಿದ್ದವು. ಇದರಲ್ಲಿ ಒಂದು ನಿದರ್ಶನವನ್ನು ಬರೆಯಬೇಕಾಗಿದೆ. ಭಾಗವತದಲ್ಲಿ ಪ್ರಥಮ ಸ್ಕಂಧದಲ್ಲಿ ದಾಸೀಪುತ್ರನಾದ ನಾರದನು ಯತಿಗಳಿಂದ ಉದ್ಬೋಧಿತನಾಗಿ ಪಡೆದ ಸಗುಣಸಮಾಧಿಯಲ್ಲಿ ಶ್ರೀಮಹಾವಿಷ್ಣುವು "ಎಲೈ ನಾರದನೇ, ನೀನು ಚಿಂತಿಸುವುದು ಏತಕ್ಕೆ ? ಸಹಜಾಮನಸ್ಕ ನಿರ್ವಿಕಲ್ಪ ಸ್ಥಿತಿಯನ್ನು ಹೊಂದದೆ ಭಕ್ತಿ, ಯೋಗೋಪಾಸನಗಳಿಂದ ಸಮಾಧಿಯನ್ನು ಹೊಂದಿ, ತದ್‍ಜ್ಞಾನವನ್ನು ಪಡೆದು ಪಾರಂಗತರಾಗಿದ್ದೇವೆಂದು ತಿಳಿದು ವ್ಯವಹರಿಸುತ್ತಿರುವ ಕುಯೋಗಿಗ ಳಿಗೆ ನಮ್ಮ ನಿಜ ದರುಶನವು ಆಗಲಾರದೆಂದು ಉಪದೇಶಿಸಿದರು. ತದನಂತರ ಕೆಲವು ವರುಷಗಳಿಗೆ ನಾರದನು ದೇಹವನ್ನು ಬಿಟ್ಟನು. ಪುನಃ ಬ್ರಹ್ಮಕಲ್ಪಸೃಷ್ಟಿ

ಯಲ್ಲಿ ಬ್ರಹ್ಮ ಮಾನಸಪುತ್ರನಾಗಿ ನಾರದನು ಜನಿಸಿದನು. ಈ ದಾಸೀಪುತ್ರನಾದ (ನಾರದರ) ಸೂಕ್ಷ್ಮದೇಹವು ಬ್ರಹ್ಮಮಾನಸಪುತ್ರನಾದ ನಾರದರ ಜನ್ಮಪರ್ಯಂತವು ಎಲ್ಲಿ, ಹೇಗೆ, ಏನುಮಾಡುತ್ತ ಇತ್ತು? ಈ ವಿಷಯವು ಭಾಗವತದಲ್ಲಿ ಉದ್ಘಾಟಿಸಲಿಲ್ಲ. ಇಂಥ ದೈವ ರಹಸ್ಯಗಳು ನಮ್ಮ ಗ್ರಂಥಗಳಲ್ಲಿ ಅಗಣ್ಯವಾಗಿರುತ್ತವೆ. ಇಂಥ ರಹಸ್ಯಗಳನ್ನು ತಿಳಿದುಕೊಳ್ಳಲು ವ್ಯಷ್ಟಿಜೀವನಾದ ದೇಹಕ್ಕೆ ಸಾಧ್ಯವಿರುವದಿಲ್ಲ. ಸಮಷ್ಟಿ ಜೀವಕೋಟಿಯೊಳಗೆ ಸೇರುವಸ್ಥಿತಿ, ರೂಪವಾದವಿಧಿಪೂರ್ವಕ ಸಂನ್ಯಾಸಾಶ್ರಮವು ಬೇಕಾಗಿದೆ. ವಿಧಿಪೂರ್ವಕ ಸನ್ಯಾಸವೆಂಬುವುದು ಬ್ರಾಹ್ಮಣನು ತನ್ನ ಆಶ್ರಮದಲ್ಲಿ ಶಾಸ್ತ್ರದಿಂದ ವಿಹಿತವಾದ (ವಿಧ್ಯುಕ್ತವಾದ) ಪಂಚಮಹಾಯಜ್ಞಗಳನ್ನು ವಿಧಿಪೂರ್ವಕವಾಗಿ ಜಪಹೋಮಗಳನ್ನು ಮಾಡಿಬಿಡತಕ್ಕದ್ದೆಂದು ಸಂನ್ಯಾಸವಿಧಿಯಿರುತ್ತದೆ. ಹೊರತು ಯಾವ ವರ್ಣದವನಾದರೂ ಆಶ್ರಮದವನಾದರೂ ಲೌಕಿಕಾದಿ ವ್ಯವಹಾರಗಳನ್ನು ನಡೆಸುತ್ತ ಇದ್ದವರು ಪಂಚಮಹಾಯಜ್ಞಾನುಷ್ಠಾನವು ಇಲ್ಲದೆ ಲೌಕಿಕ ಭಾಷ, ವೇಷ, ಭೂಷ ಉಳ್ಳವರಾಗಿ ತಕ್ಕಮಟ್ಟಿಗೆ ನಾಮಸ್ಮರಣವು ಸಾಂಪ್ರದಾಯರಹಿತವಾದ ಯೋಗಾಭ್ಯಾಸವು ಆಧುನಿಕರು ಬರೆದ ಭಾಷಾಂತರೀಕರಣ ವೇದಾಂತ ಗ್ರಂಥ ಪಠಣವು ಇತ್ಯಾದಿಗಳಿಂದ ಆಶ್ರಮವನ್ನು ತೆಗೆದುಕೊಂಡು ಆನಂದ, ತೀರ್ಥ ಇತ್ಯಾದಿ ನಾಮಗಳಿಂದ ಸ್ವಚ್ಛಂದ ಪ್ರವೃತ್ತಿಉಳ್ಳ ಸಂನ್ಯಾಸವೆಂದು ತಿಳಿಯದೆ ಪೂರ್ವಋಷಿಜನ ಸಂಪ್ರದಾಯಸಿದ್ಧ ವಿಧಿಪೂರ್ವಕ ಸಂನ್ಯಾಸ ಗ್ರಹಣವೇ, ಕರ್ತವ್ಯವೆಂದು ತಮ್ಮ ಗುರುಗಳಿಂದ ಉಪದೇಶಿಸಲ್ಪಟ್ಟ ತಮ್ಮ ಆತ್ಮನಿಶ್ಚಯವನ್ನು ಆಚರಣದಲ್ಲಿ ಇಡಲು ನಮ್ಮ ಗುರುಗಳವರು ಸಂನ್ಯಾಸಗ್ರಹಣವನ್ನು ಮಾಡಲು ಮನಸ್ಸಿನಲ್ಲಿ ಸದಾ ಬಯಸುತ್ತ ಚಿಂತಿಸುತ್ತ ದೇವ ಗುರುಗಳನ್ನು ಪ್ರಾರ್ಥಿಸುತ್ತ ವಿರಕ್ತಿಯಿಂದ ಶೋಭಿಸುತ್ತ ಪ್ರವರ್ತಿಸುತ್ತ ಕಾಲಕಳೆಯುತ್ತ ಇರಲು, 'ಮನಸ್ಸಿನಂತೆ ಮಹಾದೇವ' ಎಂಬುವ ಗಾದೆಯನ್ನು ಅನುಸರಿಸಿ ಶ್ರೀಗುರುದೇವತಾನುಗ್ರಹರೂಪವಾದ ಸುಸಮಯವು ಪ್ರಾಪ್ತವಾಯಿತು.

ಗುರುಗಳವರ ಬ್ರಹ್ಮಚರ್ಯಾಶ್ರಮವು ಪರಿಪಕ್ವವಾಯಿತು. ಉಭಯ ಮಾತೃ ಭಕ್ತಿ ಸಿದ್ಧಿಹೊಂದಿತು. ಶ್ರೀರಾಮಚಂದ್ರ ಪರಮಾನುಗ್ರಹವು ಸಂಪೂ

ರ್ಣವಾಯಿತು. ಶ್ರೀರಂಗರಾಜೇಂದ್ರ ಚರಣಾನುಗ್ರಹವು ವಿಕಾಸವಾಯಿತು. ತದಿತರ ಗುರುಗಳವರ ಕೃಪಾಪೂರ್ಣವಾಯಿತು.

## ಶ್ರೀ ಸದ್ಗುರು ಮಹಿಮೆ

ಶ್ರೀ ಶಂಕರಾಚಾರ್ಯ ಪ್ರತಿಷ್ಠಿತ ದಕ್ಷಿಣಾಮ್ನಾಯ ಪೀಠದ ಅವಿಚ್ಛಿನ್ನ ಪರಂಪರಾ ಪ್ರಾಪ್ತವಾದ ಶ್ರೀ ಶೃಂಗೇರಿ ಜಗದ್ಗುರುಗಳ ಮೂಲಸ್ಥಾನವಾದ ಶ್ರೀಕೂಡ್ಲೀ-ಶೃಂಗೇರಿ ಸಂಸ್ಥಾನದ ವಾಸ್ತವ್ಯವಾದ ಶ್ರೀಕೂಡ್ಲಿಮಠದ ಉದ ಗಟ್ಟಿ ಮುಕ್ಕಾಮಿನಲ್ಲಿ ಶೋಭಿಸುತ್ತ ಇದ್ದ ಶ್ರೀಮಜ್ಜಗದ್ಗುರು ಶಂಕರಭಾರತಿ ಸ್ವಾಮಿ ಕರಕಮಲ ಸಂಜಾತ ಶ್ರೀವಿದ್ಯಾಶಂಕರ ಭಾರತಿ ಸ್ವಾಮಿ ಶ್ರೀಪಾದಂಗಳವರು ದೇಹ ಅನಾರೋಗ್ಯವನ್ನು ಹೊಂದಿ ತಮ್ಮ ದೇಹವು ನಿಲ್ಲುವ ದಿಲ್ಲವೆಂದು ನಿಶ್ಚಯಿಸಿ. ಶ್ರೀ ಮಠದ ಶಿಷ್ಯ ಪರಿಗ್ರಹಕ್ಕೆ ಅಧಿಕಾರಿಯಾದ ಶಿಷ್ಯ ನನ್ನು ಹುಡುಕಲು ತಮ್ಮ ಮಠದ ಅಧಿಕಾರಿಗಳಿಗೆ ಶ್ರೀವಿದ್ಯಾಶಂಕರ ಭಾರತಿ ಸ್ವಾಮಿಗಳವರು ಅಪ್ಪಣೆಯನ್ನು ಕೊಟ್ಟರು. ಆ ಕಾರ್ಯವನ್ನು ನಿರ್ವಹಿಸುವ ಪ್ರಯತ್ನ ನಡೆಸುವುದರಲ್ಲಿ ಹರಪನಹಳ್ಳಿ ಗ್ರಾಮದಲ್ಲಿ ನಮ್ಮ ಗುರುಗಳವರ ಪೂರ್ವಾಶ್ರಮದ ಶಿಷ್ಯರ ಗೃಹದಲ್ಲಿ ಪೂಜಿಸಲ್ಪಡುತ್ತಿರುವ ಶ್ರೀಗಳವರ ಛಾಯಾಚಿತ್ರಪಟವನ್ನು ತತ್ಕಾಲದ ಸರ್ವಾಧಿಕಾರಿ ಮಲ್ಹಾರಿ ಭಟ್ಟನಿಂದ ತರಿಸಿ ಕೊಂಡು ಅದನ್ನು ಪರೀಕ್ಷಿಸಿ ಆ ಛಾಯಾಪಟದ ಮೂಲಮೂರ್ತಿ ಆದ ನಮ್ಮ ಪೂಜ್ಯ ಬ್ರಹ್ಮಚಾರಿಗಳು ಶ್ರೀ ಸಂಸ್ಥಾನಕ್ಕೆ ಅರ್ಹರಾದ ಶಿಷ್ಯರೆಂದು ನಿಶ್ಚಯಿಸಿ ನಮ್ಮ ಗುರುಗಳನ್ನು ಮಠಕ್ಕೆ ಕರೆಯಿಸಲು ಹರಪನಹಳ್ಳಿ ಕರುಣಾಕರ ವೆಂಕಣ್ಣ ಭಟ್ಟರಿಗೆ, ಪಾಲಪೂಡಿ ನರಸಿಂಹ ಶಾಸ್ತ್ರಿಗಳಿಗೆ, ಶಿಷ್ಯ ಪರಿಗ್ರಹವಾದ ಬ್ರಹ್ಮಚಾರಿಗಳಾದ ಗುರುಗಳಿಗೆ ಸಂದೇಶವನ್ನು ಕಳುಹಿ ಸಲು ಅಪ್ಪಣೆ ಮಾಡಿದರು. ಅದರಂತೆ ಅವರು ಜರೂರ ಪತ್ರವನ್ನು ಗುರು ಗಳಿಗೆ ಕಳಿಸಿದರು.

ಕಾರ್ತಿಕಮಾಸದ ಮುಂದೆ ಒಂದು ರಾತ್ರಿ ಚತುರ್ಥಯಾಮದಲ್ಲಿ ನೀನು ಶೃಂಗೇರಿಸ್ವಾಮಿಯಾದರೆ ಜನ್ಮನಾಶನವಾಗುವದೆಂದು ಶ್ರೀ ಶೃಂಗೇರಿ ಜಗ

ದ್ಗುರು ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತಿಸ್ವಾಮಿಗಳವರು ಪರಮಾನುಗ್ರಹ ಪೂರ್ವಕ ಅಪ್ಪಣೆಯನ್ನು ಕೊಟ್ಟರು. ಇದು ಈ ಜನ್ಮದಲ್ಲಿ ಸಿದ್ಧವಾಗಲಾರದೆಂದು ನಿಶ್ಚಯಿಸಿ ಗುರುಗಳ ಶಿಷ್ಯರಾದ ಆಸ್ತಿಕ ಶಿರೋಮಣಿ ಬ್ರಾಹ್ಮಣಾಭಿಮಾನನಿರತಾನ್ನಪ್ರದಾತ, ಮುದಜನ ವಿಧೇಯರಾದ ಆದವಾನಿ ಕಥಾಸಾಗರ ಚಿದಂಬರ ಭಟ್ಟರಿಗೆ ಈ ಸ್ವಪ್ನ ಆಶಯವನ್ನು ತಿಳಿಸಿದರು. ಏತದನಂತರ ಹದಿನೈದು ದಿವಸಗಳಲ್ಲಿ ಮೂಲ ಶೃಂಗೇರಿ ಪೀಠಕ್ಕೆ ಆಶ್ರಮ ತೆಗೆದುಕೊಳ್ಳಲು ಗುರುಗಳಿಗೆ ಕೂಡ್ಲಿ–ಶೃಂಗೇರಿ ಪೀಠಸ್ಥರಾದ ಶ್ರೀವಿದ್ಯಾ ಶಂಕರ ಭಾರತಿಸ್ವಾಮಿಗಳವರಿಂದ ಅಪ್ಪಣೆ ಕೊಡಿಸಿದ ಪ್ರಕಾರ ವೆಂಕಣ್ಣ ಭಟ್ಟರು ಕಳುಹಿಸಿದ್ದ ಆಜ್ಞಾಪತ್ರವು ಪ್ರಾಪ್ತವಾಯಿತು. ಆ ಸಮಯದಲ್ಲಿ ಹತ್ತಿರ ಇರುವ ಶಿಷ್ಯಜನರ ಸಂಗ್ರಹ ಆಲೋಚಿಸಿ ಮಠಕ್ಕೆ ಹೋಗುವದಕ್ಕೆ ನಿಶ್ಚಯಿಸಿ ಮಾತ್ರಾಜ್ಞಾಪ್ರಾಪ್ತಿಗಾಗಿ ಮಾತುಶ್ರೀಗಳವರಿಂದ ಬಳ್ಳಾರಿ ಜಿಲ್ಲಾ: ಆಲೂರ ತಾಲೂಕ ನೇಮಿಕಲ್ಲು ಗ್ರಾಮದಲ್ಲಿ ಶ್ರೀಗಳವರ ಮಾತೋಶ್ರೀಯವರು ಹಾಗೂ ಜ್ಯೇಷ್ಠಭ್ರಾತೃಗಳು ಇದ್ದರು. ಆದವಾನಿಯಿಂದ ಶ್ರೀಗಳವರು ಅಲ್ಲಿಗೆ ಹೋಗಿ ಅವರಿಗೆ ತಮ್ಮ ಪರಮಹಂಸಾಶ್ರಮ ಸ್ವೀಕಾರ ವಿಷಯವನ್ನು ವ್ಯಕ್ತಪಡಿಸಿದರು. ಇದನ್ನು ಅವರು ತಿಳಿದರು ಮಾತೋಶ್ರೀಯವರು ಸಾಮಾನ್ಯ ಜನರಂತೆ ಸ್ವಲ್ಪದುಃಖಪಟ್ಟು ಆದವಾನಿಯಿಂದ ಅಲ್ಲಿಗೆ ಹೋಗಿ ಸಂನ್ಯಾಸಾಶ್ರಮ ಸ್ವೀಕಾರಕ್ಕೆ ಅಮೋದನವನ್ನು ಕೊಟ್ಟು ಮುಂದೆ ತಮ್ಮ ದೇಹಪೋಷಣ, ಆತ್ಮಗತಿ ವಿಷಯವನ್ನು ತಮ್ಮ ಪುತ್ರನಾದ ಶ್ರೀಗಳವರ ಮುಂದೆ ಪ್ರಶ್ನಿಸಿದರು. ದೇಹಪೋಷಣ ಆತ್ಮಗತಿಗಳನ್ನು ನಿರ್ವಹಿಸುವದಕ್ಕೆ ತಮ್ಮ ಜ್ಯೇಷ್ಠ ಭ್ರಾತೃಗಳಿದ್ದಾರೆಂದು ಗುರುಗಳು ತಮ್ಮ ಪುತ್ರಭಾವದಿಂದ ವಿಜ್ಞಾಪಿಸಿಕೊಂಡರು. ಅದಕ್ಕೆ ಅವರ ಜ್ಯೇಷ್ಠಪುತ್ರರಾದ ಶ್ರೀಗಳವರ ಜ್ಯೇಷ್ಠ ಭ್ರಾತೃಗಳು ಕೇವಲ ವಿರಕ್ತರೂ, ಭಾರ್ಯಾಸಂಗತ್ಯಾಗಿಗಳೂ, ಆಗಿರುವದರಿಂದ ಅವರು ತಮ್ಮನ್ನು ನೋಡದೆ ಹೋದರೆ ತಾವೇನು ಮಾಡಬೇಕೆಂದು ಶ್ರೀಗಳವರನ್ನು ಅವರ ಮಾತೋಶ್ರೀಯವರು ಪ್ರಶ್ನಿಸಿದರು. ಶ್ರೀಗಳವರು ತಾವು ಗ್ರಹಿಸುವದು ಪೀಠಾಶ್ರಮವಾಗಿರುವದರಿಂದ ಸಕಲಾನುಕೂಲಗಳಿಂದ ಒಂದು ಸ್ಥಳದೊಳಗೆ ಇರುತ್ತೇವೆಂದು ಮತ್ತು ಬಿಡಿಸಂನ್ಯಾಸಿಗಳಾಗಿ 'ಗ್ರಾಮೇಕರಾತ್ರಂ' ದಿನಮೇಕ ಭುಕ್ತಂ' ಎಂಬುವದಾಗಿ ಸಂಚರಿಸುತ್ತ ಇರು

ವದಿಲ್ಲವೆಂತಲೂ ಜೇಷ್ಠ ಭ್ರಾತೃಗಳು ಯಾವದು ಕಾರಣದಿಂದಲೂ ನೋಡದೆ ಬಿಟ್ಟರೂ ಶ್ರೀಗಳಾದ ತಾವು ತಮ್ಮ ತಾಯಿ ದೇಹ ಸಂರಕ್ಷಣಕ್ಕೂ, ಆತ್ಮೋದ್ಧರಣಕ್ಕೂ ತಕ್ಕ ಏರ್ಪಾಡುಗಳನ್ನು ನಿಃಸಂಶಯವಾಗಿ ಮಾಡುತ್ತೇವೆಂದು ತಮ್ಮ ತಾಯಿಗಳವರಿಗೆ ಹೇಳಿ ಸಂತೋಷ ಪಡಿಸಿ ಅವರ ಸಂಪೂರ್ಣ ಆ ಮೋದನವನ್ನೂ ಪಡೆದರು.

ಅಲ್ಲಿಂದಹೊರಟು ಶ್ರೀಜಗದ್ಗುರವಾಜ್ಞಾಪ್ರಾಪ್ತ ಶ್ರೀಮಾತೃರೂಪಿಣಿಯಾದ ಸಾವಿತ್ರಿ ಸುವಾಸಿನಿಯವರ ಹತ್ತರ ಹೋಗಿ ಸಾಷ್ಟಾಂಗ ದಂಡವತ ಪ್ರಣಾಮುಗಳನ್ನು ಮಾಡಿ ಪರಮಹಂಸಾಶ್ರಮ ಸ್ವೀಕಾರವನ್ನುಮಾಡಲು ಅನುಜ್ಞೆಯನ್ನು ಕೊಡಬೇಕೆಂದು ಪ್ರಾರ್ಥಿಸಿದರು. ಆ ಸುವಾಸಿನಿಯಾದ ಮಾತೃರೂಪಿಣಿಯವರು ಪುತ್ರರಿಲ್ಲದೆ ಇರುವದರಿಂದ ಶ್ರೀಜಗದ್ಗುರುವಾಜ್ಞಾಪ್ರಕಾರ ಪಡೆದ ದಿವ್ಯಪುತ್ರನನ್ನು ಬಿಡುವುದು ಸಂಪೂರ್ಣ ಕಷ್ಟತಮವಾಗಿದ್ದರೂ ಮಹಾಮಾಯಾರೂಪಿಣಿಯಾದ ಪರಾಶಕ್ತಿಯಿಂದ ಮೋಹಿಸಲ್ಪಟ್ಟವರಾಗಿ ಸರ್ವಶಕ್ತಿಸ್ವರೂಪಿಣಿ ಪರಾಶಕ್ತಿಯಾದ ಶ್ರೀಮಾತೃಕಾರೂಪಿಣಿಯವರು ಸಂಪೂರ್ಣ ನಿಶ್ಶೇಷ್ಠಿತರಾಗಿ ಅನುಜ್ಞವನ್ನು ಕೊಟ್ಟರು. ಉಭಯಮಾತೃಗಳ ಅನುಜ್ಞವನ್ನು ಪಡೆದು ಮಠಕ್ಕೆ ಹೋದನಂತರ ಉಭಯಮಾತೃಗಳು ಬಹುವಿಧವಾಗಿ ದುಃಖಪಟ್ಟರು. ಶ್ರೀ ಪರಾಶಕ್ತಿಯಾದ ಶ್ರೀಲಲಿತಾ ಮಹಾತ್ರಿಪುರಸುಂದರಿ ತನ್ನ ಔರಸ ಪುತ್ರನಾದ ಶ್ರೀಗಳವರನ್ನು ತನ್ನಲ್ಲಿ ತನ್ನ ಸೇವೆಯನ್ನು ಕೈದುಕೊಂಡು ಪರಮಾನುಗ್ರಹಮಾಡಿ ತನ್ನಲ್ಲಿ ಐಕ್ಯಮಾಡಿಕೊಳ್ಳಲು ತನ್ನ ರೂಪವಾದ ವ್ಯಷ್ಟಿ ಮಾತೃಗಳ ಅನುಜ್ಞವನ್ನು ಕೊಡಿಸಿ ತನ್ನ ಸ್ಥಲವಾದ ದಕ್ಷಿಣಾಮ್ನಾಯ ಪೀಠ ಮೂಲಸ್ಥಳವಾದ ಕೂಡ್ಲಿಮಠವನ್ನು ಸೇರಿಸಿಕೊಂಡವಳಾದಳು.

ಮಾಯಾವಿಲಾಸವು ಮಾಯವಾಗಿ ಹೋಗುವದಕ್ಕೆ ಕಾರಣವಾದ ಮಾಯಾ ರೂಪಿಣಿಪ್ರಭಾವವು ಮಾಯಾಬದ್ಧರಿಗೆ ತಿಳಿಯಲಾರದೆಂದು ವ್ಯಕ್ತವಾಯಿತು. ಗುರುಗಳವರು ಮಠವನ್ನು ಸೇರಿದರು. ಗುರುಗಳನ್ನು ಕಂಡರು. ನಯವಿನಯ ಭಯಭಕ್ತಿ ವಿಶ್ವಾಸ ಪೂರ್ವಕವಾಗಿ ನಮಸ್ಕರಿಸಿದರು. ದಕ್ಷಿಣಾಮೂರ್ತಿಗಳಾದ ವಿದ್ಯಾಶಂಕರ ದಿವ್ಯದೇವರಿಂದ ಬ್ರಹ್ಮವಿದ್ಯಾ ಸಂಪ್ರದಾಯ ಆರಂಭವಾಗಿ ಶ್ರೀ ಶಂಕರಾಚಾರ್ಯರಿಂದ ಪೋಷಿತವಾಗಿ ಸಂಸ್ಥಾಪಿಸಲ್ಪಟ್ಟ

ದಕ್ಷಿಣಾಮ್ನಾಯ ಪೀಠಾಧಿಷ್ಠಾನ ದೇವತಾ ವಿದ್ಯಾ ಶಂಕರಾ ಅವಿಚ್ಛಿನ್ನಾರಾಧಕ ಶ್ರೀ ಶಂಕರ ಭಾರತೀಸ್ವಾಮಿ ಕರಕಮಲ ಸಂಜಾತ ಶ್ರೀ ವಿದ್ಯಾಶಂಕರ ಭಾರತೀಸ್ವಾಮಿಗಳವರು ತಮ್ಮ ಸರ್ವವಿಧ ತಪಃ ಫಲವೆಂದು ಭಾವಿಸಿ ನಮ್ಮ ಗುರುಗಳು ಆನಂದ ಮಗ್ನಸ್ವಾಂತರಾದರು.

ಇಂಥ ಗುರುಭಕ್ತಿ ಪರಿಪೂರ್ತಸ್ವಾಂತರಾದ ಬ್ರಹ್ಮಚಾರಿಗಳನ್ನು ಶ್ರೀವಿದ್ಯಾಶಂಕರ ಭಾರತೀಸ್ವಾಮಿ ಶ್ರೀಪಾದಂಗಳವರು ತುರಿಯಾಶ್ರಮ ಸ್ವೀಕಾರಕೆ, ನೀವು ಅನುಮತಿಯನ್ನು ಹೊಂದಬೇಕೆಂದು ಆಜ್ಞಾಪಿಸಿದರು. ನಮ್ಮ ಗುರುಗಳು ದಾರೇಷಣೆ, ವಿತ್ತೇಷಣೆ, ಪುತ್ರೇಷಣೆ ಇಲ್ಲದವರಾಗಿ ನಿಜ ಸನ್ಯಾಸಿಗಳಂತೆ ಇದ್ದರೂಸಹ ಭಾರತದೇಶದಲ್ಲಿ ಶಾಸ್ತ್ರೋಕ್ತ ವಿಧಿಪೂರ್ವಕವಾಗಿ ಸನ್ಯಾಸಗ್ರಹಣವೇ ಪ್ರಧಾನವು ಎಂದು ರಾಮಕೃಷ್ಣಾದಿ ಅವತಾರಗಳು ಶ್ರೀಶಂಕರಾದಿ ಆಚಾರ್ಯರು ವಿಧಿಪೂರ್ವಕವಾಗಿ ಗುರುಸಮಾಗಮವನ್ನು ಉಪದೇಶವನ್ನು ತುರಿಯಾಶ್ರಮ ಸ್ವೀಕಾರವನ್ನು ಲೋಕೋಪದೇಶಕ್ಕಾಗಿ ಗ್ರಹಿಸಿದಂತೆ ಶ್ರೀಜಗದ್ಗುರು ಪೀಠಾದಿರೋಹಣವನ್ನು ಮಾಡುವದು ಕರ್ತವ್ಯವೆಂದು ನಿಶ್ಚಯಿಸಿ ಶ್ರೀ|| ಶ್ರೀ|| ವಿದ್ಯಾಶಂಕರಭಾರತೀ ಶ್ರೀಗಳವರ ಆಜ್ಞೆಗೆ ಅನುಮೋದನವನ್ನು ತೋರಿಸಿದರು. ಶ್ರೀ|| ಶ್ರೀ|| ವಿದ್ಯಾಶಂಕರಭಾರತಿ ಶ್ರೀಗಳವರಿಗೆ ತಮ್ಮ ಪೀಠಕ್ಕೆ ಉತ್ತಮ ಶಿಷ್ಯನು ದೊರೆತನೆಂದು ಸಂತೋಷವಾಯಿತು.

ಆಗಿನಕಾಲಕ್ಕೆ ಶ್ರೀಗಳವರ ಗುರುಗಳಾದ ಶ್ರೀವಿದ್ಯಾಶಂಕರ ಭಾರತೀಸ್ವಾಮಿಗಳಿಗೆ ಸ್ವಲ್ಪ ಹೆಚ್ಚುಹೊತ್ತು ಕುಳಿತುಕೊಳ್ಳಲು ಸಹ ಸಾಧ್ಯವಾಗದಂತೆ ವ್ಯಾಧಿ ಪ್ರಬಲವಾಗಿತ್ತು. ಆ ಕಾರಣದಿಂದ ಶ್ರೀಗಳವರ ಆಶ್ರಮ ವಿಷಯದಲ್ಲಿ ಶ್ರೀಗಳವರಿಗೆ ಶ್ರೀವಿದ್ಯಾಶಂಕರ ಭಾರತೀಸ್ವಾಮಿಗಳವರು ಪ್ರಣವೋಪದೇಶವನ್ನು ಮಾಡಬೇಕೆಂತಲೂ ಶ್ರೀ ಭಾರತೀ ಕೃಷ್ಣತೀರ್ಥ ಸ್ವಾಮಿಗಳೂ, ಮಹಾವಾಕ್ಯೋಪದೇಶವನ್ನು ಮಾಡಬೇಕೆಂತಲೂ ಶ್ರೀಗಳವರಿಗೆ ತಿಳಿಯದೆ ಉಭಯರ ಅಂತರಂಗದಲ್ಲಿ ಆಲೋಚಿಸಿದ್ದರು. ಇದಕ್ಕೆ ಶ್ರೀಗಳವರು ಗುರುವನು ಗ್ರಹವಿದ್ದರೆ ಒಬ್ಬರೇ ಗುರುಗಳಾಗಬೇಕೇ ಹೊರ್ತು ಇಬ್ಬರು ಗುರುಗಳು ಆಗಬಾರದೆಂತಲೂ ಚತುರ್ಥಾಶ್ರಮ ಸ್ವೀಕಾರವು ಪ್ರಕೃತ ಬೇಡವೆಂತಲೂ ಶ್ರೀಗಳವರು ತಮ್ಮ ಗುರುಗಳಿಗೆ ಸಂದೇಶವನ್ನು ಉದಗಟ್ಟೆಯಲ್ಲಿಯೇ ಕಳುಹಿಸಿದರು.

ಇಂಥ ದುರ್ಘಟ ಸಮಯದಲ್ಲಿ ಮಾರ್ಗಶಿರ ಶುದ್ಧ ಚವತಿ ಬಿರಜಾ ಹೋಮಾನಂತರಪ್ರಾಪ್ತವಾದ ವಿಷಮ ಪರಿಸ್ಥಿತಿ ಆದ ಶ್ರೀವಿದ್ಯಾಶಂಕರ ಭಾರತೀಸ್ವಾಮಿಗಳವರ ದೇಹಾನಾರೋಗ್ಯವು ಶುದ್ಧಪಂಚಮಿ ಸೂರ್ಯೋದಯದ ಹೊತ್ತಿಗೆ ಶ್ರೀದತ್ತಾತ್ರೇಯಾನುಗ್ರಹದಿಂದ ವ್ಯಾಧಿ ಉಪಶಮವಾಗಿ ಎಷ್ಟೋತ್ತಾದರೂ ಕುಳಿತುಕೊಳ್ಳಲು ಶಕ್ತಿಯು ಬಂದು ಶ್ರೀಭಾರತೀ ಕೃಷ್ಣತೀರ್ಥಸ್ವಾಮಿಗಳವರ ಉದ್ದೇಶವನ್ನು ಭಂಗಪಡಿಸಿ ತಾವೇ ಸರ್ವಕಾರ್ಯವನ್ನು ನೆರವೇರಿಸುತ್ತೇವೆಂದು ಶ್ರೀಗಳವರಿಗೆ ಆಜ್ಞಾಪಿಸಿದರು. ಇದು ಶ್ರೀಸದ್ಗುರುವಿನ ಮಹಾಪ್ರಭಾವವೇ ಹೊರತು ಸ್ವಪ್ರಯತ್ನವಲ್ಲ.

ಶ್ರೀ|| ಶ್ರೀ|| ವಿದ್ಯಾಶಂಕರಭಾರತೀ ಶ್ರೀಗಳವರು ನಮ್ಮ ಗುರುಗಳಿಗೆ ಚತುರ್ಥಾಶ್ರಮವನ್ನು ಕೊಟ್ಟು "ಶ್ರೀ ವಾಲುಕೇಶ್ವರ ಭಾರತಿ" ಎಂದು ಪೀಠದ ಅಭಿಧಾನವನ್ನು ಕೊಟ್ಟರು. ರಕ್ತಾಕ್ಷಿ ಸಂವತ್ಸರ ಮಾರ್ಘಶೀರ್ಷ ಶುಕ್ಲಪಂಚಮಿ ಕ್ರಿ.ಶ. ೧೯೨೪.

ಆಶ್ರಮಕಾಲದಲ್ಲಿ ಶ್ರೀದ್ವಾರಕಾಮಠದ ಶ್ರೀಜಗದ್ಗುರು ಭಾರತೀ ಕೃಷ್ಣತೀರ್ಥ ಸ್ವಾಮಿಗಳು ಆಶ್ರಮಸ್ವಾನ ಸಮಯದಲ್ಲಿ ಶೋಭಿಸುತ್ತಿದ್ದರು.

## ಆರ್ಥಿಕ ದುಃಸ್ಥಿತಿ

ನಮ್ಮ ಗುರುಗಳು ಸಂನ್ಯಾಸಗ್ರಹಣದಿನದಿಂದ ಆಶ್ರಮ ಧರ್ಮಗಳನ್ನೂ, ಮಠಸಾಂಪ್ರದಾಯಗಳನ್ನೂ, ಜಪತಪ ಪೂಜಾದಿಗಳನ್ನೂ ನಿಷ್ಠೆಯಿಂದ ಪರಿಪಾಲಿಸತೊಡಗಿದರು. ಶ್ರೀ|| ಶ್ರೀ|| ವಿದ್ಯಾಶಂಕರ ಭಾರತೀ ಸ್ವಾಮಿಗಳವರು ಮುಂದೆ ಹದಿನೈದು ದಿನಗಳಲ್ಲಿ ಅಂದರೆ ಮಾರ್ಗಶೀರ್ಷ ಬಹುಳ ಪಂಚಮಿ ರಾತ್ರಿ ಎಂಟು ಘಂಟೆಗೆ ಕೈವಲ್ಯ ಪದವಿಯನ್ನು ಪಡೆದರು. ಆ ಕಾಲಕ್ಕೆ ಕೂಡ್ಲಿಮಠದ ಆರ್ಥಿಕ ಪರಿಸ್ಥಿತಿ ಕೇವಲ ಶೋಚನೀಯವಾಗಿತ್ತು. ಶ್ರೀಶಂಕರಭಾರತೀ ಸ್ವಾಮಿಗಳವರ ಪರಮ ಗುರುಗಳವರ ಕಾಲದಲ್ಲಿ ಕೆಲವು ಅಸಾಧಾರಣ ಕಾರಣಗಳಿಂದ ಆಗಿನ ಕಾಲದ ಶ್ರೀಗಳವರು ದ್ರಾವಿಡರಾಗಿ ದೇಶಸ್ಥ ಶಿಷ್ಯರನ್ನು ಪರಿಗ್ರಹಮಾಡಿದ್ದರು. ಮುಂದೆ ಆಶ್ರಮ ನಿರ್ಣಯವು ದ್ರಾವಿಡ ಗುರುಗಳು ದೇಶಸ್ಥ ಶಿಷ್ಯಸ್ವಾಮಿಗಳನ್ನು ಪರಿಗ್ರಹಿಸಬೇಕೆಂತಲೂ

ಸದರ ದೇಶಸ್ಥ ಸ್ವಾಮಿಗಳು ದ್ರಾವಿಡ ಶಿಷ್ಯಸ್ವಾಮಿಗಳನ್ನು ಪರಿಗ್ರಹಿಸ ಬೇಕೆಂತಲೂ ದ್ರಾವಿಡ ಗುರುಗಳಿಗೂ ದೇಶಸ್ಥ ಶಿಷ್ಯ ಸ್ವಾಮಿಗಳಿಗೂ ಒಪ್ಪಂದವಾಯಿತು. ಅದರಂತೆ ದೇಶಸ್ಥ ಸ್ವಾಮಿಗಳು ಅನುಮೋದಿಸಿದರು. ಕೆಲವು ಅಲೌಕಿಕ ಕಾರಣಗಳಿಂದ ದ್ರಾವಿಡಗುರುಸ್ವಾಮಿಗಳಿಗೂ ದೇಶಸ್ಥ ಶಿಷ್ಯ ಸ್ವಾಮಿಗಳಿಗೂ ಮನಃ ಸ್ಪರ್ಧೆ ಪ್ರಾಪ್ತವಾಯಿತು. ಸದರ ದ್ರಾವಿಡ ಗುರು ಸ್ವಾಮಿಗಳು ದೇಹವನ್ನು ಬಿಡುವಕಾಲ ಒದಗಿತು. ಆಗಿನ ತಮ್ಮ ಶಿಷ್ಯಸ್ವಾಮಿಗಳನ್ನು ಆಸನ್ನಸಮಯಕ್ಕೆ ಬರಲು ಆಜ್ಞಾಪಿಸಲು ಅವರು ಬರಲಿಲ್ಲ. ಇದರಂತೆ ಗುರು-ಶಿಷ್ಯಸ್ವಾಮಿಗಳಿಗೆ ಎರಡು ಸಲ ಪ್ರಾಪ್ತವಾ ಯಿತು. ದ್ರಾವಿಡ ಶಿಷ್ಯಸ್ವಾಮಿಗಳು ಬಾರದೆ ಇದ್ದಿದ್ದಕ್ಕೆ ಕೆಲವು ಕಾರಣ ಗಳಿಂದ ದ್ರಾವಿಡ ಗುರುಸ್ವಾಮಿಗಳು ಕುಪಿತರಾಗಿ ಒಪ್ಪಂದಕ್ಕೆ ವಿರುದ್ಧವಾಗಿ ಪುನಃ ದ್ರಾವಿಡ ಶಿಷ್ಯರನ್ನೇ ಪರಿಗ್ರಹಮಾಡಿದರು. ಮುಂದೆ ಆ ದ್ರವಿಡ ಸ್ವಾಮಿಗಳಿಗೂ ದೇಶಸ್ಥ ಸ್ವಾಮಿಗಳಿಗೂ ಮನಃ ಸ್ಪರ್ಧೆ ಹುಟ್ಟಿ ಬೆಳೆಯಲಿಕ್ಕೆ ಹತ್ತಿತು. ಶಿಷ್ಯದ್ರಾವಿಡ ಸ್ವಾಮಿಗಳು ೯-೧೦ ತಿಂಗಳು ಜೀವಿತರಾಗಿ ದ್ರಾವಿಡ ಶಿಷ್ಯ ಸ್ವಾಮಿಗಳನ್ನೇ ಪರಿಗ್ರಹಮಾಡಿದರು. ಅವರೇ ನಮ್ಮ ಗುರುಗಳವರ ಪರಮ ಗುರುಗಳಾದ ಶ್ರೀ ಮಚ್ಛಂಕರ ಭಗವತ್ಪಾದಾಚಾರ್ಯ ಪರಾವತಾರ ಮೂರ್ತಿಗಳಾದ ಪರಮ ಗುರುಗಳವರು; ಈ ಪರಮಗುರು ಗಳಿಗೂ ಮೊದಲಿನ ದೇಶಸ್ಥ ಸ್ವಾಮಿಗಳಿಗೂ ಮನಃ ಸ್ಪರ್ಧೆ ಬೆಳೆದು ನ್ಯಾಯ ಸ್ಥಳಗಳಲ್ಲಿ ವ್ಯಾಜ್ಯಗಳು ಹತ್ತಿದವು. ನಮ್ಮ ಗುರುಗಳವರ ಪರಮ ಗುರು ಗಳವರ ಕಾಲದಲ್ಲಿ ರಾಣೆಬೆನ್ನೂರಲ್ಲಿದ್ದ ದೇಶಸ್ಥ ಸ್ವಾಮಿಗಳನ್ನೇ ಶಿಷ್ಯಪರಿ ಗ್ರಹಮಾಡಿದರು. ಅದರಂತೆ ನಾಲ್ಕು ಜನ ಸ್ವಾಮಿಗಳು ದೇಶಸ್ಥರಲ್ಲಿ ಆದರು ಮೊದಲಿನ ದೇಶಸ್ಥ ಸ್ವಾಮಿಗಳು ಸಹಿತ ಐದುಮಂದಿ ಸ್ವಾಮಿಗಳ ಸಂಗಡ ದ್ರಾವಿಡರಾದ ಶ್ರೀಶಂಕರ ಭಾರತೀ ಸ್ವಾಮಿಗಳವರು ಶಿವಮೊಗ್ಗಾ ಬೆಂಗಳೂರ ಬಳ್ಳಾರಿ, ಹುಬ್ಬಳ್ಳಿ, ಧಾರವಾಡ, ಮುಂಬಯಿ, ನ್ಯಾಯಸ್ಥಳಗಳಲ್ಲಿ ವ್ಯಾಜ್ಯ ವನ್ನು ಮಾಡುವ ಪರಿಸ್ಥಿತಿ ಪ್ರಾಪ್ತವಾಗಿತ್ತು. ಈ ಐದು ಸ್ವಾಮಿಗಳವರಿಂದ ನಡೆದ ವ್ಯಾಜ್ಯಕ್ಕಾಗಿ ಲಕ್ಷಾವಧಿ ದ್ರವ್ಯವು ಖರ್ಚಾಗಿ ವಿವಿಧ ಕಷ್ಟಗಳಿಗೆ ಕಾರ ಣವಾಗಿ ಸಂಸ್ಥಾನವು ಹೀನದೆಸೆಯನ್ನು ಹೊಂದಿದೆ. ಶ್ರೀಗಳವರು ಆಶ್ರಮ ತೆಗೆದುಕೊಳ್ಳುವದಕ್ಕೆ ನೂರಾಐವತ್ತು. ವರ್ಷದ ಹಿಂದೆ ಶ್ರೀಕೂಡ್ಲೀ-

ಶೃಂಗೇರಿ ಸಂಸ್ಥಾನವು ಹನ್ನೆರಡು ಮೇಣೆ, ಎಂಟು ಪಲ್ಲಕ್ಕಿ, ಹನ್ನೊಂದು ಆನೆ, ಐವತ್ತು ಒಂಟೆ, ನೂರು ಎತ್ತು, ಮೂನ್ನೂರು ಬ್ರಾಹ್ಮಣರು, ಇನ್ನೂರು ಇತರ ಸೇವಕರು, ಇಪ್ಪತ್ತುನಾಲ್ಕು ಸಾವಿರ ಇಕ್ಕೇರಿವರಹಗಳು, ಹತ್ತುಸಾವಿರ ರಾಮಟಂಕಿ ವರಾಹಗಳು, ನೂರುಬಂಗಾರದ ಹಲಿಗಾರ್ತಿ, ಮೂರುಗೋಣಿ ಚೀಲದಷ್ಟು ಬೆಳ್ಳಿಯ ಬಟ್ಟಲುಗಳು, ಅವರೆಕಾಳದ ಪ್ರಮಾಣವುಳ್ಳ ಮುತ್ತಿನ ಹಾರಗಳು, ಬೆಳ್ಳಿ ಬಂಗಾರದ ಪ್ರಭಾವಳಿಗಳು ಕ್ರಮಕ್ರಮವಾಗಿ ಅದೃಶ್ಯವಾದವು. ನೂರೈವತ್ತು ವರ್ಷದ ಹಿಂದಿನ ಕಾಲದಲ್ಲಿ ಮೈಸೂರ ಮುಂತಾದ ದೇಶಗಳಿಂದ ಮೂಲ ಪರಂಪರಾಸ್ಥಾನವಾದ ಶ್ರೀಕೂಡ್ಲೀ-ಶ್ರೀಂಗೇರಿ ಸಂಸ್ಥಾನಕ್ಕೆ ಸಮಸ್ತ ವಿಧವಾದ ಅಗ್ರಮರ್ಯಾದೆಗಳು ಮೂಲಾನಕ್ಷತ್ರ ಕಾಣಿಕೆ, ದೀಪರಾಧನ ಕಾಣಿಕೆ, ಗೌರೀಹಬ್ಬದ ಕಾಣಿಕೆ, ಉಪನಯನ ಕಾಣಿಕೆ, ವಿವಾಹ ಕಾಣಿಕೆ, ಶ್ರಾದ್ಧ ಕಾಣಿಕೆ ಮುಂತಾದ ಮರ್ಯಾದೆಗಳು ನಡೆಯುತ್ತಿದ್ದವು. ಶ್ರೀಗುರುಗಳವರಾಶ್ರಮ ತಗೆದುಕೊಳ್ಳುವದಕ್ಕೆ ಹದಿನೈದು ವರುಷದ ಹಿಂದೆ ದೀಪಾರಾಧನೆ ಕಾಣಿಕಾದಿ ದ್ರವ್ಯವೇ ಹದಿಮೂರು ಸಾವಿರ ರೂ. ಗಳು ಬರುತ್ತಿದ್ದವು. ಈ ರೀತಿಯಾಗಿ ಇದ್ದ ಪರಿಸ್ಥಿತಿ ಜಮಾ ಖರ್ಚುಗಳಾಗಿ ೮೦ ರೂ. ಸಾಲವಿತ್ತು.

## ಪರಾಶಕ್ತಿ ಮಹಿಮ

ಇಂಥ ಶೋಚನೀಯ ಪರಿಸ್ಥಿತಿ ಅಮ್ಮನವರ ಅನುಗ್ರಹದಿಂದ ಕ್ರಮವಾಗಿ ಸುಸ್ಥಿತಿಗೆ ಬಂದಿತು.

ಶ್ರೀಗಳವರು ಆಶ್ರಮವನ್ನು ತಗೆದುಕೊಂಡು ಹಿಂದಿನ ಸಂಪ್ರದಾಯಕ್ಕೆ ಲೋಪವು ಬಾರದಂತೆ ಜಪ–ತಪ–ಪೂಜಾದಿಗಳನ್ನು ಒಂದು ತಿಂಗಳು ನಡಿಸಿದರು. ತದನಂತರ ಶ್ರೀದತ್ತಗುರು ಮಹಾರಾಜರು ಪರಮಾದ್ಭುತವನ್ನು ತೋರಿಸಿದರು. ಒಂದು ದಿವಸ ಶ್ರೀಗಳವರು ಪ್ರಾತರಾಹ್ನಿಕವನ್ನು ತೀರಿಸಿ ನಿತ್ಯವಿಧಿಯಾಗಿ ನಡೆಯುತ್ತ ಇದ್ದ ಶ್ರೀವೇದಿಕಾ ಪ್ರದಕ್ಷಿಣಕ್ಕೆ ಹೋಗಿ ಐದು ಪ್ರದಕ್ಷಿಣೆ ಹಾಕುವದರಲ್ಲಿ ದತ್ತಾತ್ರೇಯ ಗುರುಸೂಚಕವಾದ ಒಂದು ಶುನಕವು ಹಾದಿಯ ಉಪರಿಭಾಗದಲ್ಲಿ ನಿಂತು ಒಂದೊಂದು ಪ್ರದಕ್ಷಿಣಕ್ಕೆ ಒಂದೊಂದು ಹೆಜ್ಜೆಯಂತೆ ಐದು ಹೆಜ್ಜೆಗಳನ್ನು ಇಟ್ಟುಕೊಂಡು ಶ್ರೀಗಳವರ ಮುಂದೆನಡೆದು

ಹೋಯಿತು. ಅದನ್ನು ಪುನಃನೋಡಲು ಅದು ಅದೃಶ್ಯವಾಯಿತು. ಆ ದಿವಸ ರಾತ್ರಿ ಶ್ರೀದತ್ತ ಪ್ರಭುವು ದರುಶನವನ್ನು ಕೊಟ್ಟು ಶ್ರೀ ಸಂಸ್ಥಾನದ ಸರ್ವ ಭಾರವನ್ನು ವಹಿಸಿದಂತೆ ತೋರಿಸಿದನು. ಶ್ರೀಗಳವರು ತಮ್ಮ ಪೂರ್ವಾಶ್ರಮದ ಮಂತ್ರಾಧಿಷ್ಠಾನ ದೇವತಾದ್ಭುತಪರಮಾನುಗ್ರಹಕ್ಕೆ ತುಂಬ ಆನಂದಿಸಿ ಧೈರ್ಯದಿಂದ ಶ್ರೀಮಠದ ಕಾರ್ಯವನ್ನು ನಡೆಸುತ್ತಿದ್ದರು. ಇದು ಪುಷ್ಯಮಾಸದಲ್ಲಿ ನಡೆಯಿತು. ಪುಷ್ಯ ಬಹುಳ ಷಷ್ಠಿ ಪರಮಪೂಜ್ಯ ಶ್ರೀಕಂಬದ ಗುರುಗಳವರ ಆರಾಧನವಿರುತ್ತದಷ್ಟೇ; ಆಗಿನ ಕಾಲಕ್ಕೆ ಮಧ್ಯಾನ್ಹ ಹನ್ನೆರಡು ಗಂಟೆಯಲ್ಲಿ ಶ್ರೀತ್ರಯಸ್ತ್ರಿಂಶತ್ ಕೋಟಿ ದೇವತಾಸ್ವರೂಪ ಶ್ರೀಬ್ರಹ್ಮ—ವಿಷ್ಣು ಮಹೇಶ್ವರಾತ್ಮಕ ಶ್ರೀಸಚ್ಚಿದಾನಂದ ಸದ್ಗುರು ದತ್ತಾತ್ರೇಯ ಶಿಲಾಮಯ ವಿಗ್ರಹವನ್ನೂ ಒಬ್ಬ ದತ್ತಭಕ್ತನು ತಂದು ಅರ್ಪಿಸಿದನು. ದಿವಸವು ಆಘವಿಗ್ರಹವು ಬಂದಿರುವುದರಿಂದ ಪೂರ್ವದಲ್ಲಿ ರಾಣೆಬೆನ್ನೂರ ತಮ್ಮಣ್ಣ ನಾಯಕರು ಫಾಲ್ಗುಣ ಶುದ್ಧ ದಶಮಿ ದಿವಸದಲ್ಲಿ ಶ್ರೀಪರಮ ಗುರುಗಳವರ ವರುಷದ ಆರಾಧನೆ ನಡೆಯಬೇಕಾಗಿತ್ತು. ಆಗಿನ ಕಾಲಕ್ಕೆ ಶ್ರೀಪರಮಗುರುಗಳವರ ಸಮಾಧಿಗೆ ಲಿಂಗವು ಬೇಕೆಂದು ಚಿಂತಿಸುವ ಸಮಯದಲ್ಲಿ ಒಬ್ಬ ಸನ್ಯಾಸಿಗಳು ಲಿಂಗವನ್ನು ತಂದು ಕೊಟ್ಟರು. ಇದು ಪರಮ ಗುರುಗಳವರೂ ಲಿಂಗರೂಪದಿಂದ ಬಂದು ಆವಿರ್ಭಾವವಾದರೆಂದು ಶ್ರೀಗುರುಗಳವರು ಪರಮಾನಂದವನ್ನು ಪಟ್ಟರು.

ಗಾಣಗಪುರದಲ್ಲಿ ಹೋಗಿ ದತ್ತಗುರುವಿನ ಸೇವೆ ಮಾಡಿದ ಪ್ರಥಮ ದಿವಸವೇ ಶ್ರೀದತ್ತನು ನಾನು ಉದಗಟ್ಟಿಯಲ್ಲಿ ಶ್ರೀಮಜ್ಜಗದ್ಗುರು ಶ್ರೀನರಸಿಂಹ ಭಾರತೀ ಸ್ವಾಮಿಗಳವರ ಸಮಾಧಿಯಲ್ಲಿ ಇರುತ್ತೇನೆ. ಹತ್ತಿರವಿದ್ದ ಉದಗಟ್ಟಿಯನ್ನು ಬಿಟ್ಟು ದೂರವಿದ್ದ ಗಾಣಗಪುರಕ್ಕೆ ಏತಕ್ಕೆ ಬಂದೆ? ಅಲ್ಲಿ ನೀವು ಸೇವೆ ನಡಿಸಿದಲ್ಲಿ ನಿನಗೆ ಅಮೇಧ್ಯರೂಪಕವಾಗಿ ಕಾಣಿಸುತ್ತಿದ್ದ ಅನ್ನವು ಅನ್ನರೂಪಕವಾಗಿ ಕಾಣಿಸುತ್ತದೆಂದೂ ಪುತ್ರಸಂತಾನವಾಗುತ್ತದೆಂತಲೂ ಅಪ್ಪಣೆ ಕೊಡಿಸಿದ ವಾಕ್ಯದಂತೆ ದತ್ತಾತ್ರೇಯದ ರೂಪವೇ ಕಂಬದ ಗುರುಗಳೆಂತಲೂ, ಕಂಬದ ಗುರುಗಳೇ ದತ್ತಾತ್ರೇಯ ಸ್ವರೂಪವೆಂತಲೂ ಶ್ರೀಗುರೂಪದೇಶ ಮಹಾವಾಕ್ಯ ರಹಸ್ಯಾರ್ಥವನ್ನು ಸ್ಮರಿಸಿ ಮಹಾನಂದಭರಿತ

ಸ್ವಾಂತರಾದರು. ಇಂಥ ಶ್ರೀಗುರು ಮಹಾಪ್ರಭುವಿನ ಮಹಾತ್ಮ್ಯವು ಆದಿ ಶೇಷನಿಗೆ ಸಹ ವರ್ಣಿಸಲು ಸಾಧ್ಯವಿಲ್ಲವೆಂತಲೂ ಗುರು ಋಣವನ್ನು ತೀರಿಸಿ ಕೊಳ್ಳಲು ಬ್ರಹ್ಮ, ವಿಷ್ಣು, ಮಹೇಶ್ವರರಿಗೂ ಸಹತೋರಿಸಲು ಸಾಧ್ಯವಿಲ್ಲ ವೆಂದು "ನಗುರೋರಧಿಕಂ ಇತವೇವ ಶುಭಂ| ಇತ್ಯಾದಿ ಗುರುಗೀತಾ ಮಹಾ ವಾಕ್ಯಗಳು ಘೋಷಿಸುವದರಲ್ಲಿ ಸಾಮಾನ್ಯ ಜನವರ್ಣ ವಿಶೇಷವೇನಿರುವದಿಲ್ಲ

ಶ್ರೀ ಕ್ಷೇತ್ರ-ಶೃಂಗೇರಿ ಶ್ರೀಮಜ್ಜಗದ್ಗುರು ಶ್ರೀ ವಾಲುಕೇಶ್ವರ ಭಾರತಿ ಮಹಾಸ್ವಾಮಿಗಳವರು



ತಮ್ಮ ಗುರುಗಳಾದ ಶ್ರೀ ವಿದ್ಯಾಶಂಕರ ಭಾರತೀ ಸ್ವಾಮಿಗಳವರ ಮಾಸಿಕ ಆರಾಧನೆಗಳು ಮತ್ತು ಪರಮ ಗುರುಗಳಾದ ಶ್ರೀಶಂಕರಭಾರತಿ ಸ್ವಾಮಿಗಳವರ ವರುಷದ ಆರಾಧನೆಯು ನಡೆಯಬೇಕಾದುದು ಇತ್ತು. ಇದಕ್ಕೆ ಸಾಕಷ್ಟು ದ್ರವ್ಯವು ಇಲ್ಲದೆ ಇರುವದರಿಂದ ಮದ್ರಾಸ ಹೈಕೋರ್ಟಿನಲ್ಲಿ ನಡೆಯುತ್ತ ಇದ್ದ ಕೋಳಲ ಗ್ರಾಮದ ಅಡ್ಡಪಾಲಕಿ ಸಂಬಂಧ ವ್ಯಾಜ್ಯ ನಡೆಸಲು ಪುನಃ ಹತ್ತುಸಾವಿರ ರೂಪಾಯಿ ಸಾಲಮಾಡುವ ಪ್ರಸಂಗ ಒದಗಿತು; ಮಠದಲ್ಲಿ ಇರುವ ಅಧಿಕಾರಿಗಳು ಮಠವನ್ನು ಬಿಟ್ಟಿರುವದರಿಂದಲೂ ಮತ್ತು ಅಧಿಕಾರಿಗಳು ದ್ರವ್ಯಕಾಂಕ್ಷಾತತ್ಪರರಾಗಿ ದುರ್ವ್ಯಯವನ್ನೂ ಮಾಡುವದರಿಂದ ಯೋಗ್ಯರಾದ ಸರ್ವಾಧಿಕಾರಿಗಳು ಇಲ್ಲದೆ ಇರುವದರಿಂದಲೂ ದೇಶದಲ್ಲಿ ಪಕ್ಷದ್ವಯವಿರುವದರಿಂದಲೂ ಎಲ್ಲಿನೋಡಿದರೂ ಕಲಹಗಳು ಪ್ರಬಲಿಸಿದವು. ಇನಾಮು ಗ್ರಾಮಗಳ ಇತರೇ ಭೂಮಿಗಳ ಖಾತೆ ಶ್ರೀಗಳವರ ಹೆಸರಿಗೆ ಆಗಲಿಲ್ಲ. ಪರಿಪಂಥಿಗಳು ಶ್ರೀಗಳವರ ಹೆಸರಿನಿಂದ ಖಾತೆ ಆಗದಂತೆ ಮಾಡಹತ್ತಿದರು. ಶ್ರೀಗಳವರು ಶ್ರೀವಿದ್ಯಾಶಂಕರನ ಮೇಲೆ ಭಾರವನ್ನಿಟ್ಟು ತಮ್ಮ ಕೆಲಸಗಳನ್ನು ಬಿಡದೆ ಮಾಡಹತ್ತಿದರು. ಇಂಥ ಪರಿಸ್ಥಿತಿಯಲ್ಲಿ ಯಜ್ಞೇಶ್ವರನಿಗೆ ವಾಯುದೇವರು ಸಹಾಯನಾಗಿದ್ದನಂತೆ ಶ್ರೀಪರಾಶಕ್ತಿ ಶ್ರೀಗಳವರನ್ನು ಪರೀಕ್ಷಾ ಮಾಡಹತ್ತಿ ಶಿಷ್ಯ ಜನರಲ್ಲಿ ಮತ್ತು ಸರ್ಕಾರನಲ್ಲಿ ಸಹ ತೊಂದರೆ ಬರುವಂತೆ ಶ್ರೀಸಂಸ್ಥಾನದ ಶಿಷ್ಯ ಪ್ರಮುಖರಾದ ತರ್ಕಪಂಚಾನನಾದಿ ಬಿರದಾಂಕಿತ ವಿರೂಪಾಕ್ಷಶಾಸ್ತ್ರಿಗಳನ್ನು ವಿದ್ವನ್ಮಣಿ ಬಿರುದಾಂಕಿತರಾದ ನಾಗೇಶ ಶಾಸ್ತ್ರಿಗಳನ್ನೂ ಶ್ರೀಪರಾಶಕ್ತಿ ಪ್ರೇರೇಪಿಸಿ ಚಿತ್ರದುರ್ಗದಿಂದ ಗದಗ ಪರ್ಯಂತವೂ ಮೈಸೂರ, ಮುಂಬಯಿ ಸರ್ಕಾರ ಉದ್ಯೋಗಸ್ಥರಲ್ಲಿ ಶ್ರೀಗಳವರ ಹೆಸರಲೆ ಖಾತೆಆಗದಂತೆ ಉಪನ್ಯಾಸಾದಿಗಳನ್ನು ಹೇಳುತ್ತ ಬೇರೆ ದೇಶಸ್ಥರ ಮಠವನ್ನು ಸ್ಥಾಪನಮಾಡಿ ಮಠದಲ್ಲಿ ವಿರೂಪಾಕ್ಷಶಾಸ್ತ್ರಿಗಳು ಆಶ್ರಮ ತಗೆದುಕೊಳ್ಳುತ್ತಾರೆಂದು ಹೇಳುತ್ತ ಸಂಚರಿಸಿದರು. ಆದುವರೆಗೂ ಮೇಲಿನ ಪಂಡಿತರು ಪಾಂಡಿತ್ಯ ಮಾತ್ರ ಉಳ್ಳವರೆಂತಲೂ ಶ್ರೀಪರಾಶಕ್ತಿ ಪರಮಾನುಗ್ರಹವು ಇಲ್ಲದೆ ಹೋದರೆ ಪಾಂಡಿತ್ಯವು ಶೋಭಿಸಲಾರದೆಂತಲೂ ಶ್ರೀಗಳವರು ಶ್ರೀಪರಾಂಬಾ ಜಪಪೂಜಾದಿಗಳನ್ನು ಉಳ್ಳವರಾಗಿ ಶ್ರೀಪರಾಂಬಾನುಗ್ರಹ ಪಾತ್ರರೆಂತಲೂ ಶಿಷ್ಯಜನರಿಗೂ ಸರ್ಕಾರಿ ಜನರಿಗೂ ಪಂಡಿತರಿಗೂ

ಪಾಮರರಿಗೂ ಸ್ಪಷ್ಟ ಪಡಿಸುವದಕ್ಕಾಗಿ ಶ್ರೀಪರಾದೇವಿ ಪಂಡಿತರು, ಸರ್ಕಾರಿ ಜನರು ಶಿಷ್ಯರುಗಳ ಮೂಲಕ ಶ್ರೀಗಳವರನ್ನೂ ಪರೀಕ್ಷಿಸಿ ತನ್ನ ಸೇವೆ ಮಾಡುತ್ತಿರುವ ಶ್ರೀಗಳವರ ಹೆಸರಲೆ ಖಾತೆ ಮುಂತಾದವುಗಳು ತೊಂದರೆ ಇಲ್ಲದಂತೆ ಖಾತೆಗಳನ್ನು ಮಾಡಿಸಿ ಪಂಡಿತಪಾಮರ ಜನರೆಲ್ಲರಿಗೂ ಶ್ರೀಗಳವರಲ್ಲಿ ಭಯಭಕ್ತಿಯನ್ನು ಶ್ರೀಪರಾಶಕ್ತಿ ಉಂಟುಮಾಡಿಸಿದಳು. ಸರ್ಕಾರದವಲ್ಲಿ ಜನರಲ್ಲಿ, ಮಠದಲ್ಲಿ ಮಠಕ್ಕೆ ಪ್ರತಿಕೂಲವಾದ ಆಲೋಚನೆಗಳು ಕೆಲಸಗಳು ನಡೆಯುತ್ತ ಇರುವ ಪರಿಸ್ಥಿತಿಯಲ್ಲಿ ಶ್ರೀಸಂಸ್ಥಾನದಲ್ಲಿ ಸರ್ವಶಕ್ತನಾದ ಸರ್ವಾಧಿಕಾರಿ ಇಲ್ಲವೆ ಇದ್ದರೆ ಶ್ರೀಗಳವರಿಗೆ ಅತ್ಯಂತ ಕಷ್ಟವಾಗುತ್ತದೆಂದು ಭಾವಿಸಿ ಅತ್ಯಂತ ಶಕ್ತನಾದ ಸರ್ವಾಧಿಕಾರಿಯನ್ನು ನೇಮಿಸಲು ಶ್ರೀಗಳು ದೃಢಸಂಕಲ್ಪ ಮಾಡಿ, ಮೈಸೂರ ದೇಶದಲ್ಲಿ ಅಸಿಸ್ಟಂಟ ಪೋಲಿಸ ಸುಪರಿಂಡೆಂಟ ಕೆಲಸ ಮಾಡಿ ನಿವೃತ್ತರಾದ ಶ್ರೀನರಸಿಂಹ ಶಾಸ್ತ್ರಿಗಳವರನ್ನು ಸರ್ವಾಧಿಕಾರಿಗಳಾಗಿ ನಿಯಮಿಸಿದರು. ಗುರುಪರಮಗುರುಗಳವರ ವೃಂದಾವನಗಳಿಗೆ ಆಚ್ಛಾದನಾದಿಗಳು ಇಲ್ಲದೆ ಇರುವದರಿಂದ ತಮ್ಮ ಗುರುಗಳವರ ಆಜ್ಞಾಪ್ರಕಾರ ದೃಢವಾದ ದೇವಸ್ಥಾನವನ್ನು ವಿಶೇಷ ದ್ರವ್ಯವನ್ನು ಖರ್ಚುಮಾಡಿ ಗಾಳಿ, ಮಳೆ, ಬಿಸಿಲು ಅಂದುಕೊಳ್ಳದೆ ಖುದ್ದ ತಾವೇ ಸರ್ವ ಕೆಲಸಗಳನ್ನೂ ಶ್ರೀಗಳವರು ಖುದ್ದ ನೋಡಿಕೊಳ್ಳುತ್ತ ದೇವತಾಸ್ಥಾನದ ಕಟ್ಟಡವನ್ನು ಕಟ್ಟಿಸಿದರು. ಕ್ರಮಕ್ರಮವಾಗಿ ಸಾಲಗಳನ್ನೂ ತೀರಿಸುತ್ತ ಬಂದರು. ಶ್ರೀಗಳವರ ಅಪ್ಪಣೆಗೆ ಒಳಪಟ್ಟು ಸರ್ವಾಧಿಕಾರಿಗಳಾದ ಶ್ರೀನೃಸಿಂಹ ಶಾಸ್ತ್ರಿಗಳು ಕೆಲಸ ಮಾಡುತ್ತಿದ್ದರು. ಕ್ರಮಕ್ರಮವಾಗಿ ಸರ್ವದೇಶಗಳಲ್ಲಿ ಶ್ರೀಸಂಸ್ಥಾನದ ವಿಚಾರವು ಹಬ್ಬಿಕೊಳ್ಳಹತ್ತಿತು. ಪರಾಧೀನವಾಗಿರುವ ಕೆಲವು ಭೂಮಿಗಳು ಕಾಣಿಕೆಗಳು ಕೆಲಕೆಲವು ಕ್ರಮವಾಗಿ ಶ್ರೀಸಂಸ್ಥಾನ ಸ್ವಾಧೀನವಾಗಲಿಕ್ಕೆ ಹತ್ತಿದವು.

ಶ್ರೀ ಸಂಸ್ಥಾನದ ಕೆಲವು ಪರಿಸ್ಥಿತಿಗಳು ಸ್ವಲ್ಪ ಅನುಕೂಲವಾದನಂತರ ಶ್ರೀ ಸಂಸ್ಥಾನದ ದೇಶಸಂಚಾರ, ಶಿಷ್ಯಜನ ಆಚಾರ ವಿಚಾರ ಮುಂತಾದವು ನಡೆದು ಬಹಳ ವರುಷವಾಯಿತೆಂದು ಆಲೋಚಿಸಿ, ಪುನಃ ಕೇವಲ ಶೀಘ್ರದಲ್ಲಿ ಸಂಚಾರವು ಮಾಡುವ ಏರ್ಪಾಡು ಮಾಡಬೇಕೆಂದು ನಿಶ್ಚಯಿಸಿ, ಸರ್ವಾಧಿಕಾರಿಗಳಿಗೆ ಅಪ್ಪಣೆಮಾಡಿದರು. ತದನಂತರ ಕೆಲವು ಶಿಷ್ಯ ಪ್ರಮುಖರಿಂದ

ಸಂಚಾರದ ಸಂಕಲ್ಪವು ಬೆಳೆಸಬೇಕೆಂದು ವಿಶೇಷವಾಗಿ ವಿಜ್ಞಾಪಿಸಲ್ಪಡುವ ದಾಯಿತು. ಅನೇಕ ವರುಷಗಳಿಂದ ಶ್ರೀಸಂಸ್ಥಾನದಿಂದ ತಪ್ಪಿ ಹೋಗಿರುವ ಹಂಗರಹಾಳ ಎಂಬ ಗ್ರಾಮವು ರೆವ್ಹಿನ್ಯೂ, ಸಿವಿಲ್, ಕ್ರಿಮಿನಲ್, ನ್ಯಾಯ ಸ್ಥಲಗಳಲ್ಲಿ ಹೊಡೆದಾಡಿ ವರುಷಕ್ಕೆ ಏಳುನೂರು ರೂಪಾಯಿ ಬರುವ ಸದರು ಗ್ರಾಮವನ್ನು ಸಂಸ್ಥಾನಕ್ಕೆ ಪುನಃ ಬರಮಾಡಿಕೊಂಡು ಹಂಗರಹಾಳವೆಂಬ ಗ್ರಾಮವನ್ನು ತಗೆದು ವಾಲುಕೇಶ್ವರ ಪುರವೆಂಬ ನಾಮವನ್ನು ಇಟ್ಟು ಹೋದ ಗ್ರಾಮವನ್ನು ಪುನಃ ಸಂಪಾದನ ಮಾಡಿದರು. ಇದರಲ್ಲಿ ಶ್ರೀ ನರಸಿಂಹ ಶಾಸ್ತ್ರಿಗಳು ತುಂಬ ಶ್ರದ್ಧೆಯಿಂದ ಕೆಲಸ ಮಾಡಿ ಸಂಸ್ಥಾನಕ್ಕೆ ಅನುಕೂಲ ವನ್ನು ಮಾಡಿದರು.

ದೇಶಸಂಚಾರ ಮಾಡುವದರಲ್ಲಿ ಶಿಷ್ಯಜನರನ್ನು ಶ್ರೀ ಸಂಸ್ಥಾನಕ್ಕೆ ಬರಮಾಡಿಕೊಂಡು ಸಂಸ್ಥಾನದ ಪರಿಸ್ಥಿತಿಗಳನ್ನು ಶಿಷ್ಯಜನರಿಗೆ ತಿಳಿಯುವಂತೆ ಬೋಧಿಸಿ ತದನಂತರ ಸಂಚಾರ ಮಾಡುವದು ಸೂಕ್ತವೆಂದು ತೀರ್ಮಾನಿಸಿ ದರು. ಶಿಷ್ಯಜನರು ಶ್ರೀ ಸಂಸ್ಥಾನಕ್ಕೆ ಬರಲು ತಕ್ಕ ಕಾರ್ಯವನ್ನು ಮಾಡ ಬೇಕೆಂತಲೂ, ಶಿಷ್ಯಜನರಲ್ಲಿ ಮಠದ ಪ್ರತಿಕೂಲ ಬುದ್ಧಿ ಇರಬಾರದೆಂತಲೂ ಇದಕ್ಕೆ ತಕ್ಕ ಅನುಷ್ಠಾನವು ದೇವೀ ಅನುಷ್ಠಾನವೆಂತಲೂ ಶ್ರೀ ಸಂಸ್ಥಾನದಲ್ಲಿ ಶತಚಂಡಿಯಾಗವು ಮಾಡಿದ್ದರಲ್ಲಿ ಶಿಷ್ಯಜನ ಸಹಾನುಭೂತಿ ಪ್ರಾಪ್ತವಾಗುತ್ತ ದೆಂದು ನಿಶ್ಚಯಿಸಿದರು. ಶ್ರೀ ಶಂಕರಾಚಾರ್ಯರ ಅವಿಚ್ಛಿನ್ನ ಪರಂಪರಾ ಪೀಠದ ಮುಖ್ಯ ಸ್ಥಾನವಾದ ಕೂಡ್ಲೀಮಠದಲ್ಲಿ ಶ್ರೀ ಶಂಕರಾಚಾರ್ಯರ ವಿಗ್ರಹವು ಇಲ್ಲದೆ ಇರುವುದು ಕೇವಲ ಲೋಪವೆಂದು ನಿಶ್ಚಯಿಸಿ, ಶ್ರೀ ಶಂಕರಾ ಚಾರ್ಯರ ವಿಗ್ರಹ ಪ್ರತಿಷ್ಠೆಯನ್ನು, ಶ್ರೀ ಶತಚಂಡಿಯಾಗವನ್ನು ನೆರವೇರಿಸಲೇ ಬೇಕೆಂದು ಸರ್ವಾಧಿಕಾರಿಗಳಿಗೆ ಅಪ್ಪಣೆಯನ್ನು ಮಾಡಿದರು. ಆರ್ಥಿಕ ಪರಿ ಸ್ಥಿತಿ ಕೇವಲ ಅನುಕೂಲವಿಲ್ಲದೆ ಇರುವದರಿಂದ ಶ್ರೀ ನೃಸಿಂಹ ಶಾಸ್ತ್ರಿಗಳು ಕುಂದಗೋಳ ದೇಸಾಯರೊಂದಿಗೆ ಶ್ರೀಗಳವರ ಹೃದಯಾಸೆಯನ್ನು ವ್ಯಕ್ತ ಪಡಿಸಿದರು. ದೇಸಾಯಿಗಳು ತಕ್ಕಮಟ್ಟಿಗೆ ಸಹಾಯ ಮಾಡುತ್ತೇವೆಂದು ಹೇಳಿ ತಮ್ಮ ಮಗನೊಬ್ಬನನ್ನು ಶ್ರೀ ಶಂಕರಾಚಾರ್ಯರ ವಿಗ್ರಹ ಮಾಡಿಸುವು ದಕ್ಕೆ ಬೊಂಬಾಯ ಪ್ರಾಂತಕ್ಕೆ ಕಳುಹಿಸುತ್ತೇವೆಂದು ವಿಜ್ಞಾಪಿಸಿಕೊಂಡು ಪ್ರತಿಷ್ಠಾದಿಗಳನ್ನೂ ಮಾಡೇ ತೀರಬೇಕೆಂದು ಶ್ರೀಗಳವರಲ್ಲಿ ಅರಿಕೆಮಾಡಲು

ವಿಜ್ಞಾಪಿಸಿಕೊಂಡರು. ಆ ಕಾಲಕ್ಕೆ ಸುಮಾರು ಇಪ್ಪತ್ತೈದು ಮೂವತ್ತು ವರುಷ ಗಳ ಹಿಂದೆ ಪರಮ ಗುರುಗಳಾದ ಶ್ರೀ ಶಂಕರ ಭಾರತೀ ಸ್ವಾಮಿಗಳವರು ದೇಶ ಸಂಚಾರ ಮಾಡಿದ್ದರಿಂದ ಪ್ರಕೃತ ಸಂಚಾರ ಮಾಡಲು ತಕ್ಕ ಪರಿಕರಗಳು ವಿಶೇಷವಾಗಿ ಲೋಪವಾಗಿದ್ದವು. ಅವುಗಳನ್ನೆಲ್ಲ ನಾಲ್ಕಾರು ತಿಂಗಳಲ್ಲಿ ನೃಸಿಂಹ ಶಾಸ್ತ್ರಿಗಳು ಸರಿಪಡಿಸಿ ಶ್ರೀ ಕೂಡ್ಲೀಕ್ಷೇತ್ರಕ್ಕೆ ಹೋಗುವ ಅನುಕೂಲತೆ ಗಳನ್ನು ಸಿದ್ಧಪಡಿಸಿದರು. ಸುಮುಹೂರ್ತದಲ್ಲಿ ಉದಗಟ್ಟೆಯನ್ನು ಬಿಟ್ಟಿ ದ್ದಾಯಿತು. ಕೆಲವು ಶಿಷ್ಯ ಪ್ರಮುಖರು ತಮ್ಮ ತಮ್ಮ ಗ್ರಾಮಗಳಿಗೆ ದಯ ಮಾಡಬೇಕೆಂದು ಶ್ರೀಗಳವರಲ್ಲಿ ನಯ, ವಿನಯ, ಭಯ-ಭಕ್ತಿ ವಿಶ್ವಾಸಪೂರ್ವಕ ವಾಗಿ ಪ್ರಾರ್ಥನೆ ಮಾಡಿಕೊಂಡರು. ಅದಕ್ಕೆ ಶ್ರೀ ಶಾರದಾ ದೇವಿಯವರ ಸೇವಾದಿಗಳನ್ನು ಮಾಡದೆ ಪಾದಪೂಜೆ ಭಿಕ್ಷಾದಿಗಳನ್ನು ಪಡೆಯುವುದು ಸಂಪ್ರ ದಾಯವಲ್ಲವೆಂದು ಅಪ್ಪಣೆಕೊಟ್ಟು ಶ್ರೀದೇವೀಸೇವಾ ನಂತರವೇ ದೇಶಸಂಚಾರ ಉಪಕ್ರಮವಾಗುತ್ತದೆಂದು ಸಮಾಧಾನ ಪಡಿಸಿದರು. ಉದಗಟ್ಟೆಯನ್ನು ಬಿಟ್ಟವರು ಯಾರ ಯಾರ ಮನೆಗಳಿಗೂ ಹೋಗದೆ ದೇವಸ್ಥಾನಗಳಲ್ಲಿ ಬೈಲು, ಸ್ಥಳಗಳಲ್ಲಿ ದೇವರ ಪೂಜಾದಿಗಳನ್ನು ಮಾಡಿಕೊಂಡು ಕೂಡ್ಲಿ ಸ್ಥಲವನ್ನು ಸೇರಿ, ಮಠದ ಸಾಂಪ್ರದಾಯ ಪ್ರಕಾರವಾಗಿ ಶ್ರೀ ಕ್ಷೇತ್ರ ದೇವತಾ ದರ್ಶನಾದಿ ಗಳನ್ನು ಸೇವಿಸಿ, ಶ್ರೀ ಮಠವನ್ನು ಸೇರಿ, ಶ್ರೀ ಶಾರದಾದೇವಿ ಪಾದಪದ್ಮ ಸನ್ನಿ ಧಾನವನ್ನು ತಲ್ಪಿ, ದಂಡ ನಮಸ್ಕಾರ ಸೇವಾ ಪೂಜಾದಿಗಳನ್ನು ಅರ್ಪಿಸಿ ಶೋಭಿಸಿದರು. ಶ್ರೀ ಕೂಡ್ಲಿ ಕ್ಷೇತ್ರದ ಪ್ರವೇಶವು ತತ್ರಾಪಿ ಶ್ರೀ ಪರದೇವತಾ ಪಾದಪದ್ಮ ಸನ್ನಿಧಿ ಪ್ರಾಪ್ತಿ ಕೇವಲ ಆನಂದಕರವಾಗಿ ನಡೆಯಿತು. ಅಲ್ಲಿನ ಶಿಷ್ಯಜನರಿಗೆಲ್ಲರಿಗೂ ಕೇವಲ ಸಂತೋಷವಾಯಿತು. ಶ್ರೀ ನರಸಿಂಹ ಶಾಸ್ತ್ರಿ ಗಳು ಕೆಲವು ಕಾಲ ಶಿವಮೊಗ್ಗಾ ಜಿಲ್ಲೆಯಲ್ಲಿ ಕೆಲಸ ಮಾಡಿರುವುದರಿಂದ ಜನರೆಲ್ಲರಿಗೂ ತೃಪ್ತಿಕರವಾಗುವಂತೆ ಶ್ರೀ ಕೂಡ್ಲೀಮಠ ಪ್ರವೇಶವು ನಡೆ ಯಿತು.

ಶ್ರೀಮತ್ ಶಂಕರಾಚಾರ್ಯ ಪ್ರತಿಷ್ಠೆಯು ಶ್ರೀದೇವಿಯಾಗವು ಮಾಡುವ ಶ್ರೀಮುಖವಾದಿಗಳು ದೇಶ ದೇಶಗಳಿಗೂ ಕಳುಹಿಸಲ್ಪಟ್ಟವು. ಬೇಕಾದ ಪದಾರ್ಥಗಳು ಸ್ವೀಕರಿಸಲ್ಪಟ್ಟವು ಜನಂಗಳು ಬರಹತ್ತಿದರು. ಸಂಕಲ್ಪ ಮಾಡಿದ್ದಕ್ಕಿಂತಲೂ ಹೆಚ್ಚು ಋತ್ವಿಜರು ಪಂಡಿತರು ಸೇರಿದರು. ಸರ್ವಾಧಿ

ಕಾರಿಗಳಿಗೆ ಜನರಿಗೆ ವಸತಿ ಮುಂತಾದ ಏರ್ಪಾಡುಗಳನ್ನು ಸ್ವಲ್ಪಲೋಪವೂ ಸಹ ಇಲ್ಲದಂತೆ ಏರ್ಪಾಟುಮಾಡಲು ಶ್ರೀಗಳವರು ಅಪ್ಪಣೆ ಕೊಟ್ಟರು. ಕುಂದಗೋಳದ ದೇಸಾಯಿಗಳು ಸಮಾರಂಭಕ್ಕೆ ತಕ್ಕ ಪದಾರ್ಥಗಳನ್ನು, ವಿಗ್ರಹವನ್ನು ಸಮಕೂಲಿಸಿದರು. ಶ್ರೀದೇವಿ ತನ್ನ ಔರಸಪುತ್ರರಾದ ಶ್ರೀಗಳವರನ್ನು ಪರೀಕ್ಷಿಸಿ ಅನುಗ್ರಹ ಮಾಡುವದಕ್ಕೆ ನೂರಾರು ವರ್ಷಗಳಿಂದ ಶ್ರೀಕೂಡ್ಲೀಮಠದಲ್ಲಿ ನಡಿಯದೆ ಇರುವ ಮಹಾಮಹೋತ್ಸವಕ್ಕೆ ವಿವಿಧ ಪ್ರಾಂತಗಳಿಂದ ವಿವಿಧ ವಿದ್ಯಾ ಕುಶಲರನ್ನು ಸಂಸ್ಥಾನಕ್ಕೆ ಸೇರಿಸಿದಳು. ಸಂಕಲ್ಪ ದಿವಸ ಒದಗಿತು. ಮಂಗಳವಾದ್ಯ ವೇದಘೋಷಗಳು ತುಂಬಿದವು. ಜಪ, ತಪ, ಪಾರಾಯಣಾಭಿಷೇಕಾದಿಗಳು ನಡಿಯ ಹತ್ತಿದವು. ಧಾರವಾಡ ನಾಗೇಶಶಾಸ್ತ್ರಿಗಳು ತಮ್ಮ ವಿದ್ಯಾರ್ಥಿಗಳ ಸಹಿತ ಬಂದರು. ವಿರೂಪಾಕ್ಷ ಶಾಸ್ತ್ರಿಗಳು ವಿದ್ಯಾರ್ಥಿ ಸಹಿತ ಬಂದರು. ಪ್ರತಿಯೊಂದು ಕಾರ್ಯಕ್ರಮವನ್ನು ಶ್ರೀಗಳವರು ಸ್ವತಃ ಪರೀಕ್ಷಿಸುತ್ತ ಶೋಭಿಸಿದರು. ನಿರತಾನ್ನ ಪ್ರದಾತೃ ಸ್ಥಾನವು ಶ್ರೀಕೂಡ್ಲೀ ಮಠವೆಂದು ಹೆಸರು ಹೋಗದೆ ಸಂಸ್ಥಾಪನಾಗುವುದಕ್ಕೆ ಭಕ್ಷ್ಯಾದಿರಾಸಿಗಳು ಗುಡ್ಡಗಳಂತೆ ಮಾಡಿಸಿದರು. ಐದು ಆರು ದಿವಸವು ಬ್ರಾಹ್ಮಣ ಸುವಾಸಿನಿ ಸಂತರ್ಪಣೆ ಭಕ್ಷ್ಯಭೋಜ್ಯಾದಿಗಳಿಂದ ಕೇವಲ ವಿಜೃಂಭಣೆಯಿಂದ ನಡೆಸಲ್ಪಟ್ಟು ಶ್ರೀದೇವತಾ ಸಂತೃಪ್ತಿಗೆ ಸಾಕಷ್ಟು ಆಯಿತೆಂದು ಅನ್ನುವ ಹಾಗೆ ಮಠದ ಹಿಂದೆ, ಮುಂದೆ, ಮೇಲೆ ಕೆಳಗೆ ವಿವಿಧ ಪಂಕ್ತಿಗಳಿಂದ ಅತಿ ರಮಣೀಯವಾಗಿ ಶೋಭಿಸಿದೆ. ಕೊನೆಯ ದಿವಸಗಳಲ್ಲಿ ಶಾಸ್ತ್ರಾರ್ಥ ವಿಚಾರವು, ವೇದವಿದ್ಯಾ ವಿನೋದವು, ಹರಿಕಥಾಶ್ರವಣವು, ಗಾನ ನೈಪುಣ್ಯವು, ಆಶುಕವಿತ್ವಧಾರೆ ಸಂಪನ್ನತ್ವವು ಮುಂತಾದ ವಿವಿಧವಿದ್ಯಾ ಕೌಶಲ್ಯವು ಶೋಭಿಸಿದೆ. ಪ್ರತಿದಿವಸವು ನೇತ್ರಾನಂದಕರವಾಗಿ ದೀಪೋತ್ಸವವು ಶ್ರವಣಾನಂದಕರವಾಗಿ ಮಂತ್ರ ಪುಷ್ಪವು ಮನೋರಂಜಕವಾಗಿ ಶಾಸ್ತ್ರ ಚರ್ಚೆಯು ರಾಜಾಶೀರ್ವಾದವು ಜಗತ್‌ಕಲ್ಯಾಣ ಪ್ರಾರ್ಥನೆಯು ನಡೆಯಿತು. ಪಂಡಿತರೆಲ್ಲರಿಗೂ ವಿವಿಧವಸ್ತ್ರ ರಜತ ಸುವರ್ಣಾದಿ ಸಂಭಾವನಾ ದ್ರವ್ಯಗಳು ಸಮರ್ಪಿಸಲ್ಪಟ್ಟವು. ಬಡವರಿಗೆ ಸಾಮಾನ್ಯಜನರಿಗೆ ಯಥಾರ್ಹವಾಗಿ ದ್ರವ್ಯವು ಕೊಡಿಸಲ್ಪಟ್ಟಿದೆ. ಮಹೋತ್ಸವ ಮರುದಿವಸ ಅವಭೃತಸ್ನಾನಕ್ಕಾಗಿ ಆನೆಯ ಮೇಲೆ ಅಂಬಾರಿ ಉತ್ಸವವನ್ನು ಏರ್ಪಾಟು ಮಾಡಿದ್ದಾಗಿದೆ. ಶ್ರೀಗಳವರ

ಹಾಮಸ್ಥಾನಕ್ಕೆ ಅಂಬಾರಿಯಲ್ಲಿ ಕೂತುಕೊಳ್ಳಲು ವಿರೂಪಾಕ್ಷಶಾಸ್ತ್ರಿಗಳನ್ನು ಶ್ರೀಗಳವರು ಅಪೇಕ್ಷಿಸಿದರು. ಮಹೋತ್ಸವವು ಕೋಲಾಹಲವಾಗಿ ಅತಿ ವಿಜೃಂಭಣೆಯಿಂದ ಸರ್ವಜನನೇತ್ರಾನಂದಕರವಾಗಿ ತಂಡೋಪತಂಡ ಜನ ಸಹಿತವಾಗಿ ಸಂಪೂರ್ತಿಯಾಯಿತು. ಆಗಲೆ ಮುಂದೆ ವಿರೂಪಾಕ್ಷ ಶಾಸ್ತ್ರಿ ಗಳನ್ನು ಶಿಷ್ಯರನ್ನಾಗಿ ಪರಿಗ್ರಹ ಮಾಡುತ್ತಾರೆಂದು ಜನರಲ್ಲಿ ಸುದ್ದಿ ಹುಟ್ಟಿತು. ವಿರೂಪಾಕ್ಷಶಾಸ್ತ್ರಿ, ನಾಗೇಶಶಾಸ್ತ್ರಿಗಳ ಮುಂದೆ ಶಿಷ್ಯಪರಿಗ್ರಹ ವಿಷಯವು ಸ್ವಲ್ಪ ಪ್ರಸಂಗವನ್ನೂ ಶ್ರೀಗಳವರು ಮಾಡಿ ಅವರಿಗೆ ಆಸೆಗೊಳಿಸಿದರು. ಇದ ರಂತೆ ಮಹೋತ್ಸವವು ಪರಿಸಮಾಪ್ತಿಯಾಯಿತು. ಮುಂದೆ ಶ್ರೀದೇವಿ ಪರ ಮಾನುಗ್ರಹರೂಪ ಅನುಜ್ಞವನ್ನು ಶ್ರೀಗಳವರು ಪಡೆದು ವೈಶಾಖ ಬಹುಳ ಜವತಿಯಲ್ಲಿ ದೇಶಸಂಚಾರಕ್ಕಾಗಿ ಶ್ರೀಕೂಡ್ಲೀ ಸ್ಥಳವನ್ನು ಬಿಟ್ಟು ಹೊಳೆ ಹೊನ್ನೂರ ಮುಕ್ಕಾಂಮಾಡಿ ತದನಂತರ ಭದ್ರಾವತಿ, ತರಕೇರಿ, ಪೂರೈಸಿ ಕೊಂಡು ಶಿವಮೊಗ್ಗಾ ಮುಕ್ಕಾಂ ಮಾಡಿದರು. ೩೦—೪೦ ವರುಷದಿಂದ ಶಿವಮೊಗ್ಗೆಯಲ್ಲಿ ಶ್ರೀಕೂಡ್ಲೀಜಗದ್ಗುರುಗಳವರ ಸಂಚಾರೋತ್ಸವಾದಿಗಳು ಇಲ್ಲದೆ ಇದ್ದಿದ್ದಕ್ಕೆ ಶಿಷ್ಯಮಹಾ ಜನಂಗಳು ಕೇವಲ ಆತುರಚಿತ್ತರಾಗಿ ಶ್ರೀಗಳ ವರನ್ನು ಬರಮಾಡಿಕೊಳ್ಳಲು ಕೂತೂಹಲ ಉಳ್ಳವರಾಗಿದ್ದರು. ಸರ್ವಾಧಿ ಕಾರಿಗಳಾದ ನೃಸಿಂಹ ಶಾಸ್ತ್ರಿಗಳು ಶಿವಮೊಗ್ಗೆ ಪಟ್ಟಣದಲ್ಲಿ ನಡೆಯತಕ್ಕ ಅಂಬಾರಿ ಉತ್ಸವವನ್ನು ಗ್ರಾಮದಲ್ಲಿ ನಡೆಯತಕ್ಕ ಬ್ರಾಹ್ಮಣ ಸುವಾಸಿನಿ ಸಂತರ್ಪಣೆಯನ್ನು ಶ್ರೀಗಳವರ ಸಂದರ್ಶನಕ್ಕೆ ಪಂಡಿತರು ಬರುವ ಪದ್ಧತಿ ಯನ್ನು ಕೇವಲ ಶ್ಲಾಘ್ಯವಾಗಿ ಏರ್ಪಾಡು ಮಾಡಿದ್ದರು. ೮ ದಿವಸವು ಅತಿ ವಿಜೃಂಭಣೆಯಿಂದ ಪರಮಾದ್ಭುತವಾಗಿ ಪಾದಪೂಜೆ, ಭಿಕ್ಷಾದಿಗಳು ಮತ್ತು ಪಂಡಿತ ಸಂಭಾವನಾ ದೇವತಾ ಪ್ರತಿಷ್ಠಾದಿಗಳಿಗೆ ಸಹಾಯ ದ್ರವ್ಯಸಹಾ ಯವು ಕೇವಲ ತೃಪ್ತಿಕರವಾಗಿ ಮಾಡಲ್ಪಟ್ಟಿತು. ಮುಂದೆ ಸಂಚಾರವನ್ನು ಬೆಳಿಸಿ, ಕುವುಸಿ ತಾಲೂಕ ಹೊನ್ನಾಡೆ, ಹರಿಹರಾದಿ ಸ್ಥಲಗಳಲ್ಲಿ ಸಂಚಾರ ಮಾಡಿಕೊಂಡು ರಾಣೆಬೆನ್ನೂರ ಗ್ರಾಮ ಸಂಚಾರ ಮಾಡಬೇಕೆಂದು ಶ್ರೀಗಳ ವರು ಸಂಕಲ್ಪಿಸಿದರು. ರಾಣೆಬೆನ್ನೂರ ಸಂಚಾರಕ್ಕೆ ಆದಿ–ಮಧ್ಯಾಂತರ ಸಹಾಯಭೂತರು ನಾಡಿಗೇರ ಗುಂಡೇರಾಯರು; ಇವರು ಸದರ ಕಾಲದಲ್ಲಿ ತಾಲೂಕ ಬೋರ್ಡ ಪ್ರೆಸಿಡೆಂಟರಾಗಿದ್ದು ಉತ್ಸವಾದಿ ವಿಷಯಗಳಲ್ಲಿ

ಸಂಪೂರ್ಣ ಶ್ರದ್ಧಾವಹಿಸಿ ಕೆಲಸವನ್ನು ಮಾಡಿದರು. ರಾಣೆಬೆನ್ನೂರಲ್ಲಿ ಆನೆಯಮೇಲೆ ಅಂಬಾರಿಯನ್ನಿಟ್ಟು ಉತ್ಸವವು ಪಾದಪೂಜೆ ಭಿಕ್ಷಾದಿಗಳು ಬ್ರಾಹ್ಮಣಸುವಾಸಿನಿ ಸಂತರ್ಪಣೆಗಳು, ಪಂಡಿತ ಸಂಭಾವನೆ ಮುಂತಾದವು ತೃಪ್ತಿಕರವಾಗಿ ನಡೆದವು. ಶ್ರೀವಿದ್ಯಾಶಂಕರ ಸಹಿತ ಶ್ರೀಗಳವರ ಮಹೋತ್ಸವವು ರಾಣೆಬೆನ್ನೂರಲ್ಲಿ ಆಗಬಾರದೆಂದು ಸಂಕಲ್ಪಿಸಿದ ಒಬ್ಬರಿಗೆ ಸದರ ಕಾಲದಲ್ಲಿ ಕಣ್ಣೇ ಕಾಣಿಸದಂತೆ ಶ್ರೀಅಮ್ಮನವರು ನಿಗ್ರಹಿಸಿದರು. ಇದು ಕೇವಲ ಅದ್ಭುತವಾದ ವಿಷಯವಿರುತ್ತದೆ.

ರಾಣೆಬೆನ್ನೂರ ಬಿಟ್ಟು ದೇವರಗುಡ್ಡಕ್ಕೆ ಹೋಗಿ ಅಲ್ಲಿಂದ ಉದಗಟ್ಟಿ ತಲ್ಪಿ, ಅಲ್ಲಿಂದ ಹರಪನಹಳ್ಳಿಗೆ ಹೋಗಲು ಸಂಕಲ್ಪಿಸಿದರು. ಹರಪನಹಳ್ಳಿ ಜನರು ಶ್ರೀಗಳವರ ಪೂರ್ವಾಶ್ರಮದಲ್ಲಿಯೇ ಶಿಷ್ಯರಿದ್ದರು. ಆ ಜನ ಪ್ರಮುಖರಿಬ್ಬರು ಹಲವಾಗಲು ಮುಕ್ಕಾಮಿಗೆ ಶ್ರೀಗಳವರ ದರುಶನಕ್ಕೆ ಬಂದು ಶ್ರೀಗಳವರ ಪರಮಗುರುಗಳವರ ಕಾಲದಲ್ಲಿ ನಡೆದ ಕೆಲವು ಕಾರ್ಯ ಕಾರಣಗಳಿಂದ ಮತ್ತು ಸಾಂಪ್ರದಾಯವಿರುದ್ಧ ಶಾಸ್ತ್ರೀಯ, ರಾಮಭಜನ ಉಪನಯನ, ಅನ್ನಪ್ರಾಶನಾದಿಗಳನ್ನು ಮಾಡುವದರಿಂದಲೂ ಸಂಸ್ಥಾನ ಧರ್ಮಕ್ಕೆ ಹೆದರಿಕೊಂಡು ಶ್ರೀಸಂಸ್ಥಾನವು ಹರಪನಹಳ್ಳಿಗೆ ಬರಮಾಡಿಕೊಳ್ಳಲು ತಾವು ಅಶಕ್ತರೆಂದು ಶ್ರೀಗಳವರ ಮುಂದೆ ವಿಜ್ಞಾಪನ ಮಾಡಿಕೊಂಡು ಶ್ರೀಗಳವರನ್ನು ನಿರುತ್ಸಾಹ ಪಡಿಸಹತ್ತಿದರು. ಶ್ರೀಗಳವರು ಅದಕ್ಕೆ ಹಿಂದಿನ ಗುರುಗಳೂ, ಹಿಂದಿನ ಅಧಿಕಾರಿಗಳೂ ಪ್ರಕೃತ ಇಲ್ಲವೆಂದು ಕೆಲವು ಸಮಾಧಾನಗಳನ್ನು ಹೇಳಿ ಹರಪನಹಳ್ಳಿ ಶಿಷ್ಯ ಜನರಿಗೆ ತೀರ್ಥ ಪ್ರಸಾದಗಳನ್ನು ಕೊಟ್ಟು ಮುಂದಕ್ಕೆ ಹೋಗುತ್ತೇವೆಂದು ತಿರುಗಿಕಳಿಸಿ, ಹರಪನಹಳ್ಳಿ ಮುಕ್ಕಾಂ ಮಾಡಿದರು. ಆ ಗ್ರಾಮದಲ್ಲಿ ಶ್ರೀಸಂಸ್ಥಾನಕ್ಕೆ ಪಾದಪೂಜಾ, ಭಿಕ್ಷಾಸಪ್ವ ಸತ್ಕಾರಗಳು ಅನಿರ್ವಚನೀಯವಾಗಿ ನಡೆದವು. ಶ್ರೀಸಂಸ್ಥಾನದ ಅಧಿಕಾರಿಗಳನ್ನು ಸೇವಕರನ್ನು ಸಹ ವಿವಿಧವಾಗಿ ಸತ್ಕರಿಸಿದರು. ಚಾತುರ್ಮಾಸ ಸಂಕಲ್ಪವು ಚಿತ್ರದುರ್ಗ ಜಿಲ್ಹಾ ಚಳ್ಳಕೇರಿ ಗ್ರಾಮದಲ್ಲಿ ನಡೆಯುವ ಏರ್ಪಾಟು ಸರ್ವಾಧಿಕಾರಿಗಳುಮಾಡಿ ಸಿದ್ಧಪಡಿಸಿರುವದರಿಂದ ಹರಪನಹಳ್ಳಿ ಬಿಡಲು ಶ್ರೀಗಳವರು ನಿಶ್ಚಯಿಸಿದರು. ಹರಪನಹಳ್ಳಿ ಮಹಾಶಿಷ್ಯಜನ ಪ್ರಮು

ಖರು ತಾವು ಹುಚ್ಚರಾಗಿ ಚಾತುರ್ಮಾಸ್ಯ ಸಂಕಲ್ಪವು ತಮ್ಮ ಗ್ರಾಮದಲ್ಲಿಯೇ ನಡೆಯುವಂತೆ ಮಾಡದೆ ಹೋಗಿದ್ದಕ್ಕೆ ಕಣ್ಣೀರನ್ನು ಸುರಿಸಿದರು. ಮುಂದೆ ಕೊಟ್ಟೂರ ಗ್ರಾಮ ಸಂಚಾರವನ್ನು ಮಾಡಿಕೊಂಡು ಮೈಸೂರದೇಶದ ಹೊಕ್ಕಿ ಸೊಕ್ಕಿ ಗ್ರಾಮವನ್ನು ಸೇರಿದರು. ಇಲ್ಲಿಂದ ಮೈಸೂರ ದೇಶದ ಸಂಚಾರ ಪುನಃ ಉಪಕ್ರಮವಾಯಿತು. ಈ ಸಂಚಾರದಲ್ಲಿ ಚಿತ್ರದುರ್ಗದ ದೇಶಧಿಕಾರಿ ಮೋಕ್ಷಗುಂಡಂ ವೆಂಕಟ ರಾಮಾವಧಾನಿ ಅವರ ಸಹಾಯವು ವಿಶೇಷವಾಗಿ ಇರುತ್ತದೆ ಮಧ್ಯದಲ್ಲಿ ಬಂದು ಗ್ರಾಮಕ್ಕೆ ವಿರೂಪಾಕ್ಷ ಶಾಸ್ತ್ರಿಗಳು ಶ್ರೀಗಳವರ ದರುಶನಕೆ ಬಂದು ಶ್ರೀಗಳವರಲ್ಲಿ ತಮ್ಮ ಗೌರವವನ್ನು ತುಂಬಾ ತೋರ್ಪಡಿಸಿದರು ಶ್ರೀಗಳವರು ಶಾಸ್ತ್ರಿಗಳನ್ನು ಒಂದು ಶಾಸ್ತ್ರವಿಷಯವನ್ನು ಪ್ರಶ್ನಿಸಿದರು ಅದಕ್ಕೆ ಶಾಸ್ತ್ರಿಗಳು ಜವಾಬುಕೊಟ್ಟು ಶ್ರೀಗಳವರನ್ನು ಬಹಳ ಶ್ಲ್ಯಾಘಿಸಿದರು. ಸೊಕ್ಕಿಬಿಟ್ಟು ಜಗಲೂರ, ತುದುಗನೂರು ಮಾರ್ಗವಾಗಿ ಚಳ್ಳಗೇರಿಗೆ ಸೇರಿದರು. ಅಲ್ಲಿ ಚಾತುರ್ಮಾಸ ಸಂಕಲ್ಪವು ಆಷಾಢ ಬಹುಳ ತೃತೀಯೆಯಲ್ಲಿ ನಡೆಯಿತು. ಅಲ್ಲಿನ ಮತ್ತು ಸುತ್ತಮುತ್ತಲಿನ ಶಿಷ್ಯಜನರ ಸಹಾಯದಿಂದ ಎರಡು ತಿಂಗಳು ಚಾತುರ್ಮಾಸವು ತೃಪ್ತಿಕರವಾಗಿ ನಡೆದವು. ಆಗ್ರಾಮದ ಶಿಷ್ಯ ಜನರು ನವರಾತ್ರಿಗೆ ಅಲ್ಲಿಯೇ ಇರಲು ಬಹು ವಿಧವಾಗಿ ಪ್ರಾರ್ಥನೆ ಮಾಡಿದರು. ಅದನ್ನು ಶ್ರೀಗಳವರು ಅಂಗೀಕರಿಸಿ ನವ ರಾತ್ರಿಯನ್ನು ಅಲ್ಲಿಯೇ ನಡೆಯಿಸಿದರು. ಆನಂತರ ಚಳ್ಳಗೇರಿಯನ್ನು ಬಿಟ್ಟು ಮಾರ್ಗದಲ್ಲಿರುವ ಕೆಲವು ಗ್ರಾಮಗಳನ್ನು ನೋಡಿಕೊಂಡು ಮರಡಿ ಹಳ್ಳಿ ಸೇರಿದರು. ಕಾರ್ತಿಕಶುದ್ಧ ಪ್ರತಿಪದೆ ದಿವಸ ಶ್ರೀಮಠದ ಮಹಾಪೂಜಾ ಮಹೋತ್ಸವ ದಿವಸವಾಗಿರುವದರಿಂದ ಆ ದಿವಸ ಚಿತ್ರದುರ್ಗದಲ್ಲಿ ಸದರ ಮಹೋತ್ಸವವನ್ನು ನಡೆಸಲು ನಿಶ್ಚಯಿಸಿ ಕಾರ್ಯಕ್ರಮದ ಪತ್ರವನ್ನು ಸರ್ಕಾರಿಗೂ, ಜನರಿಗೂ ಕಳುಹಿಸಿದ್ದರು. ಚಿತ್ರದುರ್ಗ ಜಿಲ್ಹೆ ಜಗಳೂರ, ಕನಸಿನ ಕಟ್ಟೆ, ಚಳ್ಳಕೇರಿಯಲ್ಲಿ ಆನೆಯಮೇಲೆ ಅಂಬಾರಿಯಲ್ಲಿ ಶ್ರೀಗಳವರ ಉತ್ಸವ ನಡೆದಿದ್ದ ವಿರುದ್ಧವಾಗಿ ಸದರ ಅಂಬಾರಿ ಉತ್ಸವವು ಚಿತ್ರದುರ್ಗದಲ್ಲಿ ನಡೆಯಬಾರದೆಂದು ಆಗಿನ ಜಿಲ್ಹೆಯ ಅಧಿಕಾರಿಗಳು ಆಷಾಢ ಬಹುಳ ೧೩ ದಿವಸ ಉತ್ತರವನ್ನು ಕೊಟ್ಟರು. ಇದು ಅಮ್ಮನವರ ಕೇವಲ ವಿಷಮ ಪರೀಕ್ಷಪಷ್ಟೇ. ಆನೆಯ ಮೇಲೆ ಅಂಬಾರಿಯನ್ನು ಹಾಕಿ ಬರೆ ಆನೆ ಉತ್ಸವ

ದಲ್ಲಿ ಇರಬೇಕೇ ಹೊರ್ತು ಶ್ರೀಗಳವರು ಅದರಲ್ಲಿ ಕೂಡ್ರಬಾರದೆಂದು ಹಿಂದಿನ ಉತ್ಸವಕ್ಕೆ ವಿರುದ್ಧವಾದ ಸರ್ಕಾರೀ ಉತ್ತರವನ್ನು ಜನರು ತಿಳಿದು ತುಂಬಾ ವಿಷಾದಪಟ್ಟರು. ಶ್ರೀಗಳವರು ಮರಡೀ ಹಳ್ಳಿಯನ್ನು ಬಿಟ್ಟು ಮೇಣಾ ದಲ್ಲಿಯೇ ಚಿತ್ರದುರ್ಗ ಮಠವನ್ನು ಸೇರಿದರು. ಉತ್ಸವವಿಲ್ಲದ ಹಾಗಾ ಯಿತು. ಜನರಲ್ಲಿ ವಿವಿಧಾಲೋಚನೆಗಳು ಆರಂಭಿಸಿದವು. ಚಿತ್ರದುರ್ಗ ಸೇರಿದ ದಿವಸವೇ, ಗ್ರಾಮಕ್ಕೆ ತೀರ್ಥ, ಪ್ರಸಾದಗಳು ನಡೆದವು. ಆ ದಿವಸವೇ ಸರ್ವಾಧಿಕಾರಿಗಳು ಆನೆಯಮೇಲೆ ಶ್ರೀಗಳವರ ಉತ್ಸವವನ್ನು ಸರಕಾರದಿಂದ ಪಡೆಯಲು ಬೆಂಗಳೂರಿಗೆ, ಮೈಸೂರಿಗೆ ಹೋಗಿ ಒಂದುವಾರಕ್ಕೆ ಸವರ ಉತ್ಸವ ಆಜ್ಞಾಪತ್ರವನ್ನು ಪಡೆದು ಚಿತ್ರದುರ್ಗವನ್ನುಸೇರಿ ಕೇವಲ ವಿಜೃಂಭಣ ದಿಂದ ಪಟ್ಟಣದಲ್ಲಿ ಉತ್ಸವವನ್ನು ನಡೆಸುವಂತೆ ಏರ್ಪಾಟು ನಡೆಯಿತು. ಈ ಸಮಯದಲ್ಲಿ ಸಂಸ್ಥಾನಕ್ಕೆ ನಾಗೇಶ ಶಾಸ್ತ್ರಿಗಳು, ವಿರೂಪಾಕ್ಷ ಶಾಸ್ತ್ರಿಗಳು, ಬಂದು ಶ್ರೀಗಳವರ ದರುಶನಮಾಡಿಕೊಂಡು ಉಪನ್ಯಾಸಾದಿಗಳನ್ನು ಕೊಟ್ಟು ಮುಂದೆ ಆಶ್ರಮವಿಷಯವಾಗಿ ವಿರೂಪಾಕ್ಷ ಶಾಸ್ತ್ರಿಗಳು ತಾವು ಆಶ್ರಮ ತೆಗೆದು ಕೊಂಡು ಮುಂದೆ ನಾಗೇಶ ಶಾಸ್ತ್ರಿಗಳಿಗೆ ಕೊಡುತ್ತೇವೆಂದು ತಿಳಿಸಿ, ಹೋದರು. ಶ್ರೀಗಳವರಿಂದ ವಿರೂಪಾಕ್ಷ ಶಾಸ್ತ್ರಿಗಳಿಗೆ ಆಶ್ರಮ ಕೊಡಿಸಿ ಅವರಿಂದ ತಾವು ಆಶ್ರಮ ತಗೆದುಕೊಳ್ಳುತ್ತೇವೆಂದು ಹೇಳಿಹೋದರು. ಮುಂದೆ ೪೦ ದಿವಸ ಪರ್ಯಂತವು ಭಿಕ್ಷೆ, ಪಾದಪೂಜೆ, ಯಥಾವಿಧಿಯಾಗಿ ನಡೆದವು. ಪಂಡಿತ ಜನರ ಸಂಭಾವನೆಯು ನಡೆಯಿತು. ಗ್ರಾಮದಲ್ಲಿರುವ ಒಬ್ಬರಿಬ್ಬರು ಜಿಲ್ಲೆಯ ಅಧಿಕಾರಿಗಳಿಗೆ ಸಹಕಾರಿಗಳಾಗಿದ್ದು ಮಾಡಿದ ಕೆಲಸಗಳಿಗೆ ಉತ್ಸವಾನಂತ ರವು ಉತ್ಸವ ವಿಘ್ನಕಾರಿಗಳು ಪಶ್ಚಾತ್ತಾಪ ಪಟ್ಟರು. ಹೀಗೆ ೪೦ ದಿವಸ ನಂತರವು ಹಿರಿಯೂರು ಮಾರ್ಗದಿಂದ ಮಧುಗಿರಿ ನೋಡಿಕೊಂಡು ಅನಂತ ಪುರ ಜಿಲ್ಲಾ ಮಡಕಸಿರ, ಮುಂತಾದ ಗ್ರಾಮಗಳನ್ನು ನೋಡಿಕೊಂಡು ಸಿರಾ, ಚನ್ನಗಿರಿ, ತಾಲೂಕಗಳ ಸಂಚಾರ ಮುಗಿಸಿಕೊಂಡು ಶಂಕರ ಜಯಂತಿಗೆ ಮಾಡತಕ್ಕ ಜಪ, ತಪ, ಪಾರಾಯಣಾದಿಗಳ ಏರ್ಪಾಡು ಮಾಡಿಸಲು ಶ್ರೀ ಕೂಡ್ಲೀ ಕ್ಷೇತ್ರಕ್ಕೆ ಶ್ರೀಗಳವರು ದಯಮಾಡಿಸಿದರು.

ಅಲ್ಲಿ ಶಂಕರ ಜಯಂತಿಯನ್ನು ಶಂಕರ ವಿಜಯ ಪ್ರಸ್ಥಾನತ್ರಯ ಭಾಷ್ಯಾದಿ ಗ್ರಂಥ ಪಾರಾಯಣ ರುದ್ರಾಭೀಷೇಕ ಬ್ರಾಹ್ಮಣ ಭೋಜನಾದಿ

ಗಳು ಪ್ರತಿವರ್ಷ ನಡೆಯುವಂತೆ ಏರ್ಪಾಡು ಮಾಡಿ ಸ್ವಲ್ಪಕಾಲದಲ್ಲಿ ಕೂಡ್ಲಿ ಕ್ಷೇತ್ರವನ್ನು ಬಿಟ್ಟು ಉವಗಟ್ಟಿಗೆ ಶ್ರೀಗಳವರು ದಯಮಾಡಿಸಿದರು. ದೇಶ ಸಂಚಾರಕ್ಕೆ ಪೂರ್ವವೇ ಸರ್ವಾಧಿಕಾರಿ ನರಸಿಂಹ ಶಾಸ್ತ್ರಿಗಳು ಕೆಲವರು ಶುದ್ಧಾಸ್ತಿಕ ಶಿರೋಮಣಿಗಳಾದ ಮುಖ್ಯ ಶಿಷ್ಯರ ಸಂಗಡ ಜಗತ್ತಿನಲ್ಲಿ ದಿನ ದಿನ ಪ್ರವರ್ಧಮಾನರಾಗುತ್ತ ಇರುವ ಅಧರ್ಮ ಸಂಸ್ಕರ್ತರ ಹೃದಯಾಸೆಗಳನ್ನೂ ಅಧರ್ಮ ಕಾರ್ಯಗಳನ್ನು ಮತ್ತು ಕ್ರಮ ಕ್ರಮವಾಗಿ ಕಲಿಪ್ರಬಲ್ಯದಿಂದ ವೇದಾಂತವು ಭಕ್ತಿ, ಕ್ರಮಶಃ ನಾಸ್ತಿಕ್ಯ ರೂಪವನ್ನು ಹೊಂದುವ ಕಲಿ— ದುರ್ವಿಚಿತ್ರ ಪರಿಣಾಮವನ್ನು ಮತ್ತು ದಿನದಿನಕ್ಕೂ ಸಂಸಾರಾಭಿವೃದ್ಧಿಗಾಗಿ ವೈದಿಕ ಜನರ ಕಲ ಲಕ್ಷಣ ಪ್ರಪೂರಿತ ಆಭಾಸ ಧರ್ಮ ವೃತ್ತಿಯನ್ನು ಮತ್ತು ಮಹಾತ್ಮರು ಅವಲಂಬಿಸುವ ಯುಗಾನುವರ್ತನ ಕರ್ಮಾನುಷ್ಠಾನವನ್ನು ಭಾರತ, ಭಾಗವತ, ಸ್ಕಾಂದ, ಭವಿಷ್ಯೋತ್ತರ, ಬ್ರಹ್ಮಾಂಡ, ಕಲ್ಕಿ, ಗರುಡ ಪುರಾಣಾದಿ ವಚನಗಳಿಂದ ಉದ್ಘಾಟಿಸಿ ಶ್ರೀ ಕೂಡ್ಲೀ-ಶ್ರೀಂಗೇರಿ ಸಂಸ್ಥಾನದ ಅವಿಚ್ಛಿನ್ನ ಗುರು-ಪರಂಪರಾ ಪ್ರಾಪ್ತ ಸದ್ಧರ್ಮಗಳು, ಸತ್‌ಸಂಪ್ರದಾಯ ಪದ್ಧತಿಗಳು ಇನ್ನು ಮುಂದೆ ನಡೆಯಿಸುವುದು ಅತ್ಯಂತ ಕಷ್ಟವೆಂತಲೂ ವಿಘ್ನಕಾರಕರು ಅಭಿವೃದ್ಧಿಯಾಗಿ ತುಂಬಾ ತೊಂದರೆಗಳನ್ನು ನಾನಾ ಮುಖವಾಗಿ ಕೊಟ್ಟು ಕೀರ್ತಿಯನ್ನು ಕೆಡಿಸುತ್ತಾರಾದಕಾರಣ ನಾವು ಶೀಘ್ರದಲ್ಲಿ ಶಿಷ್ಯಪರಿಗ್ರಹವನ್ನು ಮಾಡಿ ಅನಾಮಧೇಯ ಧ್ಯಾನವನ್ನು ಮಾಡುತ್ತ ತುದಿಯಾಗುವ ಕಾಲದಲ್ಲಿ ಪೂರ್ವನಾಮಧೇಯಗಳು ಅನಾಮಧೇಯರಾಗಿರುವದು. ಕೇವಲೋಚಿತವೂ ಗುರುಜನ ಸಮಾದರಣೀಯವೂ ಶುದ್ಧ ಸಾತ್ವಿಕ ತಪಃಫಲವೂ ಸರ್ವದೇವತಾನುಗ್ರಹ ರೂಪವೂ ಎಂದು ತಿಳಿಸಿದುತೆ ಶಿಷ್ಯ ಪರಿಗ್ರಹ ಕಾರ್ಯಕ್ಕೆ ಕೇವಲ ಪ್ರಯತ್ನ ಮಾಡುವವರಾದರು.

## ಸಂನ್ಯಾಸದಲ್ಲಿ ಸಂನ್ಯಾಸ

ಚಾತುರ್ಮಾಸದಲ್ಲಿ ಶಿಷ್ಯಪರಿಗ್ರಹವನ್ನು ಮಾಡಬಾರದ ಕಾರಣ ಚಾತುರ್ಮಾಸ ಸಂಕಲ್ಪಕ್ಕೆ ಪೂರ್ವವೇ ಯಜುರ್ವೇದಾಧ್ಯಯನ ಸಂಪನ್ನರು ಸೋಮಯಾಗವನ್ನು ಮಾಡಿದವರೂ ತರ್ಕ, ವೇದಾಂತ ಶಾಸ್ತ್ರ ಸಮಗ್ರ ಪರಿಶೀಲಕರೂ ವ್ಯಾಕರಣ ಪೂರ್ವಮೀಮಾಂಸ ಶಾಸ್ತ್ರ ಪರಿಚಯದೂ ಹಿಂದಿನ

ಶ್ರೀಂಗೇರಿ ಜಗದ್ಗುರುಗಳ ಹತ್ತಿರ ಶಾಸ್ತ್ರಾಧ್ಯಯನ ಮಾಡಿದವರೂ ಶ್ರೀಜಗದ್ಗುರು ಚಂದ್ರಶೇಖರ ಭಾರತೀಸ್ವಾಮಿಗಳಿಗೆ ಪಾಠಹೇಳಿದವರೂ ಶ್ರೀಕೃಷ್ಣರಾಜವಡೆಯರ ಮಹಾರಾಜರಿಗೆ ವೇದಾಂತೋಪನ್ಯಾಸ ಮಾಡಿದವರೂ, ವಿವಿಧವಾದ ಸ್ಥಲಗಳಲ್ಲಿ ವಿದ್ಯಾಪ್ರಯುಕ್ತ ಕೀರ್ತಿ ಪಡೆದವರಾದ ವಿರೂಪಾಕ್ಷಶಾಸ್ತ್ರಿಗಳನ್ನು ಮಹಾರಾಜರ ಮೂಲಕ ಕರೆಯಿಸಿಕೊಂಡು ಸದರಶಾಸ್ತ್ರಿಗಳನ್ನು ಶಿಷ್ಯಪರಿಗ್ರಹವು ಮಾಡಲು ಮೈಸೂರ ಮಹಾರಾಜ ಮತ್ತು ಮೈಸೂರ ಸರ್ಕಾರನಿಂದ ಶ್ರೀನರಸಿಂಹಶಾಸ್ತ್ರಿಗಳ ಮೂಲಕ ಅನುಮತಿಯನ್ನು ಪಡೆದು ಅನೇಕ ಶಿಷ್ಯಜನರ ಮಧ್ಯ ವಿರೂಪಾಕ್ಷ ಶಾಸ್ತ್ರಿಗಳಿಗೆ ಸಂನ್ಯಾಸಾಶ್ರಮವನ್ನೂ ಕೊಟ್ಟು ಶ್ರೀವಿದ್ಯಾಭಿನವ ವಾಲುಕೇಶ್ವರ ಭಾರತಿಸ್ವಾಮಿ ಎಂದು ಅಭಿದಾನವನ್ನು ಮಾಡಿದರು. ಪಟ್ಟಾಭಿಷೇಕದ ದಿವಸ ರಾತ್ರಿ ನೂರಾರು ಶಿಷ್ಯಜನರನ್ನೂ ಶಿಷ್ಯಸ್ವಾಮಿಯನ್ನೂ ಸಂಬೋಧಿಸಿ "ಶಿಷ್ಯ ಮಹಾಶಯರೆ ಶಿಷ್ಯಸ್ವಾಮಿಗಳೇ, ಕಲಿಪ್ರಭಾವವು ದಿನದಿನಾಭಿವೃದ್ಧಿಯನ್ನು ಹೊಂದುತ್ತ ಇದೆ. ಅವಿಚ್ಛಿನ್ನ ಗುರುಪರಂಪರಾ ಪ್ರಾಪ್ತ ಶಿಷ್ಟಸಂಪ್ರದಾಯವು ನಾಶವಾಗದಂತೆ ಶ್ರೀಸಂಸ್ಥಾನ ಧರ್ಮಗಳನ್ನು ನಡೆಸುವದಕ್ಕೆ ಪ್ರಾಜ್ಞರಾದ ನಿಮಗೆ ಶ್ರೀಸಂಸ್ಥಾನ ಪೀಠವನ್ನು ಕೊಟ್ಟಿರುತ್ತೇವೆ. ಎಪ್ಪತ್ತು ವರುಷದಿಂದ ದೇಶಸ್ಥರಿಗೂ ಮಠಕ್ಕೂ ಇರುವ ದ್ವೇಷಭಾವವು ಅಂತ್ಯವಾಗುವದಕ್ಕೆ ನಾವು ಪೀಠವನ್ನು ತ್ಯಾಗಮಾಡಿ ಜನ್ಮಾಭಿಮಾನವು ದಿನದಿನ ಪ್ರವರ್ಧಮಾನವಾಗಲೆಂದು ದೇಶಸ್ಥ ಪಂಡಿತ ಶಿರೋಮಣಿಗಳಿಗೆ ಆಶ್ರಮವನ್ನು ಕೊಟ್ಟಿರುತ್ತೇವೆ. ಇದಕ್ಕಾಗಿ ನಮಗೆ ಏನೂ ಪ್ರತಿಫಲವು ಆವಶ್ಯಕವಿಲ್ಲ. ಶ್ರೀಸಂಸ್ಥಾನದ ಸಂಪ್ರದಾಯ ಸದ್ಧರ್ಮಾಭಿವೃದ್ಧಿಯಾದರೆ ಸಾಕು. ಇದಕ್ಕೆ ದೇಶಸ್ಥ ಶಿಷ್ಯಜನರು ಸ್ವಾಮಿಗಳಿಗೆ ಸಹಕಾರಿಗಳಾಗಿ ಧರ್ಮಾಭಿವೃದ್ಧಿ ಮಾಡಿ ಗುರುಶಿಷ್ಯರೆಲ್ಲರೂ ಶ್ರೀವಿದ್ಯಾಶಂಕರ ದಿವ್ಯಾನುಗ್ರಹಕ್ಕೆ ಪಾತ್ರರಾಗಬೇಕೆಂದು ಆಶೀರ್ವದಿಸುತ್ತ ಶ್ರೀವಿದ್ಯಾಶಂಕರ ದೇವರನ್ನು ಪ್ರಾರ್ಥಿಸುತ್ತೇವೆಂದು ಅಪ್ಪಣೆ ಕೊಟ್ಟರು. ಶ್ರೀಸಂಸ್ಥಾನದಲ್ಲಿ ಪರಮಗುರುಗಳಾದ ಶಂಕರಭಾರತಿ ಸ್ವಾಮಿಗಳವರು ಆಶ್ರಮ ತೆಗೆದುಕೊಂಡ ಕಾಲದಲ್ಲಿ ಐದು ಸಾವಿರ ರೂಪಾಯಿ ಇದ್ದ ಉತ್ಪನ್ನವನ್ನು ಅವರು ದೇಹವಿಡುವ ಕಾಲಕ್ಕೆ ಐವತ್ತು ಸಾವಿರ ರೂಪಾಯಿ ಉತ್ಪನ್ನ ಮಾಡಿದಕ್ಕಿಂತಲೂ ರೈತರವಶವಾಗಿದ್ದ ಭೂಮಿಗಳಿಗೆ ಸಾಗುವಳಿ

ಕರಾರು ಪತ್ರವು ಒಂದಾದರೂ ಇಲ್ಲದೆ ಇದ್ದದ್ದನ್ನು ಸುಮಾರು ೪೦ ಸಾವಿರ ಎಕರೆಗಳಿಗೆ ಕರಾರು ಪತ್ರಗಳನ್ನು ಏರ್ಪಾಟು ಮಾಡಿಸಿವರೆಂತಲೂ ಪರಿಪಂಥಿಗಳಿಂದ ಪ್ರಾಪ್ತವಾದ ವ್ಯಾಜ್ಯಗಳಿಗೆ ಲಕ್ಷಾವಧಿ ರೂಪಾಯಿ ಖರ್ಚಾಯಿತೆಂತಲೂ ಈ ಕಷ್ಟಗಳಿಗೆಲ್ಲ ನೇತ್ರವನ್ನು ಸಂರಕ್ಷಣಮಾಡುವ ಕಣ್ಣಿನ ರೆಪ್ಪದಂತೆ ಶ್ರೀಪರಮಗುರುಗಳನ್ನು ಕಾಯುತ್ತಿರುವ ಶ್ರೀವಿದ್ಯಾಶಂಕರಭಾರತಿಸ್ವಾಮಿಗಳವರು ತಮ್ಮ ಗುರುಗಳ ರಕ್ಷಣೆಕ್ಕಾಗಿ ಸಹಸ್ರ ಮುಖಗಳಿಂದ ಕಷ್ಟಪಟ್ಟಿದ್ದಕ್ಕೆ ಶ್ರೀಸಂಸ್ಥಾನ ಪೀಠಾಶ್ರವ.ವನ್ನು ಶ್ರೀವಿದ್ಯಾಶಂಕರಭಾರತಿಸ್ವಾಮಿಗಳವರು ಹೊಂದಿದ್ದನ್ನು ಮತ್ತು ತಾವು ಆಶ್ರಮ ತೆಗೆದುಕೊಂಡ ಕಾಲಕ್ಕೆ ದುರ್ವಾಜ್ಯಗಳಿಂದ ಋಣವಾಗಿದ್ದ ೮೦-೯೦ ಸಾವಿರ ರೂ. ಗಳ ಪೈಕಿ ೫೫ ಸಾವಿರ ರೂ. ಗಳನ್ನು ಶ್ರೀವಿದ್ಯಾಶಂಕರ ದೈವಾನುಗ್ರಹದಿಂದ ಸಾಲವನ್ನು ತೀರಿಸಿ ೫೫ವರುಷದಿಂದ ನಾವು ಗುರುಗಳವರು ಪರಮಗುರುಗಳವರು ಯಾವ ಸಂಸ್ಥಾನಕ್ಕೆ ರಕ್ತವೆಂಬುವ ಗಂಗಾಜಲದಿಂದ ಎಲಬುಗಳೆಂಬುವ ಗಂಧದ ಕೊರಡಿನಿಂದ ಗಂಧತೆಗೆದು ದೇಹವನ್ನು ಶುಷ್ಕಿಸಿದ್ದಾಗಿದ್ದೋ ಆ ಸಂಸ್ಥಾನವನ್ನು ನಿಮ್ಮ ಕೈಯಲ್ಲಿಟ್ಟು ನಾವು ಶ್ರೀಗುರುಚರಣಾಧ್ಯಾನ ನಿರತರಾಗುತ್ತೇವೆಂದು ಏಕಕಂಠವಾಗಿ ಘೋಷಿಸಿದರು.

## ಸಂನ್ಯಾಸದಲ್ಲಿ ಸಂನ್ಯಾಸ

### ರಾಜಸ ಸಂನ್ಯಾಸತ್ಯಾಗ ಪೂರ್ವಕ ಶುದ್ಧ ಸಾತ್ವಿಕ ಸಂನ್ಯಾಸವು.

ಮುಂದೆ ೨-೩ ತಿಂಗಳಲ್ಲಿ ಶ್ರೀಗಳವರು ಮಠವನ್ನು ಬಿಟ್ಟು ಅನಂತಪುರಸ್ಥಲಕ್ಕೆ ಹೋದರು. ಶ್ರೀಗಳವರ ಪೂರ್ವಾಶ್ರಮದಲ್ಲಿ ಅವರ ಮಾತೋಶ್ರೀಗಳವರಿಗೆ ವಚನಕೊಟ್ಟಿದ್ದ ಪ್ರಕಾರ ಶ್ರೀಗಳವರ ಪೂರ್ವಾಶ್ರಮದ ಜೇಷ್ಠಭ್ರಾತೃರು ತಮ್ಮ ಕನಿಷ್ಠರೇ ಪರಮ-ಹಂಸಾಶ್ರಮವನ್ನು ಹೊಂದಿದ ನಂತರ ನಾವು ಈ ಗ್ರಹಸ್ಥಾಶ್ರಮದಲ್ಲಿ ಏಕೆ ಇರಬೇಕೆಂದು ವಿರಕ್ತಿಯನ್ನು ಹೊಂದಿ ಪರಮಹಂಸ ಲಕ್ಷಣದಿಂದ ಆಹಾರವನ್ನೂ ಸ್ನಾನವನ್ನೂ ಬಿಟ್ಟು ಜಟಾಧಾರಿಗಳಾಗಿ ಭಯಂಕರ ವ್ರತವನ್ನು ಅವಲಂಬನ ಮಾಡಿದ್ದರಿಂದ ಶ್ರೀಗಳವರು ತಮ್ಮ ತಾಯಿಯವರನ್ನು ಮಠಕ್ಕೆ ಕರೆಯಿಸಿಕೊಂಡು ತಮ್ಮ ಪೂರ್ವಾಶ್ರಮದ ಶಿಷ್ಯನಾದ ಗಂಗವರದ ಓರಗಲ್ ಸೀತಾರಾಮಯ್ಯನ ಮೂಲಕ ಕರೆಸಿ

ಕೊಂಡು ಸದರ ಸೀತಾರಾಮಯ್ಯನವರ ಮನೆಯಲ್ಲಿಯೇ ಅವರನ್ನು ಇಡಿಸಿ ಅವರನ್ನು ಅವರ ಮನಸ್ಸಿಗೆ ಪುತ್ರಶೋಕವಾಗದಂತೆ ಪೋಷಣಮಾಡಿಸುವ ಏರ್ಪಾಟು ಮಾಡಿದ್ದು ಶ್ರೀಗಳವರು ತಾವು ಮಠ ಬಿಟ್ಟು ಅನಂತಪುರಕ್ಕೆ ಬಂದ ಕಾಲದಲ್ಲಿ ಶ್ರೀಗಳವರು ತಾಯಿಯವರು ಸಂಪೂರ್ಣ ವ್ಯಾಧಿಗ್ರಸ್ತರಾಗಿ ಮರಣೋನ್ಮುಖರಾಗಿ ಇದ್ದು ಶ್ರೀಗಳವರ ಸನ್ನಿಧಿಯಲ್ಲಿ ತಮ್ಮ ದೇಹತ್ಯಾಗ ವಾಗುವಂತೆ ತಾವು ಅನುಗ್ರಹಿಸಿದರೆ ತಮ್ಮ ರಾಮಚಂದ್ರ ಚರಣಧ್ಯಾನ ಫಲವು, ತಮ್ಮ ಪುತ್ರರ ಶ್ರೀಗಳವರಾದ ಫಲವು ಸಂಪೂರ್ತಿಯಾಗಿ ಸ್ತ್ರೀಜನ್ಮವು ಅಂತ್ಯವನ್ನು ಹೊಂದಿ ಮುಂದೆ ಪುರುಷ ಜನ್ಮ ಪ್ರಾಪ್ತವಾಗುತ್ತದೆಂದು ಶ್ರೀಗಳ ವರನ್ನು ಪ್ರಾರ್ಥಿಸಲು ಶ್ರೀಗಳವರು ಶ್ರೀಮತ್‌ಶಂಕರ ಭಗವತ್ ಪೂಜ್ಯ ಪಾದರು ತಮ್ಮ ತಾಯಿಯವರಿಗೆ ಕೊಟ್ಟವಚನಾನುಗುಣವಾಗಿ ಬಂದಂತೆ ಶ್ರೀಗಳವರು ಬಂದು ಅವರ ತಾಯಿಯವರ ಇಷ್ಟಾರ್ಥಕ್ಕೆ ಅನುಮೋದಿಸಿದರು. ಶ್ರೀಗಳವರು ತಾಯಿಯವರು ಸೀತಾರಾಮಯ್ಯನನ್ನು ಬಿಟ್ಟು ಅನಂತಪುರಕ್ಕೆ ಕೆಲವುಕಾರಣಗಳಿಂದ ಬರಲು ಕಂಣು ಇಲ್ಲದಂಥ ವ್ಯಾಧಿಗ್ರಸ್ತಳು, ಮರಣೋನ್ಮುಖಿಗಳು ಆದ ತಮ್ಮ ತಾಯಿಯವರನ್ನು ಸಂರಕ್ಷಣಮಾಡುವವರು ಒಬ್ಬರಾದರೂ ಬಂಧು ಬಳಗದವರು ಇಲ್ಲದೆ ಇರುವದರಿಂದ ಶ್ರೀಗಳವರು ತಮ್ಮ ಪೂರ್ವಾಶ್ರಮದ ಶಿಷ್ಯರಾದ ಸದಾಚಾರಿಗಳಾದ ಇಬ್ಬರು ದೇಶಸ್ಥ ಮ.ಡಿ ಹೆಂಗ ಸರನ್ನು ಏರ್ಪಾಡುಮಾಡಿ ಅವರ ತಾಯಿಯವರ ಮನಸ್ಸಿಗೆ ಅತೃಪ್ತಿಯಾಗ ದಂತೆ ಸಂರಕ್ಷಣ ಮಾಡಿಸಿದರು, ಅನಂತರ ಭಾವಸಂವತ್ಸರ ಮಾಘ ಬಹುಳ ಅಮಾವಾಸ್ಯೆಯ ದಿವಸ ರಾಮಚರಣವನ್ನು ಹೊಂದಿದರು. ಮುಂದೆ ಒಂದು ವರುಷದ ನಂತರ ಯುಗ ಸಂವತ್ಸರ ಫಾಲ್ಗುಣ ಬಹುಳ ಚತುರ್ಥಿ ದಿವಸ ಶ್ರೀಗಳವರು ನರಸಿಂಹ ಶಾಸ್ತ್ರಿಗಳು ಸೀತಾರಾಮಯ್ಯ ಮುಂತಾದ ಇಪ್ಪತ್ತು ಜನರ ಪರಿವಾರದಿಂದ ಮೋಟಾರ ಬಸ್ಸುಮೂಲಕ ಉತ್ತರ ಯಾತ್ರೆಯನ್ನು ಬೆಳಸಿ ಹರಿದ್ವಾರ ಸೇರಿದರು. ಶ್ರೀಗಳವರು ಹೊರಡುವ ಕಾಲದಲ್ಲಿ ಶ್ರೀವಿದ್ಯಾಭಿನವ ವಾಲುಕೇಶ್ವರ ಭಾರತಿ ಸ್ವಾಮಿಗಳು ತುಂಬಾ ವ್ಯಾಧಿಗ್ರಸ್ಥರಾಗಿದ್ದು ಧಾತುಸಂವತ್ಸರ ಚೈತ್ರ ಬಹುಳ ಚತುರ್ಥಿ ದಿವಸದಲ್ಲಿ ಶಿಷ್ಯಪರಿಗ್ರಹವ ಮಾಡದೆ ದೇಹವನ್ನು ಇಟ್ಟರು. ಮೈಸೂರಲ್ಲಿ ನಡೆದ ಈ ಸಮಾಚಾರವು ಶ್ರೀಗಳವರಿಗೆ ತಿಳಿಯಲಿಲ್ಲ ಶ್ರೀಕೂಡ್ಲೀ ಶೃಂಗೇರಿ ಸಂಸ್ಥಾನದ ಶಿಷ್ಯಪರಿಗ್ರಹ

ವಿಷಯವಾಗಿ ಶ್ರೀಮಹಾರಾಜರು ಶಿಷ್ಯಸ್ವಾಮಿಗಳು ಪೂರ್ವಾಶ್ರಮದ ಶಿಷ್ಯರು ನಾಗೇಶಶಾಸ್ತ್ರಿಗಳು ರಾಣಿಬೆನ್ನೂರು ಸುಬ್ಬಾಶಾಸ್ತ್ರಿಗಳು ಮುಂತಾದವರಲ್ಲಿ ವಿವಿಧಚರ್ಚೆಗಳು ನಡೆದು ಶ್ರೀಗಳವರು ದೇಶಸ್ಥರಿಗೆ ಕೊಟ್ಟ ಆಶ್ರಮವು ವ್ಯರ್ಥವಾಗುತ್ತವೇನೋ ಎಂದು ನಾಗೇಶಶಾಸ್ತ್ರಿಗಳು ವಿಶೇಷವಾಗಿ ಚಿಂತಿಸಿ ಅಂಬಳಿ ಸುಬ್ರಹ್ಮಣ್ಯಯ್ಯರ ಮುಂತಾದ ಸಹಾಯಾಧ್ಯಾಯಗಳೊಂದಿಗೆ ವಿಶೇಷಾಲೋಚನೆನನ್ನು ಮಾಡಿ ಶ್ರೀವಿದ್ಯಾಭಿನವ ವಾಲುಕೇಶ್ವರ ಭಾರತಿ ಸ್ವಾಮಿಗಳ, ತಮಗೆ ಆಶ್ರಮವಾದ ಒಂದು ತಿಂಗಳು ಆದ ಶ್ರಾವಣಮಾಸದಲ್ಲಿ ತಮ್ಮ ಗುರುಗಳಾದ ಶ್ರೀಗಳವರ ಎದುರಿಗೆ "ನಾನು ತಮ್ಮ ಸನ್ನಿಧಿಯಲ್ಲಿ ನಾನು ಆಶ್ರಮ ತೆಗೆದುಕೊಂಡು ನಾಗೇಶ ಶಾಸ್ತ್ರಿಗಳಿಗೆ ಆಶ್ರಮ ಕೊಡುತ್ತೇನೆಂದು ಹೇಳಿದ್ದೆನಷ್ಟೇ? ಈಗ ನಾಗೇಶ ಶಾಸ್ತ್ರಿಗಳಿಗೆ ಕೊಡಲು ನನಗೆ ಇಷ್ಟವಿಲ್ಲ. ನನ್ನ ತಮ್ಮನ ಮಗನಾದ ವೇದಾಧ್ಯಯನಮಾಡುತ್ತಿರುವ ಮಹಾದೇವನಿಗೆ ಮುಂದೆ ಕೊಡುತ್ತೇನೆ ತಮ್ಮ ಪೂರ್ಣಕೃಪಾದೃಷ್ಟಿ ಅವನ ಮೇಲೆ ಇರಬೇಕು' ಎಂದು ಹೇಳಿದ್ದಕ್ಕೆ ಶ್ರೀಗಳವರು ವಿಸ್ಮಯರಾಗಿದ್ದು, ಇಷ್ಟಪಟ್ಟರು. ಅನಂತರ ಒಂದು ವಾರದಲ್ಲಿ ನಾಗೇಶ ಶಾಸ್ತ್ರಿಗಳು ಉವಗಟ್ಟೆಗೆ ಬರಲು ಅವರನ್ನು ಶ್ರೀಗಳವರು ಕರೆಸಿಕೊಂಡು ತಮ್ಮ ಶಿಷ್ಯಸ್ವಾಮಿಗಳು ಹೇಳಿದ ವಿಷಯವನ್ನು ಅವರಿಗೆ ತಿಳಿಸದೇ ಮೊದಲು ನಾಗೇಶ ಶಾಸ್ತ್ರಿಗಳಿಂದ ವಚನ ತೆಗೆದುಕೊಂಡು ಅವರನ್ನು ಪ್ರಮಾಣ ಬದ್ಧರನ್ನು ಮಾಡಿ "ನೀವು ಈ ಸಂಸ್ಥಾನದ ಆಶ್ರಮಕ್ಕೆ ಆಸೆ ಪಡಬಾರದು. ನಿಮ್ಮ ಮಕ್ಕಳಿಗೂ ಸಹ ಆಸೆ ಪಡಗೊಡಿಸಬಾರದು. ನಮ್ಮ ಶಿಷ್ಯಸ್ವಾಮಿಗಳ ಹೃದಯಾಸೆಯು ಮಯುದೇವನಿಗೆ ಕೊಡುವಂತೆ ಅದೆ" ಎಂದು ಅಪ್ಪಣೆಕೊಡಿಸಿದ ನುಡಿಯನ್ನು ನಾಗೇಶ ಶಾಸ್ತ್ರಿಗಳು ಜ್ಞಾಪಕಕ್ಕೆ ತಂದುಕೊಂಡು ತದನುಗುಣವಾಗಿ ಶಿಷ್ಯ ಜನರಿಂದ ಮಹಾರಾಜರಿಗೆ ಒಂದು ಮಹಾಜರ ಮಾಡಿಸಿ, ಮಹದೇವ ಶಾಸ್ತ್ರಿಗೆ ಶ್ರೀಗಳವರಿಂದ ಅನಂತಪುರದಲ್ಲಿ ಉಪದೇಶವಾಗಿದೆ. ಮಹಾದೇವಶಾಸ್ತ್ರಿಗೆ ಆಶ್ರಮ ಕೊಡುವದಕ್ಕೆ ಶ್ರೀಗಳವರು ಅನುಮತಿ ಕೊಟ್ಟಿದ್ದಾರೆಂದು ಮಹಜರದಲ್ಲಿ ತೋರಿಸಿ ಶ್ರೀಮಹಾರಾಜರಿಗೆ ವಿಶೇಷವಾಗಿ ವಿಜ್ಞಾಪಿಸಲು ನಾಗೇಶ ಶಾಸ್ತ್ರಿಗಳವರ ಮಾತಿಗೆ ಶ್ರೀ ಮಹಾರಾಜರು ಬೆಲೆಕೊಟ್ಟು ಮಹಾದೇವ ಶಾಸ್ತ್ರಿಗೆ ಸಂನ್ಯಾಸಾಶ್ರಮವನ್ನು ಕೊಡಿಸಿ ಗುರುಗಳಿಂದಲೇ ಅಭಿದಾನವು ಕೊಡುವ ಪದ್ಧತಿಗೆ ವಿರುದ್ಧವಾಗಿ

ಲೌಕಿಕ ವ್ಯವಹಾರಕ್ಕೆ ಅನುಕೂಲವಾಗುವಂತೆ ಶ್ರೀ ಸಚ್ಚಿದಾನಂದ ಶಂಕರ ಭಾರತಿ ಎಂಬ ಅಭಿದಾನವನ್ನು ಮಾಡಿ ಸದರ ವರ್ತಮಾನವನ್ನು ಧಾತು ಸಂವತ್ಸರ ವೈಶಾಖ ಶುದ್ಧ ಪಂಚಮಿಗೆ ಹರಿದ್ವಾರಕ್ಕೆ ತಂತಿ ಮೂಲಕ ತಿಳಿಸಿದರು. ಶ್ರೀಗಳವರ ಹತ್ತಿರ ಇದ್ದ ಶ್ರೀ ನರಸಿಂಹ ಶಾಸ್ತ್ರಿಗಳು ಮೈಸೂರಿಗೆ ಹೋಗೋಣವೆಂದರು. ಹಾಗೂ ಬೆಳಗಾಂವ ಕಮೀಶನರರಿಗೆ ತಂತಿ ಕೊಡೋಣವೆಂದು ವಿಜ್ಞಾಪಿಸಿದ್ದಕ್ಕೆ "ಉಚ್ಛಿಷ್ಟ ಗ್ರಹಣಮಾಡುವದು ಶ್ವಾಸ ವಷ್ಟೇ, ಎಂದು ಉತ್ತರವನ್ನು ಕೊಟ್ಟು ವಿದ್ಯಾ ಶಂಕರನ ಪೂಜಾವಿಚ್ಛಿನ್ನ ವಾಗಿದ್ದಕ್ಕೆ ತುಂಬಾ ದುಃಖಪಟ್ಟರು. ಉಪಾಯವಿಲ್ಲನೆಂದು ತೀರ್ಮಾನಮಾಡಿ ಕೊಂಡು ಮುಂದೆ ಯಾತ್ರೆ ಬೆಳಿಸಿ ಬದರೀ, ಕೇದಾರ ಕ್ಷೇತ್ರಗಳನ್ನು ನೋಡಿ ಕೊಂಡು ಕ್ಷೇತ್ರರಾಜವಾದ ವಾರಾಣಸಿಗೆ ಬಂದು ಅಲ್ಲಿ ಚಾತುರ್ಮಾಸ್ಯ ನವ ರಾತ್ರಿಯನ್ನು ತೀರಿಸಿಕೊಂಡು ಆಶ್ವೀನ ಬಹುಳದಲ್ಲಿ ಪ್ರಯಾಗ ಕ್ಷೇತ್ರಕ್ಕೆ ಹೋಗಿ ಅಲ್ಲಿ ಶ್ರೀ ವಿಷ್ಣುಪಾದದ ಪೂಜಾದಿಗಳನ್ನು ಮಾಡಿಕೊಂಡು ಅಲ್ಲಿಂದ ತಿರುಪತಿ, ಸದ್ಯೋಮುಕ್ತಿಕರ ಕ್ಷೇತ್ರ, ( ಕಾಳಹಸ್ತಿ ); ವ್ಯಾಘ್ರಪುರ, (ಚಿದಂಬರ); ಅರುಣಾಚಾಲ, ವೃದ್ಧಾಚಲ, ಕುಂಭಕೋಣ, ಶ್ರೀರಂಗ, ಜಂಬು ಕೇಶ್ವರ, ನವಪಾಷಾಣ, ದರ್ಭಶಯನ, ರಾಮೇಶ್ವರಾದಿ ಕ್ಷೇತ್ರಗಳನ್ನು ಸೇವಿಸಿ ಸಂಕ್ರಮಣಕ್ಕೆ ಕನ್ಯಾಕುಮಾರಿ ಕ್ಷೇತ್ರವನ್ನು ನೋಡಿ; ಶ್ರೀ ಕನ್ಯಾ ಕುಮಾರಿಯ ಪೂಜೆಯನ್ನು ಮಾಡಿ, ಅಲ್ಲಿಂದ ಶ್ರೀ ಶಂಕರ ಭಗವತ್ಪೂಜ್ಯ ಪಾದ್ಯ ಜನ್ಮಸ್ಥಳವು, ಮತ್ತು ಶ್ರೀ ಮಜ್ಜಗದ್ಗುರು ಶ್ರೀ ಸಚ್ಚಿದಾನಂದ ಶಿವಾಭಿ ನವ ಭಾರತಿ ಸ್ವಾಮಿಗಳಿಂದ ಸ್ಥಾಪಿಸಲ್ಪಟ್ಟ ಸರ್ವಕಳಾ ಪರಿಪೂರ್ಣಳಾದ ಶ್ರೀ ಶಾರದಾ ದೇವತಾ ಆವಾಸವಾದ ಕಾಲಟಿಯನ್ನು ಸೇರಿ ಶ್ರೀ ಗುರು ಶ್ರೀ ಶಾರದಾದೇವತಾ ಸೇವೆಯನ್ನು ಮಾಡಿಕೊಂಡು ಉಡುಪಿ, ಧರ್ಮಸ್ಥಳ, ಸುಬ್ರಹ್ಮಣ್ಯ, ಕ್ಷೇತ್ರಗಳನ್ನು ಸೇವಿಸಿಕೊಂಡು ಶ್ರೀ ಕೂಡ್ಲೀಕ್ಷೇತ್ರಕ್ಕೆ ಪ್ರಶಿಷ್ಯ ಸ್ವಾಮಿಗೆ ಉಪದೇಶ ಮಾಡಲು ಶ್ರೀಗಳವರು ಬಂದರು. ಮೈಸೂರಿಗೆ ಈ ವರ್ತ ಮಾನವು ಪೂರ್ವವೇ ತಿಳಿಸಿದ್ದರೂ ಪ್ರಶಿಷ್ಯ ಸ್ವಾಮಿಗಳು ಕೂಡ್ಲೀಗೆ ಬರಲಿಲ್ಲ. ೮ ದಿವಸ ನಿರೀಕ್ಷಣೆ ಮಾಡಿ ಗೋಕರ್ಣಕ್ಕೆ ಹೋಗಿ ಅಲ್ಲಿಂದ ಕುಂದಗೋಳಕ್ಕೆ ಬಂದು ಅನಂತರ ಧಾತುಸಂವತ್ಸರ ಮಾಘಶುದ್ಧ ದಶಮಿಗೆ ಅನಂತಪುರಕ್ಕೆ ಸೇರಿದರು. ಮೈಸೂರಿನಲ್ಲಿ ಸ್ವಾಮಿಗಳು ಮಹಾರಾಜರ ಬಲದಿಂದ ತಮಗೆ

ಉಪದೇಶವೇ ಬೇಡವೆಂದು ಕಾಲಯಾಪನ ಮಾಡಿದ್ದಲ್ಲದೆ ಮುಂದೆ ಒಂದೂವರೆ ವರುಷದ ಪರ್ಯಂತವು ಶ್ರೀಗಳವರನ್ನೂ ನಾಗೇಶ ಶಾಸ್ತ್ರಿಗಳನ್ನೂ ನರಸಿಂಹ ಶಾಸ್ತ್ರಿಗಳನ್ನೂ ನಿಷ್ಠುರೋಕ್ತಿಗಳನ್ನಾಡುತ್ತ ಕಾಲಕ್ಷೇಪ ಮಾಡುತ್ತಿದ್ದರು. ಹೀಗೆ ಒಂದೂವರೆ ವರುಷವಾದನಂತರ ಶ್ರೀ ಚಂದ್ರಶೇಖರ ಭಾರತಿ ಸ್ವಾಮಿಗಳವರು ಚಾತುರ್ಮಾಸ್ಯಕ್ಕೆ ಬೆಂಗಳೂರಿಗೆ ಬಂದು ತಮ್ಮ ಸರ್ವಾಧಿಕಾರಿಗಳಾದ ಶ್ರೀ ಕಂಠ ಶಾಸ್ತ್ರಿಗಳನ್ನು ಶ್ರೀಗಳವರ ಸನ್ನಿಧಾನಕ್ಕೆ ಕಳುಹಿಸಿ ಮಹಾದೇವ ಶಾಸ್ತ್ರಿಗಳಾದ ಸ್ವಾಮಿಗೆ ತಾವಿದ್ದ ಇತರರು ಉಪದೇಶಮಾಡುವದು ಸೂಕ್ತವಲ್ಲ. ಕಾರಣ ತಾವೇ ಉಪದೇಶ ಮಾಡಬೇಕು. ಹೀಗಾದರೆ ಗುರುಪರಂಪರಾ ಅವಿಚ್ಛಿನ್ನವಾಗಿರುತ್ತದೆಂದು ಸಂದೇಶವನ್ನು ತಿಳಿಸಿದರು. ಇದರಂತೆ ಶ್ರೀ ನರಸಿಂಹ ಶಾಸ್ತ್ರಿಗಳನ್ನು ತಮ್ಮ ಹತ್ತರ ಕರೆಯಿಸಿಕೊಂಡು ಈ ಉಪದೇಶ ವಿಷಯವು ಹೀಗೇ ಜರುಗುವಂತೆ ಶ್ರೀಗಳವರಿಗೆ ವಿಜ್ಞಾಪಿಸಲು ಅಪ್ಪಣೆ ಕೊಟ್ಟರು. ಪ್ರಮಾದ ಸಂವತ್ಸರ ಕಾರ್ತಿಕಮಾಸದಲ್ಲಿ ಶ್ರೀ ಕೂಡ್ಲೀಕ್ಷೇತ್ರ ಮಠದ ಉಪದೇಶ ಮಂಟಪದಲ್ಲಿ ಪ್ರಣವ, ಸಾಂಖ್ಯ, ಮಹಾವಾಕ್ಯೋಪದೇಶವಾಯಿತು. ತದನಂತರ ಶ್ರೀಗಳವರು ಅನಂತಪುರಕ್ಕೆ ಹೋದರು. ಅನಂತಪುರದ ಶೀತೋಷ್ಣ ಪರಿಸ್ಥಿತಿ ಶ್ರೀಗಳವರ ದೇಹಕ್ಕೆ ಸರಿಹೋಗದ ಕಾರಣ, ಶ್ರೀ ನರಸಿಂಹ ಶಾಸ್ತ್ರಿಗಳು ಶ್ರೀಗಳವರನ್ನು ಬೆಂಗಳೂರಿಗೆ ಬರಮಾಡಿಕೊಂಡರು. ಬೆಂಗಳೂರಿನಲ್ಲಿ ಹತ್ತುವರುಷ ತಮ್ಮ ಗುರೂಪದೇಶ ಬ್ರಹ್ಮಚಿಂತನವನ್ನು ಮಾಡಿಕೊಳ್ಳುತ್ತ ಇದ್ದು ಕೇವಲ ಮುಮುಕ್ಷುಗಳಾದ ಜಿಜ್ಞಾಸುಗಳಿಗೆ ಮಾತ್ರ ಅಧಿಕಾರಾನುಗುಣವಾಗಿ ವೇದಾಂತ ವಾಕ್ಯಗಳನ್ನು ಬೋಧಿಸುತ್ತ ಕಾಲಕ್ಷೇಪ ಮಾಡಹತ್ತಿರುವರು. ಹೀಗೆ ಕಾಲಕಳೆದು ಶ್ರೀಗಳವರಿಗೆ ೬೦ನೇ ವರುಷ ಪ್ರಾಪ್ತವಾಯಿತು. ಹರಪನಹಳ್ಳಿ ಗ್ರಾಮದಲ್ಲಿ ಅಗ್ನಿಹೋತ್ರಿ ನಾರಾಯಣ ಭಟ್ಟರ ಮೂಲಕ ಜಗತ್ಕಲ್ಯಾಣಕ್ಕಾಗಿ ಷಷ್ಠಿಪೂರ್ತಿಶಾಂತಿ, ಶತಚಂಡೀ ಯಾಗವು, ನವಗ್ರಹ ಹೋಮವು, ಮುಂತಾದ ಜಪ ಹೋಮಾದಿಗಳು ಕೇವಲ ದೇವತಾ ಸಂತೃಪ್ತಿಕರವಾಗಿ ನಡೆಯುವದಲ್ಲದೆ ಬ್ರಾಹ್ಮಣ ಸುವಾಸಿನಿಯರಿಗೆ ಅನ್ನ ಸಂತರ್ಪಣೆ ೨೦ ಸಾವಿರದ ಪರ್ಯಂತ ನಡೆಯಿತು. ಋತ್ವಿಜರಿಗೆ ಸಂಭಾವನಾದಿಗಳು ನಡೆದವು. ಈ ವಿಷಯವು ಮದ್ರಾಸು, ಮೈಸೂರ, ಮುಂಬಯಿ ದೇಶಗಳಲ್ಲಿ ವ್ಯಾಪಿಸಹತ್ತಿತು. ಈಗಿನ ಕಾಲಕ್ಕೆ

ನಾಗೇಶ ಶಾಸ್ತ್ರಿಗಳ ಜ್ಯೇಷ್ಠ ಪುತ್ರನಾದ ಭಾಲಚಂದ್ರ ಶಾಸ್ತ್ರಿಯು ಶ್ರೀಗಳವರ ದರುಶನಕ್ಕೆ ಹರಪನಹಳ್ಳಿಗೆ ಬಂದು ಶ್ರೀಗಳವರ ದರುಶನಮಾಡಿಕೊಂಡು ಶಿವರಾತ್ರಿಯ ದಿವಸ ಶಿವಪಂಚಾಕ್ಷರಿ, ಮೇಧಾದಕ್ಷಿಣಾಮೂರ್ತಿ ಇತ್ಯಾದಿ ಮಹಾಮಂತ್ರೋಪದೇಶವನ್ನು ಹೊಂದಿದರು. ಷಷ್ಠಿ ಪೂರ್ತಿಯಾದ ಒಂದು ವರುಷಕ್ಕೆ ಶ್ರೀಗಳವರು ಗಂಗೋತ್ರಿ, ಯಮುನೋತ್ರಿ, ಬದರಿ, ಕೇದಾರ ಯಾತ್ರೆಗಳಿಗೆ ಹೋಗಿ ಪುನಃ ಕಾಶಿಯಲ್ಲಿ ಚಾತುರ್ಮಾಸ್ಯ ನವರಾತ್ರಿಯನ್ನು ತೀರಿಸಿಕೊಂಡು ಬೆಂಗಳೂರಿಗೆ ವಾಪಸು ಬರುವಕಾಲದಲ್ಲಿ ಧಾರವಾಡ ಶಿಷ್ಯಜನ ಪ್ರಾರ್ಥನಾನುಗುಣವಾಗಿ ಧಾರವಾಡದಲ್ಲಿ ಇಳಿದು ಐದಾರು ದಿವಸ ಧಾರವಾಡದಲ್ಲಿ ಇದ್ದು ಶಿಷ್ಯಮಹಾಜನಗಳಿಗೆ ಭಾಗೀರಥಿ ತೀರ್ಥವನ್ನೂ ಪ್ರಸಾದವನ್ನೂ ಕೊಟ್ಟು ಶಿಷ್ಯಜನರ ಪಾದಪೂಜಾದಿ ಸತ್ಕಾರವನ್ನು ಕೈದುಕೊಂಡು ಮಾರ್ಗಶೀರ್ಷ ಶುದ್ಧ ಪೌರ್ಣಿಮಾ ದತ್ತಾತ್ರಯ ಜಯಂತಿಯನ್ನು ಧಾರವಾಡದಲ್ಲಿ ನಡೆಯಿಸಿ ಅಲ್ಲಿಂದ ಉದಗಟ್ಟಿಗೆ ತಮ್ಮ ಗುರುಗಳವರ ಆರಾಧನ ಮಾರ್ಗಶಿರ ಬಹುಳ ಷಷ್ಠಿಯಲ್ಲಿ ಶ್ರೀಗುರು, ಪರಮಗುರು, ಕಂಬದಗುರುಗಳಿಗೆ, ಭಾಗೀರಥಿ ಗಂಗಾಭಿಷೇಕವನ್ನು ಮಾಡುವದಕ್ಕೂ ಮತ್ತು ಸಂಸ್ಥಾನಾಧಿಷ್ಠಾನ ದೇವತಾ ಶ್ರೀ ವಿದ್ಯಾಶಂಕರ ದೇವರಿಗೆ ಭಾಗೀರಥೀ ಗಂಗಾಭಿಷೇಕ ಮಾಡಲು ಶ್ರೀ ಸಚ್ಚಿದಾನಂದ ಶಂಕರ ಭಾರತಿ ಸ್ವಾಮಿಗಳನ್ನು ದೇವರು ಸಹಿತ ಉದಗಟ್ಟಿಗೆ ಬರಮಾಡಿಕೊಂಡು, ಆರಾಧನ ನಡಿಸಿ, ಅಲ್ಲಿಂದ ರಾಣೆಬೆನ್ನೂರ, ಹರಿಹರ ಶಿಷ್ಯಜನರ ಸತ್ಕಾರ ಪಡೆದು ಬೆಂಗಳೂರ ತಲ್ಪಿದರು.

ಇದುವರೆಗೂ ಮಠದಲ್ಲಿ ಆಶ್ರಮ ತಗೆದುಕೊಳ್ಳುವದಕ್ಕೆ ಹಿಂದೆ ಆಶ್ರಮ ತಗೆದುಕೊಂಡನಂತರವೂ ಮಠವನ್ನು ಬಿಟ್ಟನಂತರವೂ ಇದುವರೆಗೂ ಸರ್ವಸ್ಥಳಗಳಲ್ಲಿ ಸರ್ವಕಾಲಗಳಲ್ಲಿ ಸರ್ವವಿಷಯಗಳಲ್ಲಿ ಸರ್ವಜನರ ಮಧ್ಯದಲ್ಲಿ ಶ್ರೀಗಳವರಿಗೆ ತನ್ನ ಪಾದಾಮೃತವನ್ನು ಕೊಟ್ಟು ಸಂರಕ್ಷಣಮಾಡುತ್ತಿರುವ ಶ್ರೀಪರಾಂಬಾ ಪರಮಾನುಗ್ರಹಕ್ಕೆ ಸಂತೋಷ ಬಟ್ಟು ಮುಂದ ೧ ವರುಷದಲ್ಲಿಯೇ ಅಕ್ಕಿ; ಬೆಣ್ಣೆ, ಬಟ್ಟೆ, ಸಕ್ಕರಿ, ಸಿಗುವದು ಮಹಾದುರ್ಲಭವಾಗಿರುವ ಕಾಲವಲ್ಲಿಯೇ ಸಹಸ್ರಚಂಡಿಯಾಗ ರುದ್ರಸ್ವಾಹಾಕಾರವನ್ನು ಮಾಡಲು ಸಂಕಲ್ಪಿಸಿ ಹರಪನ ಹಳ್ಳಿಯಿಂದ ನಾರಾಯಣ ಭಟ್ಟರನ್ನು ಕರಿಸಿ ಸದರ ವಿಷಯವನ್ನು ಅವರಿಗೆ ಅಪ್ಪಣೆಕೊಡಲು ತಮ್ಮ ಅನುಗ್ರಹವಿದ್ದರೆ ಆಗತ್ತ

ಸಿದ್ಧನಿದ್ದೇನೆಂದು ಹೇಳಿದನು. ಅದೇ ಸಂವತ್ಸರ ಆಶ್ವೀನಮಾಸದಲ್ಲಿ ಭಾಲ ಚಂದ್ರ ಶಾಸ್ತ್ರಿಗೆ ಶರನ್ನವರಾತ್ರಿಯಲ್ಲಿ ಕ್ರಮವಾಗಿ ಶಾಕ್ತೇಯ ಮಂತ್ರ ದೀಕ್ಷಾ, ನ್ಯಾಸ, ಜಪ, ಪೂಜಾ, ಹೋಮ ಪಂಚಖಂಡಾತ್ಮಕವಾದ ವಿದ್ಯೆ-ಯನ್ನು ಉಪದೇಶವನ್ನುಮಾಡಿ ಕಲಿಯುಗದ ಹಾದಿಗೆ ಒಳಪಡಬಾರದೆಂದು ನಿಗ್ರಹಪೂರ್ವಕವಾಗಿ ಅಪ್ಪಣೆಕೊಟ್ಟರು.

ಮಾರ್ಗಶಿರ ಬಹುಳ ಷಷ್ಠಿವರೆಗೂ ಶ್ರೀನರಸಿಂಹ ಶಾಸ್ತ್ರಿಗಳು, ಹಾಸನ ಸೀತಾರಾಮಯ್ಯನವರು ಹರಪನಹಳ್ಳಿ ಅಗ್ನಿಹೋತ್ರಿ ನಾರಾಯಣ ಭಟ್ಟರು, ಮುಂತಾದವರ ಸಂಗಡ ಸಹಸ್ರಚಂಡಿಯಾಗ ಕಾರ್ಯಕ್ರಮವನ್ನು ವಿಚಾರವ ಮಾಡಿ, ನಿಶ್ಚಯಿಸಿ, ಅನೇಕೋಪಾಯಗಳಿಂದ ಹಾಸನ ಸೀತಾರಾಮಯ್ಯ ನವರ ಭಾವ, ಮೈದುನ ಸಹಾಯದಿಂದ ೧೧೦೦ ಸೀರೆಗಳು ೨೦೦ ಪಂಚೆಗಳು ಕೊಂಡುಕೊಂಡು ಹರಪನಹಳ್ಳಿಗೆ ತಲುಪಿಸಲು ಏರ್ಪಾಡುಮಾಡಿ ಬೆಂಗಳೂರ ನಿಂದ ಮಾರ್ಗಶೀರ್ಷ ಬಹುಳ ಏಕಾದಶಿಗೆ ಹೊರಟು ಹರಪನಹಳ್ಳಿಗೆ ಸೇರಿದರು.

ಕಾರ್ತಿಕಮಾಸದಲ್ಲಿ ನಾರಾಯಣಭಟ್ಟರು ಬೆಂಗಳೂರಿಗೆ ಬಂದ ಕಾಲ ದಲ್ಲಿ ಬಳ್ಳಾರಿಜಿಲ್ಲಾಧಿಕಾರಿಗಳು ಬ್ರಾಹ್ಮಣರಿರುವವರಿಂದ ಸವರಯಾಗವು ಹರಪನಹಳ್ಳಿಯಲ್ಲಿ ಮಾಡಲು ಬಳ್ಳಾರಿಜಿಲ್ಲಾಧಿಕಾರಿಗಳು ಅನುಮತಿ ಕೊಟ್ಟಿ ದ್ದಕ್ಕೆ ಅನುಗುಣವಾಗಿ ನಾರಾಯಣಭಟ್ಟರು ಒಪ್ಪಿದ್ದರು. ಮಾರ್ಗಶಿರ ಮಾಸದಲ್ಲಿ ಆ ಬ್ರಾಹ್ಮಣಾಧಿಕಾರಿಗಳಿಗೆ ವರ್ಗವಾಗಿ ಆ ಸ್ಥಳವಲ್ಲಿ ವಿಲಾತಿಯ ವಿದೇಶಾಧಿಕಾರಿ ಬಂದಿದ್ದವರು ಇಂಥ ಕೆಲಸಗಳಿಗೆ ಸಂಪೂರ್ಣ ವಿರುದ್ಧವಿದ್ದರು. ಪುಷ್ಯಮಾಸ ಕಳೆಯಿತು. ಮಾಘಮಾಸ ಬಂತು. ಸರ್ಕಾರ ಪರವಾನಗಿ ದೊರೆಯದಂತೆ ಆಯಿತು. ನಾರಾಯಣಭಟ್ಟರು ತುಂಬಾ ವಿಷಾದ ಸಮುದ್ರ ದಲ್ಲಿ ಮುಳುಗಿ ಗುರುಗಳಿಗೆ ಕೊಟ್ಟ ಧರ್ಮಕಾರ್ಯ ವಚನವು ಹೋಗುವ ಕಾಲ ಬಂತೆಂದು ದುಃಖಪಟ್ಟು ಏನುಮಾಡಬೇಕೆಂದು ಶ್ರೀಗಳವರನ್ನು ವಿಜ್ಞಾಪಿಸಿಕೊಂಡರು. ಶ್ರೀಗಳವರು ನಾರಾಯಣಭಟ್ಟರು ಆಲೋಚಿಸಿ ಮದ್ರಾಸ ಆಹಾರ ಶಾಖಾಮಂತ್ರಿಯ ಹತ್ತರ ಹೋಗುತ್ತೇನೆಂದು ತಾವು ಆಶೀ ರ್ವಾದ ಮಾಡಬೇಕೆಂದು ಶ್ರೀಗಳವರಲ್ಲಿ ವಿಜ್ಞಾಪಿಸಲು ಶ್ರೀಗಳವರು ತಥಾಸ್ತು ಎಂದು ಆಶೀರ್ವದಿಸಿದರು. ನಾರಾಯಣಭಟ್ಟನು ಮದ್ರಾಸಿಗೆ ಹೋದನು. ನೆಟ್ಟೂರ ನರಸರಾಮ ಶಾಸ್ತ್ರಿಗಳಿಂದ ಸಪ್ತಶತಿ ಪಾರಾಯಣವನ್ನು ಸಂಪುಟ

ಕರ್ಣಸಹಿತವಾಗಿ ಅರ್ಧಮಂಡಲ ಮಾಡಿಸಲು ಆ ವಿಲಾಯತೀ ವಿದೇಶೀ ಅಧಿಕಾರಿಗೆ ಸೇವಾ ನಿವೃತ್ತರಾಗಬೇಕೆಂತಲೂ ಆ ಸ್ಥಳದಲ್ಲಿ ನಾರಾಯಣ ಭಟ್ಟನ ಸ್ನೇಹಿತನೊಬ್ಬನು ಬರಬೇಕೇಂತಲೂ ಉತ್ತರವಾಗಿದ್ದ ಮೇಲೆ ಸರ್ಕಾರದಿಂದ ಪರವಾನಿಗೆ ದೊರೆತಿತು. ದೇವೀಧ್ವಜವು ಸ್ಥಾಪನ ಮಾಡಿದ್ದಾಯಿತು. ಆಮಂತ್ರಣ ಪತ್ರಿಕೆಗಳು ಮುದ್ರಿತವಾದವು ಮುಂಬಯಿ, ಮದ್ರಾಸ, ಮೈಸೂರ, ನೈಜಾಮು ಮುಂತಾದ ದೇಶಗಳಿಗೆ ಋತ್ವಿಜರಿಗೋಸ್ಕರ ಆಮಂತ್ರಣಪತ್ರಿಕೆಗಳು ಕಳುಹಿಸಲ್ಪಟ್ಟವು, ಋತ್ವಿಜರನ್ನು ಸೇರಿಸುವದಕ್ಕೆ ಸರ್ವವಿಧಗಳಿಂದ ಕಷ್ಟಪಟ್ಟು ಸಹಾಯ ಮಾಡಿದವರು ಭಾಲಚಂದ್ರಶಾಸ್ತ್ರಿಗಳು, ಪದಾರ್ಥಗಳನ್ನು ಸಂಗ್ರಹಿಸಿದವರು ನಾರಾಯಣಭಟ್ಟರು. ಮಂಟಪ, ಹಂದರ ಮುಂತಾದ ಕೆಲಸ ಮಾಡಿದವರು ಗೋಸಾವಿ ಕೃಷ್ಣಪ್ಪನವರು, ಜೋಶಿ ನೀಲಕಂಠಭಟ್ಟರು ಅಡಿಗೆ ಮುಂತಾದವುಗಳನ್ನು ನೋಡಿದವರು; ಶೇಷಗಿರಿಸೋಮಯಾಜಿ, ಚಿಕ್ಕೇರಿ ಅಣ್ಣಂಭಟ್ಟರು ಸದರುಯಾಗಕ್ಕೆ ಶ್ರೀಸಚ್ಚಿದಾನಂದ ಶಂಕರಭಾರತಿ ಸ್ವಾಮಿಗಳು ದೇವರು ಸಹಿತ ಹರಪನಹಳ್ಳಿಗೆ ಬಂದು ಶ್ರೀಗಳವರಿಗೆ ಒಂದು ಸಾವಿರ ರೂಪಾಯಿ ಪಾದಪೂಜೆಯನ್ನು ಮಾಡಿದರು. ಅಂಬಾರಿಯಲ್ಲಿ ದೊಡ್ಡವರಿಗೂ ಬೆಳ್ಳಿ ಪಾಲಕಿಯಲ್ಲಿಚಿಕ್ಕವರಿಗೂ ಉಭಯ ಸ್ವಾಮಿಗಳಿಗೂ ಗ್ರಾಮದಲ್ಲಿ ಉತ್ಸವವು ನಡೆಯಿತು. ದೊಡ್ಡ ಜಾತ್ರೆಗೆ ಬಂದಂತೆ ಜನರು ಸೇರಿದರು. ೩೦–೪೦ ಸಾವಿರ ಬ್ರಾಹ್ಮಣ ಜನರ ಸಂತರ್ಪಣವಾಯಿತು. ಋತ್ವಿಜರ ಸಂಭಾವನೆ, ಪಂಡಿತ ಸಂಭಾವನೆ, ಬಡಬಗ್ಗರಿಗೆ ದಾನಧರ್ಮಗಳು ಒಂದುಸಾವಿರ ಸುವಾಸಿನಿಯರಿಗೆ ಸೀರೆಕುಪ್ಪಸಗಳು ಕೊಡಲ್ಪಟ್ಟವು. ಎಲ್ಲಿನೋಡಿದರೂ ಶ್ರೀಪರಾಶಕ್ತಿ ವಿವಿಧರೂಪಗಳಿಂದ ತಾಂಡವ ಮಾಡುತ್ತ ಇರಲು ಹರಪನಹಳ್ಳಿ ಚಿಂತಾಮಣಿ ದ್ವೀಪದಂತೆ ಶೋಭಿಸಹತ್ತಿತು. ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೋದರು.

ವಿಕೃತಸಂವತ್ಸರ ಚೈತ್ರಮಾಸದಲ್ಲಿ ಶ್ರೀಗಳವರು ಹರಪನಹಳ್ಳಿ ಬಿಟ್ಟು ಬೆಂಗಳೂರಿಗೆ ಸೇರಿದರು. ಜೇಷ್ಠ ಮಾಸದಲ್ಲಿ ಭಾಲಚಂದ್ರಶಾಸ್ತ್ರಿಗಳು ಬೆಂಗಳೂರಿಗೆ ಬಂದಕಾಲದಲ್ಲಿ ಶ್ರೀದೇವೀಯಾಗವು ಸಂತೃಪ್ತಿಕರವಾಗಿ ನಿಮ್ಮ ಸಹಾಯದಿಂದ ನಡೆಯಿತು. ಜನ್ಮಾರಭ್ಯ ಇಷ್ಟದೇವರಾದ ಶ್ರೀರಾಮಚಂದ್ರ ಸೇವೆಯುಒಂದು ನಡೆದರೆ ನಮ್ಮ ಜನ್ಮ ಕೃತಾರ್ಥವಾಗುತ್ತದೆ. ಶ್ರೀರಾಮ

ಸಾಮ್ರಾಜ್ಯ ಪಟ್ಟಾಭಿಷೇಕವು ನಡೆಸಬೇಕೆಂದು ನಮ್ಮ ಸಂಪೂರ್ಣ ಇಚ್ಛೆಇದೆ. ಎಂದು ಭಾಲಚಂದ್ರ ಶಾಸ್ತ್ರಿಗಳ ಮುಂದೆ ಹೇಳಲು, ' ಎರಡು ಅನುಷ್ಠಾನಗಳು ಹರಪನಹಳ್ಳಿಯಲ್ಲಿ ಆಗಿವೆ. ಇದು ಧಾರವಾಡಪುರದಲ್ಲಿ ನಡೆಸುವುದು ಶಿಷ್ಯ ಜನರಿಗೆ ಪ್ರೀತಿಕರವಾಗಿಯೂ, ತಮ್ಮ ಕೀರ್ತಿಗೆ ವಿಶೇಷವಾಗಿಯೂ ಇರುತ್ತದೆಂದು ವಿಜ್ಞಾಪಿಸಿ ಹೋದರು. ಪುನಃ ಶ್ರೀದೇವೀ ಸೇವಕ್ಕಾಗಿ ಶರನ್ನವರಾತ್ರಿಗೆ ಬೆಂಗಳೂರಿಗೆ ಬಂದ ಕಾಲದಲ್ಲಿ ಪುನಃ ಈ ವಿಷಯವು ಚರ್ಚೆ ನಡೆಯಿತು ತಾವು ಎಲ್ಲ ವಿಧಗಳಿಂದ ಧಾರವಾಡದಲ್ಲಿ ಮಾಡುವದಕ್ಕೆ ಅನುಗ್ರಹಿಸಬೇಕು. ಎಂದು ವಿಜ್ಞಾಪಿಸಿಕೊಂಡು ಶಾಸ್ತ್ರಿಗಳು ಧಾರವಾಡಕ್ಕೆ ಹೋದರು. ಆಶ್ವೀನ ಬಹುಳ ಹಾಗು ಕಾರ್ತೀಕಮಾಸದಲ್ಲಿ ನಾನಾವಿಧವಾಗಿ ಪತ್ರಿಕಾ ವ್ಯವಹಾರ ನಡೆದು ಆಹಾರ, ವಿಷಯದ ಪರವಾನಿಗೆ ನಿಮ್ಮ ಪುರಜನರು ಸಂಪಾದಿಸಿಕೊಟ್ಟರೆ ಧಾರವಾಡದಲ್ಲಿ ಮಾಡುತ್ತೇವೆಂದು ಶ್ರೀಗಳವರು ಅಪ್ಪಣೆಕೊಟ್ಟರು. ಶಾಸ್ತ್ರಿಗಳು ಸರ್ವ ಪ್ರಯತ್ನಗಳಿಂದ ಆಹಾರ ಪರವಾನಿಗಿ ಸಂಪಾದಿಸುತ್ತೇವೆ. ಎಲ್ಲ ವಿವಿಧ ವಿಷಯುಗಳನ್ನು ಅನುಕೂಲ ಪಡಿಸುತ್ತೇವೆ. ದ್ರವ್ಯವನ್ನು ಖರ್ಚಿಗೆ ತಾವು ಕೊಡಬೇಕೆಂದು ಶ್ರೀಗಳವರಿಗೆ ಭಾಲಚಂದ್ರ ಶಾಸ್ತ್ರಿಗಳು ವಿಜ್ಞಾಪಿಸಿಕೊಂಡರು.

ಧಾರವಾಡದಲ್ಲಿಯೇ ಅನುಷ್ಠಾನವು ನಡೆಸುವವನ್ನು ಕೇವಲ ಸ್ಥಾಪನ ಮಾಡುವದಕ್ಕೆ ಮಾರ್ಗಶಿರ ಶುದ್ಧ ದಶಮಿಯಲ್ಲಿ ಭಾಲಚಂದ್ರ ಶಾಸ್ತ್ರಿಗಳು ಬೆಂಗಳೂರಿಗೆ ಶ್ರೀಗಳವರ ದರುಶನಕ್ಕೆ ಬಂದರು. ಎಲ್ಲ ವಿಷಯುಗಳು ಚರ್ಚಿಸಲ್ಪಟ್ಟವು. ಇದುವರೆಗೂ ಶ್ರೀಗಳವರು ಅಪ್ಪಣೆಕೊಡಿಸಿದಂತೆ ಆಹಾರ ಪದಾರ್ಥಗಳ ಸಂಗ್ರಹಮಾಡುವ ಪರವಾನಿಗೆ ಮುಂತಾದವಿಷಯುಗಳು ತಾವು ಸಿದ್ಧಪಡಿಸುತ್ತೇವೆಂದು ಸಂಪೂರ್ಣವಾಗಿ ಒಪ್ಪಿಕೊಂಡರು. ಶಾಸ್ತ್ರಿಗಳು ಇರುವಕಾಲದಲ್ಲಿಯೇ ವಕೀಲ ದತ್ತಪ್ಪನವರು ಶ್ರೀಪಾದರಾವ ಇವರಿಬ್ಬರು ಬಂದರು. ಶಾಸ್ತ್ರಿಗಳು ಇವರಿಬ್ಬರು ಶ್ರೀಗಳವರ ಎದುರಿಗೆ ಮಾತಾಡುವ ಕಾಲದಲ್ಲಿ ಧಾರವಾಡಪಲ್ಲಿ ಒಂದು ಏರ್ಪಾಟುಸಹ ನಡೆಯಲಿಲ್ಲವೆಂತಲೂ ಇಪ್ಪತ್ತೈದು ಜನರಿಗಿಂತಲೂ ಹೆಚ್ಚು ಜನರಿಗೆ ಅನ್ನಹಾಕುವ ಪರವಾನಗಿ ಸಿಗುವದು ಅಸಾಧ್ಯವೆಂತಲೂ, ಪರವಾನಗಿ ಸಿಗುವ ಪರ್ಯಂತರವೂ ಆಹಾರ ಪದಾರ್ಥಗಳ ಸಂಗ್ರಹ ಮಾಡುವದಕ್ಕೆ ಬರುವದಿಲ್ಲವೆಂತಲೂ ಶಾಸ್ತ್ರಿಗಳವರ ಎದುರಿಗೆ

ದತ್ತಪ್ಪನವರು ಮಾತಾಡಲು ಶಾಸ್ತ್ರಿಗಳು ಸುಮ್ಮನೆ ಆದರು. ಆ ಕಾಲದಲ್ಲಿ ಶ್ರೀಗಳವರ ಮನಸ್ಸು ಶ್ರೀಗಳವರಿಗೆ ತುಂಬಾ ಸಂಕ್ಷೋಭವಾಯಿತು. ಮುಂದಿನ ಗತಿ ಏನೆಂದು ವಿವಿಧವಾಗಿ ಚಿಂತಿಸಿ ಒಂದೊಂದು ಧರ್ಮಕಾರ್ಯ ಈ ಕಲಿಯುಗ ದಲ್ಲಿ ಮಾಡುವದರಲ್ಲಿ ಶ್ರೀ ದೇವತಾ ಪರೀಕ್ಷೆ ವಿಶೇಷವಾಗುತ್ತದೆಂದು ಶ್ರೀಗುರು ಶಾಸ್ತ್ರ ವಚನವನ್ನು ನೆನಪಿಗೆ ತಂದುಕೊಂಡು ಶ್ರೀ ಅಮ್ಮನವರು ತನ್ನ ಔರಸ ಪುತ್ರನಾದ ಶ್ರೀಗಳನ್ನು ಎಷ್ಟು ಕಠಿಣ ಪರೀಕ್ಷೆ ಮಾಡುತ್ತಾಳೋ ಎಂದು ಸ್ವಲ್ಪ ಹೆದರಿ ಕಣ್ಣು ಮುಚ್ಚಿಕೊಂಡು ಶ್ರೀ ದೇವತಾ ಧ್ಯಾನವನ್ನು ಮಾಡಿ, ಈ ಮಹತ್ಕಾರ್ಯವು ಶಾಸ್ತ್ರಿಗಳೊಬ್ಬರಿಂದ ಆಗುವದಿಲ್ಲವೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಸದರ ಮಹತ್ಕಾರ್ಯ ನಿರ್ವಹಿಸುವದಕ್ಕಾಗಿ ಭಾಲಚಂದ್ರ ಶಾಸ್ತ್ರಿ ಗಳು, ದೇಶಪಾಂಡೆ ಗೋಪಾಳರಾಯ, ವಕೀಲ ನರಸಿಂಗರಾಯ ದಿಕ್ಷಿತ, ವಕೀಲ ದತ್ತಪ್ಪನವರು, ಪಾಠಶಾಲಾ ಅಧ್ಯಕ್ಷ ಕುಲಕರ್ಣಿ ನಾರಾಯಣರಾಯ ಈ ಐದು ಜನರನ್ನು ಪಂಚರನ್ನು ಮಾಡಿ ಒಂದು ಶ್ರೀಮುಖವನ್ನು ಬರೆಸಿ ನಾರಾಯಣ ಸ್ಮರಣವನ್ನು ಹಾಕಿ ಭಾಲಚಂದ್ರ ಶಾಸ್ತ್ರಿಗಳೊಂದಿಗೆ ಧಾರವಾಡಕ್ಕೆ ಕಳುಹಿಸಿದ್ದಾಗಿದೆ. ಅನಂತರ ದತ್ತಪ್ಪನವರು ಮೂರು ದಿವಸ ಬೆಂಗಳೂರಿ ನಲ್ಲಿ ಇದ್ದರು. ಆಕಾಲದಲ್ಲಿ ಪೂರ್ವೋತ್ತರ ವಿಷಯಗಳು ದತ್ತಪ್ಪನಿಗೆ ಶ್ರೀಗಳವರು ತಿಳಿಸಿದರು. ಪಂಚರಲ್ಲಿ ದತ್ತಪ್ಪನು ಒಬ್ಬನಾಗಿದ್ದರಿಂದ ೨೫ ಜನರಿಗಿಂತಲೂ ಹೆಚ್ಚು ಜನರಿಗೆ ಅಂದರೆ ಅಸಂಖ್ಯಾಕವಾಗಿ ಜನರಿಗೆ ಅನ್ನ ಹಾಕುವ ಪರವಾನಗಿ ಆಹಾರಪದಾರ್ಥ ಸಂಗ್ರಹಿಸುವ ಪರವಾನಗಿ ಸಿಗುವ ಪರ್ಯಂತವು ನಾವು ಬೆಂಗಳೂರನ್ನು ಬಿಡುವದಿಲ್ಲ. ಈ ವಿಷಯುವನ್ನು ನೀವು ತಾರು ಕೊಡಬೇಕು. ಪರವಾನಗಿ ಸಿಕ್ಕಿದ್ದ ವಿಷಯಕ್ಕೆ ನೀವು ಪಂಚರು ವಿಜ್ಞಾಪನಾ ಪತ್ರವನ್ನು ಬರೆದರೆ ನಾವು ವಿಕೃತಿ ಸಂವತ್ಸರ ಮಾರ್ಗಶೀರ್ಷ ಬಹುಳ ಸಪ್ತಮಿಯಲ್ಲಿ ಬೆಂಗಳೂರ ಬಿಟ್ಟು ಬರುತ್ತೇವೆಂದು ದತ್ತಪ್ಪನವರಿಗೆ ಅಪ್ಪಣೆಕೊಡಿಸಿದ್ದಾಯಿತು. ಶ್ರೀದೇವಿ ಪರೀಕ್ಷಾ ಎಷ್ಟು ಕಠಿಣವೋ ತಿಳಿ ಯಲು ಅಸಾಧ್ಯವೆಂದು ಊಹಿಸುವಂತೆ ಪರವಾನಿಗಿಯಾಗಲಿ, ಒಂದು ಏರ್ಪಾಡು ಸಹ ಆಗಲಿ ಇಲ್ಲದೆ ಎಲ್ಲ ಏರ್ಪಾಡು ಆಯಿತೆಂದು ತಾರು, ಪಂಚರ ವಿಜ್ಞಾಪನಾ ಧಾರವಾಡ ಪಂಚರಿಂದ ಶ್ರೀಗಳವರಿಗೆ ತಲ್ಪಿತು. ಶ್ರೀಗಳವರು ಬೆಂಗಳೂರಿಂದ ಹೊರಟು ದಶಮಿ ದಿವಸ ಸಾಯಂಕಾಲಕ್ಕೆ ಧಾರವಾಡ ತಲ್ಪಿ ದರು ಶ್ರೀಗಳವರನ್ನು ಮಂಗಳವಾದ್ಯಗಳಿಂದ ಗೌರವಪುರಸ್ಸರವಾಗಿ

ನರಸಿಂಹ ಶಾಸ್ತ್ರಿಗಳನ್ನು ಸಹಿತ ಪಾಠಶಾಲೆಗೆ ಕರೆದುಕೊಂಡುಹೋದರು. ಅಲ್ಲಿ ಅನುಷ್ಠಾನ ಪರವಾಗಿ ನರಸಿಂಹ ಶಾಸ್ತ್ರಿಗಳು ಸಂಭಾಷಣೆ ಮಾಡಿದರು. ಧಾರವಾಡದಲ್ಲಿ ಶ್ರೀಗಳವರ ವಾಸಕ್ಕೆ ನರಸಿಂಗರಾಯ ದೀಕ್ಷಿತರ ಮನೆ ಮಾಡಿ ದರು. ಮರುದಿವಸದಿಂದ ಜನಗಳು ಹೋಗುವದು, ಬರುವದು, ಸಂಖ್ಯಾ ತೀತವಾಗುತ್ತ ಬಂದಿತು. ಈ ಪಂಚರ ಮುಖದಿಂದ ಪರವಾನಿಗಿ ಸಿಗಲಿಲ್ಲ ವೆಂತಲೂ ಒಂದು ಏರ್ಪಾಟು ಆದರೂ ಮಾಡಲಿಲ್ಲವೆಂತಲೂ ತಾವು ಇಲ್ಲಿಗೆ ದಯಮಾಡಿ ತಮ್ಮ ತಪಃ ಶಕ್ತಿಯನ್ನು ಉಪಯೋಗಿಸಿದರೆ ಈ ಕಾರ್ಯ ವಾಗುತ್ತದೆಂತಲೂ ಪಾಠಶಾಲಾಹೀರಕಮಹೋತ್ಸವ, ನಡೆಸಲು ಸಾಧ್ಯ ವಿಲ್ಲದೆ ಇರುವದರಿಂದ ತಾವು ನಡೆಸುವ ಈ ಮಹೋತ್ಸವ ಮೂಲಕ ಪಾಠ ಶಾಲಾ ಹೀರಕ ಮಹೋತ್ಸವವು ನಡೆಯಬೇಕೆಂದಲೂ ತಾವು ಬಾರದೆ ಹೋದರೆ ಈ ಕೆಲಸ ಆಗಲಾರದೆಂದು ಸುಳ್ಳುತಂತಿ, ಸುಳ್ಳು ವಿಜ್ಞಾಪನಾ ಪತ್ರವು ಬರೆಸಿದ್ದಾಗಿದೆಯೆಂದು ವಿಜ್ಞಾಪಿಸಿಕೊಂಡರು. ಶ್ರೀಗಳವರು ಕೇವಲ ಕ್ಷುಣ್ಣಚಿತ್ತರಾಗಿ ಶ್ರೀಮಹಾದೇವಿಯ ಪರೀಕ್ಷವು ವಿಪರೀತವಾಯಿತೆಂದು ತೀರ್ಮಾನಮಾಡಿಕೊಂಡು ಶ್ರೀಗುರುದೇವತಾ ನಮಸ್ಕಾರವನ್ನು ಮಾಡಿ, ಶ್ರೀ ಪರಾಶಕ್ತಿ ತನ್ನ ಔರಸ ಪುತ್ರನ ಶ್ರೀಗಳ ಮೇಲೆ ಅನುಗ್ರಹವಿದೆಂದು ಜನರಿಗೆ ತೋರಿಸುವದಕ್ಕೆ ಮತ್ತು ಮಹತ್ವ ಬುದ್ಧಿಯುಳ್ಳ ಮನುಷ್ಯರ ಪ್ರಯತ್ನಕ್ಕಿಂತಲೂ ದೇವತಾ ಸಂಕಲ್ಪವು ದೊಡ್ಡದೆಂದು ತೋರಿಸುವ ದಕ್ಕೆ ಪಂಚರನ್ನು ಪ್ರೇರೇಪಿಸಿ ತಾರು, ವಿಜ್ಞಾಪನಾ ಪತ್ರ ಕಳಿಸುವಂತೆ ಮಾಡಿದಳೆಂದು ನಮಸ್ಕರಿಸಿ, ನರಸರಾಮ ಶಾಸ್ತ್ರಿಗಳಿಂದ ಸಂಪುಟೀಕರಣ ಸಹಿತ ಸಪ್ತಶತಿ ಪಾರಾಯಣವನ್ನು ಮಾಡಿಸುವದಕ್ಕೆ ಏರ್ಪಾಡು ಮಾಡಿ ನರಸಿಂಗರಾವ ದೀಕ್ಷಿತರ ಸಹಾಯ ಮೂಲಕ ದತ್ತಪ್ಪನವರನ್ನು ಮುಂಬಯಿಗೆ ಆಹಾರ ಪದಾರ್ಥಾಧಿಕಾರಿಗಳ ಕಡೆಗೆ ಶ್ರೀಗಳವರು ಕಳುಹಿಸಿದರು; ಈ ಕಾಲ ದಲ್ಲಿ ಭಾಲಚಂದ್ರ ಶಾಸ್ತ್ರಿಗಳು ತಾವು ಹೇಳಿದ್ದು, ಮಾಡಿದ್ದು, ಬರೆದದ್ದು, ಆಡಿದ್ದು ವಿಷಮ ಪರಿಣಾಮವನ್ನು ಹೊಂದಿತೆಂದು ನಿರ್ವೀರ್ಯರಾಗಿ ಬಹಳ ಚಿಂತಿಸಿದರು. ಗೋಪಾಳರಾಯರು ವ್ಯಾಧಿಗ್ರಸ್ತರಾಗಿದ್ದು ಆಯಾಕಾಲಗಳಲ್ಲಿ ದತ್ತಪ್ಪನವರಿಗೆ ಉಪಾಯಗಳನ್ನು ಹೇಳುತ್ತಿದ್ದರು. ನರಸಿಂಗರಾಯ ದೀಕ್ಷಿತರು ಜಿಲ್ಹಾಧಿಕಾರಿಗಳಿಗೂ, ಜಿಲ್ಹಾ ಆಹಾರ ಪದಾರ್ಥಾಧಿಕಾರಿಗೂ ಉಪಾಯಗಳನ್ನು ಕೇಳುತ್ತಿದ್ದರು. ಜಿಲ್ಹಾಧಿಕಾರಿಗಳು ಶ್ರೀಗಳವರ ದರುಶ

ನಕ್ಕೆ ಬಂದು ಐದನೂರು ಜನರ ಪರವಾನಿಗಿ ಕೊಡಲಾದೀತೆಂದು ವಿಜ್ಞಾಪಿಸಿ ಕೊಂಡುಹೋಗಿ ಶ್ರೀ ಪರದೇವತಾನುಗ್ರಹವು ಇನ್ನೂ ವಿಶೇಷವಾಗಿ ಶ್ರೀಗಳವರ ಮೇಲೆ ತೋರ್ಪಡಿಸಬೇಕೆಂಬುವ ವಿಲಾಸ ಉಳ್ಳವಳಾಗಿದ್ದಳೆಂದು ಧಾರವಾಡ ಪ್ರಾಂತ ಜನರಿಗೆ ತೋರ್ಪಡಿಸಲು ಜಿಲ್ಹಾಧಿಕಾರಿಗಳು ಪರವಾನಗಿ ಕೊಡದೆ ಸಿಫಾರಸನ್ನು ಮಾಡಿ ಮುಂಬಯಿಗೆ ಈ ಕಾರ್ಯದ ಅರ್ಜಿಯನ್ನು ಕಳುಹಿಸಿದರು. ಶ್ರೀಪರದೇವತಾ ಪರಮಾನುಗ್ರಹದಿಂದ ಐದುನೂರು ಬಿಟ್ಟು ಐದು ಸಾವಿರವಾಗಲಿ, ಐವತ್ತು ಸಾವಿರವಾಗಲಿ, ಅಸಂಖ್ಯಾಕವಾಗಿ ಜನರಿಗೆ ಅನ್ನಹಾಕಬಹುದೆಂದು ದತ್ತಪ್ಪನವರು ಪರವಾನಗಿ ತಗೆದುಕೊಂಡು ಬಂದರು. ತದನಂತರ ಕಾರ್ಯಕ್ರಮವು ಪ್ರಾರಂಭವಾಯಿತು. ಮುಹೂರ್ತ ದಿವಸ ಎಂಟು ದಿವಸಗಳು ಉಳಿದವು. ಆಮಂತ್ರಣ ಪತ್ರಿಕೆಗಳು ಮುದ್ರಿಸಲ್ಪಟ್ಟು ದೇಶದೇಶಗಳಿಗೆ ಕಳುಹಿಸಲ್ಪಟ್ಟವು. ಪದಾರ್ಥಗಳು ಸಂಗ್ರಹಿಸಲ್ಪಟ್ಟವು. ಅನುಷ್ಠಾನ ಮಂಟಪವು ಪಾಠಶಾಲಾ, ಭೋಜನಶಾಲಾ ಮುಂತಾದ ಸ್ಥಲಗಳು ರಮ್ಯವಾಗಿ ಜಡ್ಜಿ ತಿರಮಲರಾಯರ ಮನೆಯಲ್ಲಿ ನಿರ್ಮಿಸಲ್ಪಟ್ಟವು. ಉಪನ್ಯಾಸ ಶಾಲೆ ಏರ್ಪಾಡು ಆಯಿತು. ಸರ್ವಜನರಿಗೆ ತೋರ್ಪಡಿಸುವದಕ್ಕೆ ಶ್ರೀ ಮದ್ವೈತ ಬ್ರಹ್ಮವಿದ್ಯಾ ಪರಿಷತ್ತೆಂದು ಪತಾಕವನ್ನು ಏರಿಸಿದರು. ಪ್ರತಿ ದಿವಸವು ಅದ್ವೈತ ಬ್ರಹ್ಮವಿದ್ಯೋಪನ್ಯಾಸವು ವಿವಿಧ ವಿಷಯುಗಳನ್ನು ಕುರಿತು ಶ್ರೀಗಳವರು ಉಪನ್ಯಾಸಮಾಡಿದರು. ಭಾಷ್ಯಗಳಲ್ಲಿ ಸಾಮಾನ್ಯಗ್ರಂಥಗಳಲ್ಲಿ ಇರುವ ಗೂಢಾರ್ಥಗಳನ್ನು ದೇವತಾ ವರಪ್ರಸಾದದಿಂದಲೇ ಹೊರತು ಸ್ವಕಪೋಲಕಲ್ಪಿತ ಬುದ್ಧಿಯಿಂದ ತಿಳಿಯಲು ಅಸಾಧ್ಯವಾದ ಪರಮ ರಹಸ್ಯಗಳನ್ನು ಪೂರ್ವ ಪಕ್ಷ ಸಿದ್ಧಾಂತ ಪೂರ್ವಕವಾಗಿ ಅನೇಕ ದೃಷ್ಟಾಂತಗಳಿಂದ ಕರ್ನಾಟಕ ಭಾಷೆಯಲ್ಲಿ ಮುಖ್ಯವಾಗಿ ಅಲ್ಲಲ್ಲಿ ಸಂಸ್ಕೃತ ಭಾಷದಿಂದಲೂ ಆಂಗ್ಲೇಯ ಪರಿಚಯ ಉಳ್ಳವರಿಗೆ ಆಂಗ್ಲೇಯ ಭಾಷದಿಂದಲೂ ಹತ್ತು ದಿವಸಗಳು ಉಪವಾಸವಾಗಿದ್ದು ಎಲ್ಲ ಕಾರ್ಯಗಳನ್ನು ವಿಚಾರಿಸಿಕೊಳ್ಳುತ್ತ ಪ್ರೇಕ್ಷಕರ ಹೃದಯಾಪೇಕ್ಷೆಯನ್ನು ವಿಚಾರಿಸಿಕೊಂಡು ಅವರವರಿಗೆ ತಕ್ಕ ಉತ್ತರವನ್ನು ಕೊಡುತ್ತ ಸಾಯಂಕಾಲ ಉಪನ್ಯಸಿಸುತ್ತ ಇದ್ದರು. ರಾತ್ರಿ ಅನುಷ್ಠಾನ ಮಂಟಪದಲ್ಲಿ ದೀಪೋತ್ಸವವು, ಮಂತ್ರಪುಷ್ಪವು ವೇದಶಾಸ್ತ್ರ ಸೇವೆಯು ರಾಮನ ವಿಷಯವಾದ ಉಪನ್ಯಾಸವು ನಡೆಯುತ್ತಿತ್ತು. ೧೧೨ ರಾಮಾಯಣಗಳ ಪಾರಾಯಣವು, ಶತಚಂಡಿಯಾಗವು, ನವಗ್ರಹ ಹೋಮವು ರುದ್ರಸ್ವಾಹಾಕಾರವು,

ಸಂಹಿತಾ ಸ್ವಾಹಾಕಾರವು ನಡೆಯಿತು. ಧಾರವಾಡ ಪ್ರಾಂತದ ಅನೇಕ ಗ್ರಾಮ ಗಳಿಂದ ಅಸಂಖ್ಯಾತವಾಗಿ ಬ್ರಾಹ್ಮಣ ಸುವಾಸಿನಿ ಜನರು ಬಂದರು. ಅನೇಕ ಜನರು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಶ್ರೀಗಳವರ ಅನುಜ್ಞವನ್ನು ಪಡದು ಅನು ಷ್ಠಾನ ಮಂಟಪಕ್ಕೆ ಪ್ರದಕ್ಷಿಣೆಗಳನ್ನು ಮಾಡುತ್ತಿದ್ದರು. ಮಾಘಶುದ್ಧ ದಶ ಮಿಯಿಂದ ಪಾದಪೂಜಾದಿಗಳು ವಿರಾಮವಿಲ್ಲದಂತೆ ನಡಿಯುತ್ತಿದ್ದವು. ಈ ರೀತಿಯಾಗಿ ಹತ್ತು ದಿವಸಗಳು ಕಳೆದವು. ಕೊನೆಯದಿವಸ ಸೀತಾಕಲ್ಯಾಣ ಕ್ಕಾಗಿ ೧೧೦ ಸೀರೆಗಳು ಸುವಾಸಿನಿಯರಿಗೂ ೧೧೦ ಪಂಜಿಗಳು ಬ್ರಾಹ್ಮಣ ರಿಗೂ ಋತ್ವಿಜರಿಗೆ ಸಂಭಾವನೆಯೂ ಪಂಡಿತರಿಗೆ ಸಂಭಾವನೆ ಸಹಿತ ಬೆಳ್ಳಿ ಪಂಚಪಾತ್ರೆಯೂ ಬಡಬಗ್ಗರಿಗೆ ಅವರ ಯೋಗ್ಯತಾನುಸಾರ ದ್ರವ್ಯದಾನವೂ ಶ್ರೀಗಳವರು ಕೊಟ್ಟರು. ಮರುದಿವಸ ಅವಭೃತಸ್ನಾನಕ್ಕೆ ಅನುಷ್ಠಾನ ಮಂಟಪಸ್ಥಾನದಿಂದ ಸಂಸ್ಕೃತಪಾಠ ಶಾಲಾ ಪರ್ಯಂತವು ಮತ್ತು ಪಾಠಶಾಲೆ ಯಿಂದ ಆಸ್ಥಾನ ಮಂಟಪ ಪರ್ಯಂತವು ಪಾಲಕಿ ಉತ್ಸವವು ಲೌಕಿಕ ವೈದಿಕ ಬ್ರಾಹ್ಮಣರಿಂದಲೇ ಭರಿಸಲ್ಪಟ್ಟ ಪಾಲಕಿ ಉತ್ಸವವು. ಮಂಗಳವಾದ್ಯ ದಿಂದಲೂ ವೇದಘೋಷದಿಂದಲೂ ಅತ್ಯಂತ ರಮಣೀಯವಾಗಿ ಇಪ್ಪತ್ತು ಸಾವಿರ ಜನರಿಂದ ಕೂಡಿದ್ದಾಗಿ ಧಾರವಾಡಪುರ ಶೋಭಿಸಿದೆ. ಈ ಕಾಲ ದಲ್ಲಿ ಪಂಚರಿಗೆ ಪ್ರಾಪ್ತವಾದ ಆನಂದವು ಅವರ್ಣ್ಯವಿದೆ. ವಿಶೇಷವಾಗಿ ವಿಷಮ ಪರಿಣಾಮಉಳ್ಳ ಭಾಲಚಂದ್ರ ಶಾಸ್ತ್ರಿಗಳು ಆನಂದಭರಿತ ಸ್ವಾಂತ ರಾದರು. ಮಹೋತ್ಸವಕ್ಕೆ ಬಂದ ಪ್ರಾಂತದ ಜನರು ೪೦–೫೦ ವರುಷದಿಂದ ಧಾರವಾಡ ಪ್ರಾಂತಕ್ಕೆ ದಯಮಾಡದೆ ಈ ಉತ್ಸವ ಮೂಲಕ ಶ್ರೀಗಳವರು ಧಾರವಾಡಕ್ಕೆ ಬಂದು ಅತಿವಿಜೃಂಭಣೆವಾಗಿ ಮಹೋತ್ಸವವನ್ನು ಮಾಡಿದ್ದು ನೋಡಿ ಹರ್ಷಪಡುತ್ತ ಮಾತಾಡುತ್ತ ಹಾಡುತ್ತ ಇರುವ ಧಾರವಾಡ ಪರಿ ಸ್ಥಿತಿ ಶ್ರೀಅಮ್ಮನವರ ಪರಮಾನುಗ್ರಹ ಅಷ್ಟೇ; ಅನಂತರ ಎರಡು ದಿವಸ ಗಳಲ್ಲಿ ಎಲ್ಲ ಜನರು ತಮ್ಮ ತಮ್ಮ ಸ್ಥಳಗಳಿಗೆ ಹೋದರು.

ಶ್ರೀಗಳವರು ತಮ್ಮ ನಿವಾಸ ಸ್ಥಳಕ್ಕೆ ಬಂದು ಸೇರಿದರು. ಅನಂತರ ಪುರಜನರು ೮–೧೦ ದಿವಸ ಒಬ್ಬೊಬ್ಬರ ಮನೆಗೆ ಪಾದಪೂಜೆಗೆ ಭಿಕ್ಷೆಗೆ ಕರೆ ದುಕೊಂಡು ಹೋಗುತ್ತಿದ್ದರು. ಒಂದೊಂದು ದಿವಸ ೪–೫ ಪಾದಪೂಜೆ ಗಳಾಗುತ್ತಿದ್ದವು. ಪುರಜನರು ಶ್ರೀಪರದೇವತಾನುಗ್ರಹಪಡೆಯಲು ತಮ್ಮ ತಮ್ಮ ಶಕ್ತಿಗೆ ವಂಚನೆವಿಲ್ಲದಂತೆ ನೂರಾರು ರೂ. ಗಳನ್ನು ಪಾದಪೂಜೆಮಾಡಿ

ಶ್ರೀಗಳವರನ್ನು ಸಂತೋಷಪಡಿಸಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದರು. ಅಲ್ಲಿಗೆ ಶಿರಹಟ್ಟಿ ಪ್ರಮುಖ ಶಿಷ್ಯರು ಧಾರವಾಡಕ್ಕೆ ಶ್ರೀಗಳ ಹತ್ತಿರ ಬಂದು ಶಿರಹಟ್ಟಿಗೆ ಬರಲು ಪ್ರಾರ್ಥಿಸಿದರು. ಧಾರವಾಡದಿಂದ ಮಾಘ ಬಹುಳ ದಶಮಿ ಶಿರಹಟ್ಟಿಗೆ ಹೋಗಿ ಅಲ್ಲಿಂದ ಶ್ರೀಕೂಡ್ಲೀ-ಶೃಂಗೇರಿ ಸಂಸ್ಥಾನ ಇನಾಂ ಗ್ರಾಮವಾದ ಶ್ರೀವೇಂಕಟಾಪುರಕ್ಕೆ ಹೋಗಿ ಶ್ರೀವೇಂಕಟೇಶ್ವರ ಸ್ವಾಮಿಯ ಸೇವೆಯನ್ನು ಮಾಡಿಕೊಂಡು ಬ್ರಹ್ಮಾನಂದ ಮಹಾರಾಜರಿಂದ ನಿರ್ಮಿಸಲ್ಪಡಿಸಿದ ದೇವಸ್ಥಾನವನ್ನೂ ಇತರ ಸ್ಥಳಗಳನ್ನೂ ನೋಡಿ ಅಲ್ಲಿ ಪಾದಪೂಜೆಯನ್ನು ಕೈದುಕೊಂಡು ಶಿರಹಟ್ಟಿಗೆ ಬಂದು ಮರುದಿವಸ ಸೊರಟೂರಿನಲ್ಲಿ ಶಿಷ್ಯಜನರಿಂದ ಪಾದಪೂಜೆಗಳನ್ನು ಮಾಡಿಸಿಕೊಂಡು ಶಿರಹಟ್ಟಿಯಲ್ಲಿ ಪಾದಪೂಜಾಸತ್ಕಾರಾದಿಗಳನ್ನು ಪಡೆದು ಮಾರ್ಗದಲ್ಲಿ ಲಕ್ಷ್ಮೇಶ್ವರದಲ್ಲಿ ಪಾದಪೂಜೆಯನ್ನು ಪಡೆದು ಕುಂದಗೋಳಕ್ಕೆ ಬಂದು ಅಲ್ಲಿ ಶಿಷ್ಯರಿಂದ ಪಾದಪೂಜೆ ಪಡೆದು ಶಿವರಾತ್ರಿಯನ್ನು ಕುಂದಗೋಳದಲ್ಲಿ ಮಾಡಿಕೊಂಡು ಫಾಲ್ಗುಣ ಶುದ್ಧ ತೃತೀಯೆಗೆ ಶ್ರೀಗಳವರು ಬೆಂಗಳೂರು ತಲ್ಪಿದರು. ತದನಂತರ ಫಾಲ್ಗುಣ ಬಹುಳ ದಶಮಿಯ ದಿವಸ ಕೆಲವು ಶಿಷ್ಯಜನರ ಸಹಿತವಾಗಿ ಶ್ರೀಗಳವರು ಕಲಿದೈವವು ಪೂರ್ವಾಶ್ರಮದ ಕುಲದೈವವು ಆದ ಶ್ರೀವೇಂಕಟೇಶ್ವರ ಸೇವೆಗಾಗಿ ತಿರುಪತಿ ಕ್ಷೇತ್ರಕ್ಕೆ ಹೋಗಿ ಅಲ್ಲಿಂದ ಮೊದಲು ಕಾಳಹಸ್ತೀಶ್ವರನನ್ನು ದರ್ಶನಾದಿಗಳನ್ನು ಮಾಡಿಕೊಂಡು ಪುನಃ ತಿರುಪತಿಗೆ ಬಂದು ಗುಡ್ಡವನ್ನು ಹತ್ತಿ ೮-೧೦ ದಿವಸ ಗುಡ್ಡದಮೇಲೆ ಶ್ರೀಲಕ್ಷ್ಮೀ ವೇಂಕಟೇಶರ ಸೇವೆಯನ್ನು ಮಾಡುತ್ತ ಬ್ರಹ್ಮೋತ್ಸವ ಸೇವೆಯನ್ನು ಶ್ರೀದೇವರಿಗೆಮಾಡಿ ಶ್ರೀದೇವತಾನುಗ್ರಹವನ್ನು ಪಡೆದು ಬೆಂಗಳೂರಿಗೆ ತಿರುಗಿಬಂದರು.

ಶ್ರೀಗಳವರಿಗೆ ಈ ರೀತಿಯಾಗಿ ಅಮ್ಮನವರ ಪರೀಕ್ಷೆಯಾಗಿ ಅಮ್ಮನವರ ಅನುಗ್ರಹವೂ ಇದ್ದಿದ್ದು ಶ್ರೀಗಳವರಿಗೆ ಆಯುಷ್ಯವು ಇರುವ ಪರ್ಯಂತವೂ ಜಗತ್ಕಲ್ಯಾಣಕ್ಕಾಗಿ ಶ್ರೀ ವಿದ್ಯಾಶಂಕರ ಪ್ರೇರಣದಿಂದ ಧರ್ಮಕಾರ್ಯಗಳನ್ನು ಮಾಡುತ್ತ ಶಿಷ್ಯಜನರನ್ನು ಆಶೀರ್ವದಿಸುತ್ತ ಶ್ರೀ ವಿದ್ಯಾಶಂಕರ ದೇವರಿಗೆ ಅರ್ಪಿಸುತ್ತ ಪ್ರಾರ್ಥಿಸುತ್ತ ಶ್ರೀಗಳವರು ಶೋಭಿಸುತ್ತಾರೆಂದು ಸರ್ವರೂ ಆನಂದ ಪಡತಕ್ಕದ್ದಿದೆ.

**— ಶ್ರೀಸೀತಾ-ರಾಮ ಚಂದ್ರಾರ್ಪಣಮಸ್ತು —**

!! ಶ್ರೀ !!

# ಭಗವಾನ್ ಶ್ರೀರಾಮ

## ಶ್ರೀ ರಾಮನಾಮ ಮಹಿಮೆ

ಪೂರ್ವಕಾಲದಲ್ಲಿ ಒಬ್ಬ ಕಿರಾತನು ಘೋರಾರಣ್ಯದಲ್ಲಿ ವಾಸಿಸುತ್ತಿದ್ದನು. ಅವನು ತನ್ನ ತಂದೆ-ತಾಯಿ, ಹೆಂಡಿರು ಮಕ್ಕಳನ್ನು ಪೋಷಿಸುವದಕ್ಕಾಗಿ ಬೇರೆ ದಾರಿಗಾಣದೆ ದಾರಿಯಲ್ಲಿ ಹೋಗುವವರನ್ನು ಸುಲಿದುಕೊಂಡು ಅದರಿಂದ ತನ್ನ ಸಂಸಾರವನ್ನು ಸಾಗಿಸುತ್ತಿದ್ದನು.

ಹೀಗಿರಲು ಒಂದುದಿನ ಆ ದಾರಿಯಿಂದ ನಾರದಮುನಿಗಳು ಮಾರ್ಗ ಕ್ರಮಣ ಮಾಡುತ್ತಿದ್ದರು. ನಾರದರು ತ್ರಿಲೋಕ ಸಂಚಾರಿಗಳು. ಪರಬ್ರಹ್ಮಸ್ವರೂಪರು; ಸದಾ ಶ್ರೀಮನ್ ನಾರಾಯಣನ ಸ್ಮರಣೆಯಲ್ಲಿ ತಲ್ಲೀನರಾದವರು; ಭಗವದ್‌ಭಕ್ತರು; ಪತಿತರನ್ನು ಪಾವನರನ್ನಾಗಿ ಮಾಡುವಂಥವರು; ಕಿರಾತನು ನಾರದರನ್ನು ಕಂಡು ಅವರನ್ನು ಸುಲಿಯುವದಕ್ಕೆ ಅವರೆದುರು ಬಂದನು. ಆಗ ನಾರದರು ಆತನನ್ನು ಕುರಿತು— “ ಎಲೈ ಬೇಡನೇ, ನೀನು ಮಾಡುವ ಕೃತಿಯು ನಿನಗೆ ಸರಿ ಇರುವದೋ ? ಹೀಗೆ ಸುಲಿಗೆಯಿಂದ ನೀನು ಧನ ಸಂಪಾದನ ಮಾಡುವದು ಪಾಪವಲ್ಲವೇ ? ಅದರಿಂದ ದೇವರು ಎಂದಾದರೂ ಮೆಚ್ಚುವನೇ ? ” ಎಂದು ಕೇಳಿದರು.

ಕಿರಾತ:— ನನ್ನ ಸಂಸಾರ ಸಾಗಿಸುವದಕ್ಕೆ ನಾನು ಏನೊಂದು ಉಪಾಯವನ್ನರಿಯದೆ ಈ ಕಾರ್ಯವನ್ನು ಮಾಡುತ್ತಿರುವೆನು; ನನಗೆ ಪಾಪವು ಯಾವದು? ಪುಣ್ಯವು ಯಾವದು? ಎಂಬುದು ತಿಳಿಯದು.

ನಾರದಃ— 'ಪರಪೀಡೆಯೇ ಪಾಪ, ಪರೋಪಕಾರವೇ ಪುಣ್ಯ' ಯಾವ ಕಾರ್ಯದಿಂದ ಪರರಿಗೆ ತೊಂದರೆಯಾಗುವದೋ ಅದು ಪಾಪವು; ಆದರೆ ಯಾವುದರಿಂದ ಬಹು ಜನರ ಕಲ್ಯಾಣವಾಗುವದೋ ಅದೇ ಪುಣ್ಯಕಾರ್ಯವು; ನೀನು ಮಾಡಿದ ಕಾರ್ಯಗಳ ಫಲಗಳು ನಿನ್ನನ್ನು ಅನುಸರಿಸಿ ಬರುವವು. ಅದರ ಫಲಗಳನ್ನು ಅನುಭವಿಸುವವನು ನೀನೇ. ನಿನ್ನ ಹೆಂಡಿರು-ಮಕ್ಕಳು, ತಂದೆ-ತಾಯಿಗಳು, ಬಂಧು ಬಳಗದವರು ಯಾರೂ ನಿನ್ನ ಪಾಪವನ್ನು ಹಂಚಿಕೊಳ್ಳಲಾರರು. ಬೇಕಾದರೆ ನೀನು ಮನೆಗೆ ಹೋಗಿ ಈ ಮಾತಿನ ಸತ್ಯತೆಯನ್ನು ಮನಗಾಣು.

ಕಿರಾತ:— ಮುನಿಗಳೇ, ತಾವು ಹೇಳಿದ್ದು ನನಗೆ ತಿಳಿಯಿತು. ಆದರೆ ತಾವು ಈ ಮಾತುಗಳನ್ನು ನನ್ನ ಕೈಯೊಳಗಿಂದ ನೀವು ಜಾರಿ ಹೋಗುವದಕ್ಕಾಗಿ ಹೇಳುತ್ತೀರೆಂದು ಸಂಶಯ ನನಗೆ ಉತ್ಪನ್ನವಾಗಿದೆ. ನಾನು ಮನೆಗೆ ಹೋಗಿ ಕೇಳಿಕೊಂಡು ಬರುವವರೊಳಗಾಗಿ ನೀವು ಹೊರಟು ಹೋದರೆ ಹೇಗೆ?

ನಾರದಃ— ಅಯ್ಯಾ ಕಿರಾತನೇ, ನಾನೇನು ಹೊರಟು ಹೋಗುವದಿಲ್ಲ. ಬೇಕಾದರೆ ನನ್ನನ್ನು ಈ ಮರಕ್ಕೆ ಬಿಗಿದಿಡು; ಆದರೆ ನೀನು ಮನೆಗೆ ಹೋಗಿ ನಿನ್ನ ತಂದೆ-ತಾಯಿ ಹೆಂಡಿರು, ಮಕ್ಕಳು ನಿನ್ನ ಪಾಪದಲ್ಲಿ ಭಾಗಿಗಳಾಗುವರೋ ಎಂಬುದನ್ನು ವಿಚಾರಿಸಿಕೊಂಡು ಬಾ.

ಕಳ್ಳನು ನಾರದರ ಮಾತಿನಂತೆ ಅವರನ್ನು ಒಂದು ಮರಕ್ಕೆ ಬಿಗಿದು ತಾಯಿಯ ಹತ್ತಿರ ಹೋಗಿ "ಹೇ ಜನನೀ, ನಾನು ಹೇಗೆ ಹಣವನ್ನು ಸಂಪಾದಿಸುವೆನೆಂಬುದು ನಿನಗೆ ಗೊತ್ತಿದೆಯೇ?"

"ಗೊತ್ತಿಲ್ಲ"

“ ನಾನು ದಾರಿಕಾರರನ್ನು ಸುಲಿದು ಹಣವನ್ನು ಸಂಪಾದಿಸಿ ತರುವೆನು ”

“ ಮಗನೇ, ಇಂಥ ಪಾಪದ ಕೆಲಸ ಮಾಡಿ ಹಣ ಸಂಪಾದಿಸುವೆಯಾ ? ”

“ ತಾಯಿಯೇ, ನನ್ನ ಗಳಿಕೆಯನ್ನು ಹಂಚಿಕೊಳ್ಳುವಂತೆ ನನ್ನ ಪಾಪವನ್ನೂ ಹಂಚಿಕೊಳ್ಳುವಿಯಾ ? ”

“ ಮಗನೇ ದುಷ್ಕರ್ಮಗಳನ್ನು ಮಾಡಿ ಹಣ ಸಂಪಾದಿಸಲು ನಾವೇನೂ ನಿನಗೆ ಹೇಳಿರುವದಿಲ್ಲ. ಆದಕಾರಣ ನಿನ್ನ ಪಾಪದಲ್ಲಿ ನಾವು ಹೇಗೆ ಪಾಲುಗಾರರಾದೇವು ? ”

ನಂತರ ಬೇಡನು ತಂದೆಯ ಹತ್ತಿರ ಹೋಗಿ ತನ್ನ ಸಂಪಾದನ ರೀತಿ ಹೇಳಲು ತಂದೆಯು ಅಸಹ್ಯಗೊಂಡು ಬಿರುನುಡಿಗಳನ್ನಾಡಿದನು.

ಬೇಡನು ಹೆಂಡತಿಯ ಹತ್ತಿರ ಹೋಗಿ “ ಹೇ ಪತ್ನಿಯೇ, ನಿಮಗಾಗಿ ನಾನು ಎಂಥ ಕರ್ಮಗಳನ್ನಾದರೂ ಮಾಡಿ ಹಣ ಸಂಪಾದಿಸಿಕೊಂಡು ಬರುವೆನು; ಕಾರಣ ನೀನಾದರೂ ನನ್ನ ಪಾಪದಲ್ಲಿ ಪಾಲುಗಾರಳಾಗುವಿಯಾ ? ” ಎಂದು ಕೇಳಿದನು. ಆಗ ಅವಳು “ ಪತ್ನಿಯನ್ನು ಸಂರಕ್ಷಿಸುವದು ಪತಿಯ ಧರ್ಮ; ಕಾರಣ ನೀನು ನಿನ್ನ ಕರ್ತವ್ಯವನ್ನು ಮಾಡುತ್ತಿರುವಿ. ನಿನ್ನ ಪಾಪಗಳಿಗೆ ನೀನೇ ಹೊಣೆಗಾರನು ” ಎಂದು ಉತ್ತರವಿತ್ತಳು.

ಕಳ್ಳನಿಗೆ ಆಗ ತನ್ನ ಕರ್ಮಗಳ ಅರಿವಾಯಿತು. ತಾನು ಯಾರಿಗಾಗಿ ಕೊಲೆ-ಸುಲಿಗೆಗಳನ್ನು ಮಾಡಿದೆನೋ ಅವರು ಕೂಡ ತಾವು ಪಾಪದಲ್ಲಿ ಭಾಗಿಗಳಾಗುವದಿಲ್ಲವೆಂಬುದನ್ನು ಹೇಳಿದ್ದನ್ನು ಅರಿತು ಅವನಿಗೆ ಪಶ್ಚಾತ್ತಾಪವಾಯಿತು; ಓಡುತ್ತ ನಾರದರ ಬಳಿಗೆ ಹೋಗಿ ಅವರನ್ನು

ಬಿಚ್ಚಿ ಅವರ ಕಾಲಿಗೆರಗಿದನು. ಕಣ್ಣೀರಿನಿಂದ ಅವರ ಪಾದಕಮಲಗಳನ್ನು ತೊಳೆದನು. ಪಶ್ಚಾತ್ತಾಪದಿಂದ ಹೊರಳಾಡಿದನು. "ಉದ್ಧಾರದ ಮಾರ್ಗವನ್ನು ಹೇಳಬೇಕು" ಎಂದು ಬೇಡಿಕೊಂಡನು. ಆಗ ನಾರದರು ಆತನಿಗೆ "ಶ್ರೀರಾಮ ನಾಮ ಜಪಿಸಲು" ಹೇಳಿದರು.

ಕಿರಾತನು ಒಂದು ಮರದಡಿಯಲ್ಲಿ ಕುಳಿತು ಒಂದೇ ಸವನೆ ಶ್ರೀರಾಮ ನಾಮ ಜಪಿಸಹತ್ತಿದನು. ಹೀಗೆ ಎಷ್ಟೋ ದಿವಸಗಳವರೆಗೆ ಆತನು ಜಪಿಸುತ್ತ ಕುಳಿತನು. ಆತನ ಮನಸ್ಸು ಶ್ರೀರಾಮ ಧ್ಯಾನದಲ್ಲಿ ತಲ್ಲೀನವಾಯಿತು; ದೇಹವು ರಾಮನಾಮ ಸ್ಮರಣೆಯಿಂದ ಪವಿತ್ರವಾಯಿತು; ಶ್ರೀರಾಮನ ಆ ಜಪದಿಂದ ಪಾಪಿಯು ಪುನೀತನಾದನು. ಇಂಥ ಅದ್ಭುತ ಸಾಮರ್ಥ್ಯವು ಶ್ರೀರಾಮನಾಮದಲ್ಲಿರುತ್ತದೆ. ಸಂಸಾರ ಸಾಗರದಿಂದ ಮುಕ್ತರಾಗಲಿಕ್ಕೆ ಶ್ರೀರಾಮ ನಾಮ ಒಂದೇ ಒಂದು ಸಾಧನವೆಂಬುವದನ್ನು ಸಕಲರು ನೆನಪಿಡಬೇಕು.

ಕಿರಾತನ ಮೈಮೇಲೆ ವಲ್ಮೀಕವು (ಹುತ್ತವು) ಬೆಳೆಯಿತು. ಕಿರಾತನಿಗೆ ಅದರ ಅರಿವೇ ಇಲ್ಲ. ಹೀಗೇ ಎಷ್ಟೋ ವರ್ಷಗಳು ಗತಿಸಿದವು. ಅದೇ ಮಾರ್ಗದಿಂದ ಒಂದುದಿನ ನಾರದರು ಹೋಗುತ್ತಿದ್ದರು. ಅವರ ಕಿವಿಗೆ ಶ್ರೀರಾಮಧ್ಯಾನವು ಬಿದ್ದಿತು. ಅವರು ಸುತ್ತಲೂ ನೋಡಿದರು. ಯಾರೂ ಕಾಣಲಿಲ್ಲ. ಧ್ವನಿಯು ಮಾತ್ರ ಕೇಳಿಸುತ್ತಿತ್ತು. ನಾರದರು ಧ್ವನಿಯು ಬರುವಕಡೆಗೆ ಹೋಗಿ ಹುತ್ತನ್ನು ಒಡೆದರು. ಕಿರಾತನು ಅತ್ಯಂತ ತೇಜಸ್ವಿಯಾಗಿ ಪ್ರಕಾಶಮಾನನಾಗಿ ಹೊಳೆಯುತ್ತಿದ್ದನು. ಆತನ ಮುಖದಿಂದ ಹೊರಡುತ್ತಿದ್ದ ಶ್ರೀರಾಮನಾಮವು ಅಮೃತದಂತೆ ಸವಿಯಾಗಿತ್ತು. ಆತನು ನಾರದ ಮುನಿಗಳನ್ನು ಕಂಡು ಅವರಿಗೆ ಸಾಷ್ಟಾಂಗ ವಂದಿಸಿ "ನಾನು ಪತಿತನಾದ ಕಿರಾತನು" ಎಂದು ನುಡಿದನು. ಆಗ ನಾರದರು "ಈಗ

ನೀನು ಪತಿತನಲ್ಲ. ಮುನಿಶ್ರೇಷ್ಠನು. ನೀನು ವಲ್ಮೀಕ (ಹುತ್ತವನ್ನು) ಒಡೆದು ಬಂದದ್ದರಿಂದ ನೀನು ಮಹರ್ಷಿವಾಲ್ಮೀಕಿಯಾದಿ. ನಿನ್ನ ಪಾಪಗಳೆಲ್ಲ ಸುಟ್ಟು ಭಸ್ಮವಾದವು. ನಿನ್ನ ಹಳೆಯ ಅರಿವೆಗಳನ್ನು ತ್ಯಜಿಸುವಂತೆ ನೀನು ಹಳೆಯ ಜೀವವನ್ನು ತ್ಯಜಿಸಿ ನವೀನ ದೇಹವನ್ನು ಧಾರಣಮಾಡಿದಿ. ನೀನು ಜಗದ್ವಂದ್ಯನಾಗುವಿ. ನಿನ್ನ ಹೆಸರು ಆ ಚಂದ್ರಾರ್ಕವಾಗಿ ಉಳಿಯುವದು'' ಎಂದು ಹರಸಿದರು.

"ಮುನಿಗಳೇ, ನಾನು ನನ್ನ ಕಾಲವನ್ನು ಯಾವ ರೀತಿಯಿಂದ ಕಳೆಯಲಿ?'' ಎಂದು ವಾಲ್ಮೀಕಿಯು ಕೇಳಿದನು.

" ರಾಮನಾಮ ಜಪದಿಂದ ನಿನಗೆ ಅಪೂರ್ವಜ್ಞಾನವು ಪ್ರಾಪ್ತವಾಗಿರುತ್ತದೆ. ನೀನು ಶ್ರೀರಾಮ ಚರಿತ್ರೆಯನ್ನು ವರ್ಣನಮಾಡು. ಇಂದಿನಿಂದ ಒಂದು ಸಾವಿರ ವರ್ಷಗಳಮೇಲೆ ಶ್ರೀರಾಮನು ಅವತಾರ ತಾಳುವನು. ಭಗವಾನ್ ವಿಷ್ಣುವು ದಶರಥನ ಪುತ್ರನಾಗಿ ಜನಿಸುವನು. ಆತನು ನೀನು ನುಡಿದ ಭವಿಷ್ಯದಂತೆ ವರ್ತಿಸುವನು.'' ಎಂದು ಹೇಳಿ ನಾರದರು ಹೊರಟು ಹೋದರು. ಅವರ ಸೂಚನೆಯಂತೆ ವಾಲ್ಮೀಕಿ ಮುನಿಯು ಸಂಪೂರ್ಣ ರಾಮಾಯಣವನ್ನು ಅನೇಕ ಶ್ಲೋಕಗಳಲ್ಲಿ ರಚಿಸಿ ಮುಗಿಸಿದನು. ಅದೇ ಆದಿಕಾವ್ಯವೆನಿಸಿತು.

## ೨. ರಾಮಾವತಾರದ ಮೂಲ

ಭಗವಾನ್ ನಾರಾಯಣನ ಬಾಗಿಲಲ್ಲಿ ಜಯ-ವಿಜಯರೆಂಬ ಇಬ್ಬರು ದ್ವಾರಪಾಲಕರಿದ್ದರು. ಒಂದು ದಿನಸನಕ, ಸನಂದನ, ಸನಾತನ, ಸನತ್‌ಕುಮಾರ, ಎಂಬ ಮಹರ್ಷಿಗಳು ವೈಕುಂಠಲೋಕಕ್ಕೆ ಶ್ರೀಮನ್ ನಾರಾಯಣನ ದರ್ಶನಕ್ಕಾಗಿ ಬಂದರು. ಅವರು ಶ್ರೀಮನ್

ನಾರಾಯಣನ ದರ್ಶನಕ್ಕೆ ಹೊರಟಾಗ ಜಯ-ವಿಜಯರು ಅವರನ್ನು ತಡೆದರು. ಆಗ ಋಷಿಗಳಿಗೆ ಸಿಟ್ಟುಬಂತು. "ಎಲೈ ಜಯ-ವಿಜಯರೇ, ನೀವು ಭಗವಂತನ ಸೇವಕರಿದ್ದು ನಿಮ್ಮ ನಡತೆಯು ರಾಕ್ಷಸರಂತೆ ಇರುತ್ತದೆ. ಮತ್ತು ನೀವು ಬಹಳೇ ಮದೋನ್ಮತ್ತರಾಗಿರುವಿರಿ. ಆದಕಾರಣ ನೀವು ಈಗಲೇ ದೈತ್ಯರಾಗಿ ಜನಿಸಿರಿ." ಎಂದು ಋಷಿಗಳು ಅವರನ್ನು ಶಪಿಸಿದರು. ಆಗ ಅವರು ಗದಗದನೆ ನಡಗುತ್ತ ಋಷಿಗಳ ಚರಣಗಳಮೇಲೆ ಬಿದ್ದು ಹೊರಳಾಡತೊಡಗಿದರು. "ಮುನಿಶ್ರೇಷ್ಠರೇ, ನಮ್ಮನ್ನು ರಕ್ಷಿಸಬೇಕು. ನಮ್ಮಿಂದ ಅನಂತ ಅಪರಾಧವಾಗಿರುತ್ತದೆ. ನಮ್ಮನ್ನು ಕ್ಷಮಿಸಿರಿ." ಎಂದು ಪ್ರಾರ್ಥಿಸಿದರು. ಮತ್ತು "ನಮಗೆ ಶ್ರೀಮನ್ ನಾರಾಯಣನ ಕೈಯಿಂದಲೇ ಮೃತ್ಯುವು ಬರಬೇಕು" ಎಂದು ಬೇಡಿಕೊಂಡರು. ಆಗ ಅವರು "ತಥಾಸ್ತು" ಎಂದು ಉಶಾಪವಿತ್ತರು. ಇಲ್ಲಿ ನಡೆದಿರುವ ಸಂಗತಿಯೆಲ್ಲ ಶ್ರೀಮನ್ ನಾರಾಯಣನಿಗೆ ಅಂತರ್ಜ್ಞಾನದಿಂದ ತಿಳಿದಿತ್ತು. ಆಗ ಅವನು ಅಲ್ಲಿಗೆ ಬಂದು "ನನ್ನ ಸೇವಕರು ತಮ್ಮನ್ನು ಅಪಮಾನಗೊಳಿಸಿದ್ದಕ್ಕೆ ಕ್ಷಮಿಸಬೇಕು" ಎಂದು ಬೇಡಿಕೊಂಡನು. "ಅದು ತಮ್ಮ ಅಪಮಾನವಲ್ಲ; ನನ್ನದೇ ಅಪಮಾನವೆಂದು ಭಾವಿಸಿರುವೆನು" ಎಂದು ಹೇಳಿ ಅವರನ್ನು ಸಂತೈಸಿ ಅವರ ಚರಣಕ್ಕೆರಗಿದನು. "ದೇವಾ, ನೀನು ಧನ್ಯನು. ನಿನ್ನ ಮಹಿಮೆಯು ಅಗಾಧವಾದುದು" ಎಂದು ಅವರು ಹರಿನಾಮಸ್ಮರಣೆಮಾಡುತ್ತ ಹೊರಟುಹೋದರು. ಆ ಜಯ-ವಿಜಯರೇ ಮೂರು ಜನ್ಮಗಳಲ್ಲಿ ರಾಕ್ಷಸರಾಗಿ ಜನಿಸಿದರು. ಮೊದಲನೇ ಜನ್ಮದಲ್ಲಿ ಹಿರಣ್ಯಾಕ್ಷ್ಯ, ಹಿರಣ್ಯಕಶಿಪು, ಎರಡನೇ ಜನ್ಮದಲ್ಲಿ ರಾವಣ, ಕುಂಭಕರ್ಣ, ಮೂರನೇದರಲ್ಲಿ ಶಿಶುಪಾಲ, ವಕ್ರದಂತರಾಗಿ ಜನಿಸಿದರು. ಹೀಗೆ ಮೂರೂ ಜನ್ಮಗಳನ್ನು ನೀಗಿ ಮತ್ತೆ ಭಗವಂತನ ಬಾಗಿಲದಲ್ಲಿ ಸೇವಕರಾಗಿ ಉಳಿದರು.

ಬ್ರಹ್ಮದೇವನಿಂದ ಪುಲಸ್ತ್ಯ ಎಂಬ ಋಷಿಯು ಹುಟ್ಟಿದನು. ಅವನಿಗೆ ತೃಣಬಿಂದುವಿನ ಮಗಳಾದ ದೇವವರ್ಣಿಯನ್ನು ಕೊಟ್ಟು ಮದುವೆಮಾಡಿತ್ತು. ಅವಳಿಂದ ಪುಲಸ್ತ್ಯಗೆ ವಿಶ್ರವನೆಂಬ ಮಗ ಹುಟ್ಟಿದನು. ವಿಶ್ರವನಿಗೆ ಭಾರದ್ವಾಜ ಋಷಿಯ ಮಗಳನ್ನು ಕೊಟ್ಟು ಲಗ್ನಮಾಡಿತ್ತು. ಅವಳಿಗೆ ಕುಬೇರನೆಂಬ ಮಗ ಹುಟ್ಟಿದನು. ಅವನಿಗೆ ವೈಶವ್ರಣನೆಂದೂ ಕರೆಯುತ್ತಿದ್ದರು. ಅವನು ಬ್ರಹ್ಮದೇವನನ್ನು ಆರಾಧನೆಯಿಂದ ಪ್ರಸನ್ನಗೊಳಿಸಿದನು. ಆಗ ಬ್ರಹ್ಮದೇವನು ಅವನನ್ನು ಲಂಕೆಯ ಅರಸನನ್ನಾಗಿ ಮಾಡಿದನು. ಈ ಲಂಕೆಯು ಬ್ರಹ್ಮದೇವನಿಂದಲೇ ನಿರ್ಮಾಣವಾಗಿತ್ತು. ಮಧ್ಯಂತರದಲ್ಲಿ ದೈತ್ಯರು ಬಲಾತ್ಕಾರದಿಂದ ಈ ಲಂಕೆಯನ್ನು ಕಸಿದುಕೊಂಡಿದ್ದರು. ಆಗ ದೇವದಾನವರ ನಡುವೆ ಘನಘೋರವಾದ ಯುದ್ಧವಾಗಿ ಈ ಲಂಕಾಪಟ್ಟಣವನ್ನು ಕುಬೇರನಿಗೆ ಕೊಡಲಾಗಿತ್ತು. ಕೆಲಕಾಲದ ನಂತರ ಸುಮಾಳಿ ಎಂಬ ರಾಕ್ಷಸನು ಪಾತಾಳಲೋಕದಿಂದ ಬಂದು ಪೃಥ್ವಿಯಮೇಲೆ ಅಡ್ಡಾಡುತ್ತಿರುವಾಗ ಅವನ ಕಣ್ಣಿಗೆ ಈ ಲಂಕಾಪಟ್ಟಣವು ಬಿದ್ದಿತು. ಆಗ ಅವನು ಈ ಲಂಕೆಯನ್ನು ಯಾರು ಆಳುತ್ತಿರುವರೆಂಬುದನ್ನು ವಿಚಾರಿಸಿದನು. ಲಂಕೆಯ ಅರಸನಾದ ಕುಬೇರನು ಇವನ ದೃಷ್ಟಿಗೆ ಬಿದ್ದನು. ಅವನ ಸುಂದರವಾದ ರೂಪವನ್ನು ನೋಡಿ ಇವನ ತಂದೆಗೆ ತನ್ನ ಮಗಳನ್ನು ಕೊಟ್ಟು ಲಗ್ನಮಾಡಬೇಕೆಂಬ ಇಚ್ಛೆ ಸುಮಾಳಿಗೆ ಉಂಟಾಯಿತು. ಕೂಡಲೇ ಸುಮಾಳಿಯು ಪಾತಾಳಲೋಕಕ್ಕೆ ಹೋಗಿ ಕೇಕಶಿಯೆಂಬ ತನ್ನ ಮಗಳನ್ನು ಕರೆದುಕೊಂಡು ಬಂದು ಬಡಬ್ರಾಹ್ಮಣನ ವೇಷದಿಂದ ಪುಲಸ್ತ್ಯಯ ಬಳಿಗೆಹೋಗಿ " ನಾನು ಅತಿ ದರಿದ್ರನಿದ್ದಕಾರಣ ನನ್ನ ಮಗಳನ್ನು ತಾವು ಸ್ವೀಕರಿಸಬೇಕು " ಎಂದು ಹೇಳಿ ಅವಳನ್ನು ಕೊಟ್ಟು ಹೋದನು.

ಮುಂದೆ ಕೇಕಶಿಯ ಉದರದಿಂದ ರಾವಣ, ಕುಂಭಕರ್ಣ, ವಿಭೀಷಣ ಎಂಬ ಮೂವರು ಗಂಡು ಮಕ್ಕಳೂ ತ್ರಾಟಿಕೆ, ಶೂರ್ಪ ನಖಿಯರೆಂಬ ಇಬ್ಬರು ಹೆಣ್ಣು ಮಕ್ಕಳೂ ಹುಟ್ಟಿದರು. ಇವರಲ್ಲಿ ವಿಭೀಷಣನು ಮಾತ್ರ ದೇವ ಭಕ್ತನಾಗಿ ಜನಿಸಿದನು. ಮೂವರೂ ಶುಕ್ಲಪಕ್ಷದ ಚಂದ್ರಮನಂತೆ ಬೆಳೆದು ದೊಡ್ಡವರಾದರು. ಅವರು ಗೋಕರ್ಣಕ್ಷೇತ್ರಕ್ಕೆ ಹೋಗಿ ಅಲ್ಲಿ ರಾವಣನು ಈಶ್ವರ ನನ್ನೂ ಕುಂಭಕರ್ಣನು ಬ್ರಹ್ಮದೇವನನ್ನೂ, ವಿಭೀಷಣನು ಭಗ ವಾನ್ ವಿಷ್ಣುವನ್ನೂ ಆರಾಧಿಸುತ್ತಿದ್ದರು. ಮುಂದೆ ಅವರ ತಪಃ ಪ್ರಭಾವಕ್ಕೆ ಮೆಚ್ಚಿ ಬ್ರಹ್ಮದೇವನು ವರವ ಬೇಡಲು ಹೇಳಿದನು. ಆಗ ರಾವಣನು "ಜಗತ್ತಿನಲ್ಲಿಯ ಎಲ್ಲ ಸಂಪತ್ತಿಯೂ ನನಗೆ ಅನುಕೂಲವಾಗಿರಬೇಕು. ಮತ್ತು ದೇವತೆಗಳೂ ನನ್ನ ಆಜ್ಞೆಯಲ್ಲಿರ ಬೇಕು." ಎಂದು ಕೇಳಿಕೊಂಡನು. ನಂತರ ಕುಂಭಕರ್ಣನು ವರವ ಬೇಡಲು ಸಿದ್ಧನಾದನು. ಆಗ ಎಲ್ಲ ದೇವತೆಗಳು ಘಾಬರಿಗೊಂಡು ದೇವಿಸರಸ್ವತಿಯನ್ನು ಪ್ರಾರ್ಥಿಸಿದರು. ಆಗ ಅವಳು ಅವನ ನಾಲಿ ಗೆಯಮೇಲೆ ಕುಳಿತುಕೊಂಡಳು. ಅವನು ಅಖಂಡವಾದ ನಿದ್ರೆ ಯನ್ನು ಬೇಡಿಕೊಂಡನು. ಬ್ರಹ್ಮದೇವನು "ತಥಾಸ್ತು" ಎಂದನು ಕೂಡಲೇ ಅವನು ಮೇರು ಪರ್ವತದಂತೆ ಅಡ್ಡಬಿದ್ದು ನಿದ್ರಿಸ ತೊಡ ಗಿದನು. ಅದನ್ನು ಕಂಡು ಅವನ ತಂದೆಯಾದ ಪುಲಸ್ತಿಗೆ ಬಹಳೇ ಕೆಡಕೆನಿಸಿತು. ಕೂಡಲೇ ಅವನು ಬ್ರಹ್ಮದೇವನನ್ನು ಪ್ರಾರ್ಥಿಸಿ "ಇವನು ಆರು ತಿಂಗಳಿಗಾದರೂ ಒಮ್ಮೆ ಎದ್ದು ಎಲ್ಲ ಸುಖೋಪ ಭೋಗಗಳನ್ನು ಭೋಗಿಸಬೇಕು." ಎಂದು ಬೇಡಿಕೊಂಡನು. ಮುಂದೆ ವಿಭೀಷಣನು "ಭಗವಾನ ವಿಷ್ಣುವಿನ ದರ್ಶನವಾಗ ಬೇಕೆಂದು" ಬೇಡಿಕೊಂಡನು. ಕೂಡಲೇ ಬ್ರಹ್ಮದೇವನು "ಭಗ

ವಾನ ವಿಷ್ಣುವು ನಿನಗೆ ರಾಮಚಂದ್ರನ ರೂಪದಲ್ಲಿ ಬಂದು ದರ್ಶನ ಕೊಡುವನೆಂದು ” ಹೇಳಿ ಹೊರಟುಹೋದನು.

ಆಗ ರಾವಣನಿಗೆ ಯಾರ ಭಯವೂ ಇಲ್ಲದಂತಾಯಿತು ಕೂಡಲೇ ಅವನು ಲಂಕಾಪಟ್ಟಣದಮೇಲೆ ದಾಳಿಯನ್ನಬ್ಬಿಸಿದನು. ಆದರೆ ಕುಬೇರನು ಅವಗೇನೂ ಸೊಪ್ಪು ಹಾಕಲಿಲ್ಲ. ಕೂಡಲೆ ರಾವಣನು ತಂದೆಯ ಕಡೆಗೆ ಹೋಗಿ ಪತ್ರವನ್ನು ತಂದು ಕುಬೇರನಿಗೆ ಕೊಟ್ಟು ಲಂಕೆಯ ರಾಜ್ಯವನ್ನು ಪಡೆದನು. ಕೂಡಲೇ ಕುಬೇರನು ಅಲಕಾವತಿ ಎಂಬ ಹೊಸಪಟ್ಟಣವನ್ನು ನಿರ್ಮಾಣಮಾಡಿಕೊಂಡು ಅಲ್ಲಿ ವಾಸಿಸಹತ್ತಿದನು.

ಮುಂದೆ ಮಯಾಸುರನ ಮಗಳಾದ ಮಂಡೋದರಿಯನ್ನು ರಾವಣನಿಗೆ ಕೊಟ್ಟು ಮದುವೆಮಾಡಿತು. ಬಲಿಯ ಮಮ್ಮಗಳಾದ ದೀರ್ಘ ಜ್ವಾಲೆಯನ್ನು ಕುಂಭಕರ್ಣನಿಗೆ ಕೊಟ್ಟು ಲಗ್ನಮಾಡಿತು. ಗಂಧರ್ವ ಕನ್ನೆಯಾದ ಶರಮೆಯನ್ನು ಶರಮಣನಿಗೆ ಕೊಟ್ಟು ಮದುವೆಮಾಡಿತು.

ರಾವಣನ ಅಂಜಿಕೆಯಿಂದ ಎಲ್ಲ ರಾಜರೂ ಅವನಿಗೆ ಶರಣು ಹೋದರು. ಈರೀತಿಯಿಂದ ಅವನು ದಿನದಿನಕ್ಕೆ ಬಹಳೇ ಉನ್ಮತ್ತ ನಾಗತೊಡಗಿದನು. ಆಗ ಕುಬೇರನು “ ನೀನು ಋಷಿಕುಮಾರನಿದ್ದು ಈ ರೀತಿಯಿಂದ ಗೋ—ಬ್ರಾಹ್ಮಣರನ್ನು ಪೀಡಿಸುವದು ಯೋಗ್ಯವಲ್ಲ ಎಂದು” ಹೇಳಿ ಕಳುಹಿದನು. ಕೂಡಲೇ ಅವನಿಗೆ ಬಹಳೇ ಕೋಪ ಬಂದು ಕುಬೇರನ ಅಲಕಾವತಿ ಪಟ್ಟಣದ ಮೇಲೆ ದಾಳಿಮಾಡಿ ಅವನ ಎಲ್ಲ ಸಂಪತ್ತನ್ನೂ ಪುಷ್ಪಕ ವಿಮಾನವನ್ನೂ ಕಸಿದು ಕೊಂಡನು. ಕೂಡಲೇಕುಬೇರನು ಇಂದ್ರನಿಗೆ ಶರಣು ಹೋದನು.ಆಗ ಅವನು ಅವ ನನ್ನು ತನ್ನ ಕೋಶಾಧ್ಯಕ್ಷನನ್ನಾಗಿ ನೇಮಿಸಿದನು. ರಾವಣನು ಗೋ

ಬ್ರಾಹ್ಮಣರಿಗೂ ಯಜ್ಞಯಾಗಾದಿಕರ್ಮಗಳಿಗೂ ಬಹಳ ತೊಂದರೆ ಯನ್ನು ಕೊಡಹತ್ತಿದನು. ಒಂದು ದಿನ ರಾವಣನು ಪುಷ್ಪಕ ವಿಮಾನದಲ್ಲಿ ಕುಳಿತುಹೋಗುತ್ತಿರುವಾಗ ಒಬ್ಬ ಸುಂದರದೇವಾಂಗ ನೆಯನ್ನು ಕಂಡನು. ಅವಳ ಸ್ವರೂಪಕ್ಕೆ ಮೋಹಿಸಿ ಬಲಾತ್ಕಾರ ದಿಂದ ಅವಳನ್ನು ಅಪಹರಿಸ ಹೋದನು. ಅವಳು ಆಕ್ರೋಶಮಾಡ ತೊಡಗಿದಳು. ಆಗ ರಾವಣನು ಅವಳನ್ನು ಬಿಟ್ಟು ಬಿಟ್ಟನು. ಅವಳು ದುಃಖಿಸುತ್ತ ಬ್ರಹ್ಮದೇವನ ಹತ್ತಿರ ಹೋದಳು. ಬ್ರಹ್ಮದೇವನು— "ರಾವಣನೇ ನೀನು ಪರಸ್ತ್ರೀಯರಮೇಲೆ ಬಲಾತ್ಕಾರ ಮಾಡಿದ್ದಾದರೆ ನಿನ್ನ ಶರೀರವು ನೂರು ತುಂಡು ಆಗುವದು" ಎಂದು ಶಾಪವನ್ನು ಕೊಟ್ಟನು. ಅಂದಿನಿಂದ ರಾವಣನು ಪರಸ್ತ್ರೀಯರಮೇಲೆ ಬಲಾತ್ಕಾರ ಮಾಡುವದನ್ನು ಬಿಡಬೇಕಾಯಿತು.

ರಾವಣನ ಪೀಡೆಯಿಂದ ಭೂಮಿತಾಯಿಯು ಕಡುನೊಂದು ಕೊಂಡಳು. ಆಗ ಭೂಮಿತಾಯಿಯು ಆಕಳ ರೂಪದಿಂದ ಋಷಿ ಗಳನ್ನೊಳಗೊಂಡು ಬ್ರಹ್ಮದೇವನಿಗೆ ಶರಣು ಹೋದಳು. ರಾವಣ ನಿಂದಾಗುವ ತೊಂದರೆಯನ್ನೆಲ್ಲ ವಿಸ್ತಾರ ಪೂರ್ವಕವಾಗಿ ನಿವೇದಿಸಿ ದರು. ಆಗ ಬ್ರಹ್ಮದೇವನು ಅವರನ್ನೆಲ್ಲ ಸಂಗಡ ಕರೆದುಕೊಂಡು ಕ್ಷೀರಸಾಗರಕ್ಕೆ ಶೇಷಶಾಯಿ ನಾರಾಯಣನ ಹತ್ತಿರ ಹೋಗಿ ಆತನನ್ನು ಸ್ತುತಿಸತೊಡಗಿದರು. ಆಗ ನಾರಾಯಣನು ಪ್ರಸನ್ನನಾಗಿ "ಋಷಿ ಗಳೇ, ಹೆದರಬೇಡಿರಿ. ನಾನು ಅಯೋಧ್ಯಾನಗರದಲ್ಲಿ ದಶರಥ— ಕೌಸಲ್ಯೆಯರ ಉದರದಲ್ಲಿ ರಾಮಾವತಾರ ಮಾಡುವೆನು. ಶೇಷನು ಲಕ್ಷ್ಮಣನಾಗಿಯೂ, ಶಂಖ—ಚಕ್ರಗಳು—ಭರತ, ಶತ್ರುಘ್ನರಾಗಿ ಜನಿ ಸುವರು. ನನ್ನ ಈ ಕಮಲವು ಜನಕರಾಜನ ಕನ್ಯೆಯಾಗಿ ಜನಿಸಿ ನನ್ನನ್ನು ವರಿಸುವಳು. ದೇವತೆಗಳು ವಾನರ ರೂಪವನ್ನು ಧರಿಸುವವು ಶಂಕರನು ಹನುಮಂತನಾಗುವನು ಬ್ರಹ್ಮದೇವನು ಜಾಂಬುವಂತನೂ

ಸೂರ್ಯನು ಸುಗ್ರೀವನೂ, ಅಗ್ನಿಯು ನಲನೂ, ವಾಯುವು, ನೀಲನೂ ಆಗಿ ಅವತಾರ ತಾಳುವರು " ಎಂದು ಹೇಳಿದನು. ನಾರಾಯಣನ ಆಜ್ಞೆಯನ್ನು ಕೇಳಿ ಎಲ್ಲರೂ ಜಯಜಯಕಾರ ಮಾಡುತ್ತ ಹೋದರು.

## ೩. ದಶರಥ ಮಹಾರಾಜ

ಕ್ಷತ್ರಿಯರಲ್ಲಿ ಸೂರ್ಯ ವಂಶವೊಂದು ಚಂದ್ರ ವಂಶವೊಂದು ಪ್ರಖ್ಯಾತವಾದವು. ಭಗವಾನ್ ಶ್ರೀರಾಮನು ಸೂರ್ಯವಂಶದಲ್ಲಿ ಜನಿಸಿದನು. ಅದಕ್ಕೆ ಮನುವಂಶವೆಂದೂ ಇನ್ನೊಂದು ಹೆಸರು. ಬ್ರಹ್ಮನ ಮಾನಸ ಪುತ್ರನು ಮರೀಚಿಯು. ಆತನಿಗೆ ಕಶ್ಯಪನು ಮಗನಾದನು. ಕಶ್ಯಪನಿಂದ ಸೂರ್ಯದೇವನು ಉತ್ಪನ್ನನಾದನು. ಸೂರ್ಯನಿಂದ ಮನು, ಮನುವಿನಿಂದ ಕುಕ್ಷಿ, ಆತನಿಗೆ ವಿಕುಕ್ಷಿ, ವಿಕುಕ್ಷಿಗೆ ಇಕ್ಷ್ವಾಕು, ಆತನಿಗೆ ದಿಲೀಪ, ದಿಲೀಪನಿಗೆ ರಘುಮಹಾರಾಯ ರಘುವಿಗೆ ಅಜಮಹಾರಾಜನು.

ಅಜರಾಜನ ಮಗನಾದ ದಶರಥನು ಅಯೋಧ್ಯೆಯ ಅರಸನಾದನು. ಆತನಿಗೆ ಕೌಸಲ್ಯೆ, ಸುಮಿತ್ರೆ, ಕೈಕೇಯಿಯರೆಂಬ ಮೂವರು ಹೆಂಡಂದಿರಿದ್ದರು. ದಶರಥನುಮಹಾ ಶೂರನೂ, ರಣಪಂಡಿತನೂ, ನ್ಯಾಯವಂತನೂ ಇದ್ದನು. ಪ್ರಜರನ್ನು ಮಕ್ಕಳಂತೆ ಪಾಲಿಸುತ್ತಿದ್ದನು. ಈ ರೀತಿಯಿಂದ ಅವನು ರಾಜ್ಯವಾಳುತ್ತಿರುವಾಗ ಕೆಲವು ದಿವಸಗಳು ಕ್ರಮಿಸಿದವು. ಅವನ ವೃದ್ಧಾಪ್ಯಕಾಲವು ಸಮಿಪಿಸಿತು. ಆದರೂ ಅವನು ನನಗೆ ಮಕ್ಕಳಾಗಲಿಲ್ಲವೆಂದು ಚಿಂತಿಸುತ್ತಿದ್ದನು.

ಒಂದುದಿನ ದಶರಥರಾಜನು ನಿದ್ರಾವಸ್ಥೆಯಲ್ಲಿದ್ದಾಗ ಒಂದು ಕನಸು ಕಂಡನು. ಅದರಲ್ಲಿ ಇಬ್ಬರು ಗಂಡಸರೂ, ಒಬ್ಬಳು ಹೆಣ್ಣು

ಮಗಳೂ ಇವರು ಮೂವರನ್ನು ಏನೂ ಕಾರಣವಿಲ್ಲದೆ ತಾನು ಕೊಂದಂತೆ ಕಂಡನು. ಈ ಸ್ವಪ್ನದ ದೃಷ್ಟಾಂತವನ್ನು ದಶರಥನು ತನ್ನ ಗುರುವಾದ ವಶಿಷ್ಠರಮುಂದೆ ಹೇಳಿದನು. ಆಗ ಅವರು "ಅರಸನೇ, ಸ್ವಪ್ನವು ಕೆಟ್ಟ ಇರುವದೇನೋ ನಿಜ, ಆದರೆ ಕೊನೆಗೆ ಎಲ್ಲವೂ ನೆಟ್ಟಗಾಗುವದು" ಎಂದು ಹೇಳಿದರು. "ಮತ್ತು ಅಡವಿಗೆ ಹೋಗಿ ಮೂರು ಪಶುಗಳನ್ನು ಕೊಂದು ಬಂದನಂತರ ಶಾಂತಿಯನ್ನು ಮಾಡೋಣವೆಂದು" ಹೇಳಿದರು.

ಆಗ ದಶರಥನು ಗುರುವಾಜ್ಞೆಯಪ್ರಕಾರ ಬೇಟೆಗಾಗಿ ಅರಣ್ಯಕ್ಕೆ ಹೋದನು. ಆದರೆ ಇಡೀ ಹಗಲೆಲ್ಲಅಡ್ಡಾಡಿದರೂ ಒಂದೂ ಬೇಟೆಯು ಅವನ ಕಣ್ಣಿಗೆ ಬೀಳಲಿಲ್ಲ. ಆಗ ಅವನು ಬೇಸತ್ತನು. ಸೂರ್ಯಾಸ್ತವಾಗಿ ಕತ್ತಲಾಗತೊಡಗಿತು. ದಶರಥನು ಅಲ್ಲಿಯೇ ಇರುವ ಸರೋವರದ ದಂಡೆಯ ಮೇಲಿನ ಒಂದು ಗಿಡದಮೇಲೆ ಬಿಲ್ಲು ಬಾಣಗಳನ್ನು ಸಜ್ಜುಮಾಡಿ ಕುಳಿತುಕೊಂಡನು.

ಕರ್ಮಧರ್ಮ ಸಂಯೋಗದಿಂದ ಅದೇ ಮಾರ್ಗವಾಗಿ ಬ್ರಾಹ್ಮಣಪುತ್ರನಾದ ಶ್ರವಣನು ತನ್ನ ಕುರುಡರಾದ ಮುಪ್ಪಿನ ತಾಯಿ-ತಂದೆಗಳನ್ನು ಒಂದು ತಕ್ಕಡಿಯಲ್ಲಿ ಕುಳ್ಳಿರಿಸಿಕೊಂಡು ತೀರ್ಥಯಾತ್ರೆಗಾಗಿ ಹೊರಟು. ಅದೇ ಮಾರ್ಗವಾಗಿ ಆ ಸರೋವರದ ಬಳಿಗೆ ಬಂದನು. ಶ್ರವಣನ ತಂದೆ-ತಾಯಿಗಳು ಬಹಳೇ ಮುಪ್ಪಿನವರಿದ್ದ ಕಾರಣ ಅವರಿಗೆ ಬಿಸಿಲಿನ ತಾಪವು ಸಹನವಾಗುತ್ತಿರಲಿಲ್ಲ. ಅಂತೆಯೇ ಅವನು ಅವರನ್ನು ರಾತ್ರಿಯಲ್ಲಿ ಕರೆದುಕೊಂಡು ಹೋಗುತ್ತಿದ್ದನು. ದಾರಿಯಲ್ಲಿ ಅವರು "ಮಗನೇ, ನಮಗೆ ಬಹಳೇ ನೀರಡಿಕೆಯಾಗಿರುತ್ತದೆ. ಕಾರಣ ನಮಗೆ ನೀರನ್ನು ತಂದು ಕುಡಿಸು" ಎಂದು ಹೇಳಿದರು. ಆಗ ಆ ಪಿತೃಭಕ್ತನಾದ ಬ್ರಾಹ್ಮಣಕುಮಾರನು ಅಲ್ಲಿಯೇ ಒಂದು

ಮರದಡಿಯಲ್ಲಿ ಅವರನ್ನುಕುಳ್ಳಿರಿಸಿ ಕಮಂಡಲವನ್ನು ತೆಗೆದುಕೊಂಡು ಆ ಸರೋವರದ ಬಳಿಗೆ ಬಂದನು. ಮತ್ತು ನೀರನ್ನು ತುಂಬುತ್ತಿರುವಾಗ ದಶರಥನ ಬಾಣವು ಕೂಡಲೇ ಆತನ ಎದೆಯಲ್ಲಿ ನಟ್ಟಿತು. ಆಗ ಅವನ ಕೈಯಲ್ಲಿಯ ಕಮಂಡಲವು ಒತ್ತಟ್ಟಿಗೆ ಸಿಡಿದು ಬಿದ್ದು ಅವನು ಭೂಮಿಯಮೇಲೆ ಬಿದ್ದನು. ಮತ್ತು ದೀನಸ್ವರದಿಂದ "ಅಯ್ಯೋ ಯಾವ ಕ್ಷತ್ರಿಯನ ಬಾಣವು ಬಂದು ನನ್ನ ಪ್ರಾಣವನ್ನು ಶಾಂತಗೊಳಿಸಿತು?" ಎಂದನು ಆಗ ಆ ನಿರ್ಮಾನುಷ್ಯವಾದ ಅರಣ್ಯದಲ್ಲಿ ಮನುಷ್ಯನ ಶಬ್ದವನ್ನು ಕೇಳಿ ದಶರಥನು ಗಾಬರಿಗೊಂಡು ಕೆಳಗಿಳಿದು ಸರೋವರದ ಬಳಿಗೆ ಬಂದನು ಮತ್ತು ಬ್ರಾಹ್ಮಣ ಕುಮಾರನನ್ನು ಕಂಡು ಶೋಕಿಸತೊಡಗಿದನು. "ಅಹಹಾ! ನಾನೆಂಥ ಪಾಪಿಯು! ಬ್ರಹ್ಮಹತ್ಯೆಯನ್ನು ಮಾಡಿದೆನಲ್ಲ! ಮತ್ತು ದೇವದೇವಾ, ನನ್ನ ಕೈಯಿಂದ ಎಂಥ ದುಷ್ಕೃತಿಯನ್ನು ಮಾಡಿಸಿದೆಯಲ್ಲ!" ಎಂದು ದುಃಖಿಸತೊಡಗಿದನು. ಆಗ ಆ ಬ್ರಾಹ್ಮಣಕುಮಾರನು "ಅರಸನೇ, ನೀನು ದುಃಖಿಸುತ್ತಕುಳಿತುಕೊಳ್ಳಲಿಕ್ಕೆ ಈಗ ಸಮಯವಿಲ್ಲ. ಇಲ್ಲಿಯೇ ಸಮೀಪದಲ್ಲಿ ನನ್ನ ಅಂಧರಾದ ಮುಪ್ಪಿನ ತಾಯಿ-ತಂದೆಗಳು ನೀರಡಿಕೆಯಿಂದ ತಳಮಳಿಸುತ್ತಿರುವರು. ಕೂಡಲೇ ಈ ಕಮಂಡಲದಲ್ಲಿ ನೀರನ್ನು ತೆಗೆದುಕೊಂಡು ಹೋಗಿ ಕೊಡು. ಅವರು ನೀರನ್ನು ಕುಡಿದನಂತರ ಇಲ್ಲಿ ನಡೆದ ಎಲ್ಲ ಸುದ್ದಿಯನ್ನು ಹೇಳು. ಕೂಡಲೇ ಅರಸನು ನೀರನ್ನು ತೆಗೆದುಕೊಂಡು ಅವರ ಬಳಿಗೆ ಬಂದನು. ಆಗ ಅವರು ಅವನ ಬರುವ ಸಪ್ಪಳವನ್ನು ಕೇಳಿ "ಬಾ ಮಗನೇ, ಇಂದು ನೀನು ಏಕೆ ಮಾತಾಡಲೊಲ್ಲಿ? ನಾವು ನಿನಗೆ ರಾತ್ರಿಯಲ್ಲಿ ನೀರು ಬೇಡಿದೆವೆಂದು ಸಿಟ್ಟಾದೆಯಾ" ಎಂದು ಗದ್ಗದಿತ ಕಂಠದಿಂದ ಕೇಳಹತ್ತಿದರು ಮತ್ತು ಮಗನ ಗುಣ ವರ್ಣನೆಯನ್ನು ಮಾಡತೊಡಗಿದರು. ಆದರೂ ಅವನು ಮಾತನಾಡಲಿಲ್ಲ. "ನೀನು ಮಾತನಾಡದಿದ್ದರೆ

ನಾವು ನೀರು ಕುಡಿಯುವದಿಲ್ಲ" ಎಂದು ನಿರ್ಧಾರದಿಂದ ಹೇಳಿದರು. ಅವರ ನಿರ್ಧಾರವನ್ನು ಕೇಳಿ ದಶರಥನು ನಡೆದ ಎಲ್ಲ ಸಂಗತಿಯನ್ನು ಹೇಳಿದನು. ಅದನ್ನೆಲ್ಲ ಕೇಳುತ್ತಲೇ "ಹಾ ಮಗನೇ" ಎಂದು ಅವರು ಭೂಮಿಯಮೇಲೆ ಬಿದ್ದರು. ಮತ್ತು "ನಾವು ಯಾವ ಪ್ರಕಾರವಾಗಿ ಮಗನ ವಿರಹದಿಂದ ಪ್ರಾಣವನ್ನು ತ್ಯಜಿಸುವೆವೋ ಅದೇ ಪ್ರಕಾರ ವಾಗಿ ನೀನು ಮುಪ್ಪಿನ ಕಾಲದಲ್ಲಿ "ಮಗನೇ! ಮಗನೇ!" ಎಂದು ಪ್ರಾಣಬಿಡುವಿ. ಎಂದು ಶಾಪವಿತ್ತು ದೇಹವನ್ನು ತ್ಯಜಿಸಿದರು. ಮುಂದೆ ಆ ಮೂವರದೂ ಅಂತ್ಯ ಕ್ರಿಯೆಯನ್ನು ಮಾಡಿ ದಶರಥನು ತನ್ನ ಗುರು ವಿನೆಡೆಗೆ ಬಂದು ಎಲ್ಲ ನಡೆದ ಸಂಗತಿಯನ್ನು ಅರುಹಿದನು.

ಇತ್ತ ವೃಷಪರ್ವನೆಂಬ ದೈತ್ಯನು ಬಹಳೇ ಉನ್ಮತ್ತನಾಗಿ ಮೇಘರಾಜನನ್ನು ಕಾರಾಗೃಹದಲ್ಲಿರಿಸಿದ್ದನು. ಅದುಕಾರಣ ಪೃಥ್ವಿಯ ಮೇಲೆ ಹನ್ನೆರಡು ವರ್ಷಗಳತನಕ ಬರಗಾಲವು ಬಿದ್ದಿತು. ದೇವತೆ ಗಳೆಲ್ಲರೂ ಚಿಂತಿಸತೊಡಗಿದರು. ಕೂಡಲೇ ಇಂದ್ರನು ದೈತ್ಯರ ಸಂಗಡ ಯುದ್ಧಕ್ಕೆ ಸಿದ್ಧನಾದನು. ದೇವ-ದೈತ್ಯರಿಗೆ ಘನಘೋರ ವಾದ ಯುದ್ಧವಾಗಿ ದೇವಸೇನೆಯು ಸೋತು ಓಡತೊಡಗಿತು. ಇಷ್ಟ ರಲ್ಲಿ ಇಂದ್ರನಿಗೆ ನಾರದನ ಮುಖಾಂತರವಾಗಿ ಅಯೋಧ್ಯೆಯಲ್ಲಿ ಮಹಾ ಪರಾಕ್ರಮಿಯಾದ ದಶರಥನೆಂಬ ಅರಸನಿರುವನು. ಆತನನ್ನು ಕರೆದುಕೊಂಡು ಬಂದರೆ ಎಲ್ಲವೂ ಸರಿಹೋಗುವದೆಂದು ತಿಳಿಯಿತು. ಕೂಡಲೇ ಇಂದ್ರನು ತನ್ನ ಮಾತಲಿಯೆಂಬ ಸಾರಥಿಯನ್ನು ದಶರಥ ನನ್ನು ಕರೆದುಕೊಂಡು ಬರಲಿಕ್ಕೆ ಕಳುಹಿದನು. ಆಗ ಮಾತಲಿಯು ದಶರಥನಿಗೆ ಭೆಟ್ಟಿಯಾಗಿ ಎಲ್ಲ ಸಂಗತಿಯನ್ನರುಹಿ ಆತನನ್ನು ಕರೆದು ಕೊಂಡು ಬಂದು ಆತನ ರಥವನ್ನು ರಣರಂಗದಲ್ಲಿ ನಿಲ್ಲಿಸಿದನು. ಬರು ವಾಗ್ಗೆ ದಶರಥನ ಪ್ರೀತಿಯ ಹೆಂಡತಿಯಾದ ಕೈಕೇಯಿಯು ಸಂಗಡ

ಬಂದಿದ್ದಳು ದಶರಥನನ್ನು ಕಂಡು ಇಂದ್ರನಿಗೆ ಬಹಳೇ ಸಂತೋಷವಾಯಿತು. ಅವನು ಪ್ರೇಮಾಲಿಂಗನವನ್ನು ಕೊಟ್ಟು ಯುದ್ಧಕ್ಕೆ ಅಪ್ಪಣೆಯನ್ನಿತ್ತನು. ಕೂಡಲೆ ದಶರಥನು ತನ್ನ ಅಸಂಖ್ಯವಾದ ಬಾಣದ ಸುರಿಮಳೆಯನ್ನೇ ದೈತ್ಯ ಸೇನೆಯ ಮೇಲೆ ಸುರಿಸಿದನು. ಆಗ ದೈತ್ಯರೆಲ್ಲರೂ ಓಡತೊಡಗಿದರು. ಕೂಡಲೇ ವೃಷಪರ್ವನು ಮುಂದೆ ಬಂದು ಯುದ್ಧಮಾಡತೊಡಗಿದನು. ದಶರಥನು ಆತನನ್ನುಕೂಡ ಓಡಿಸಿಬಿಟ್ಟನು. ಆಗ ದೈತ್ಯ ಗುರುವಾದ ಶುಕ್ರಾಚಾರ್ಯರು ಯುದ್ಧಕ್ಕೆ ಬಂದರು. ಮತ್ತು ತಮ್ಮ ನಿರ್ವಾಣವಾದ ಬಾಣದಿಂದ ದಶರಥನ ರಥದ ಗಾಲಿಯ ಕೀಲವನ್ನು ಮುರಿದೊಗೆದರು. ಅದು ಕೈಕೇಯಿಯ ದೃಷ್ಟಿಗೆ ಬಿದ್ದಿತು. ಕೂಡಲೇ ಅವಳು ತನ್ನ ಒಂದು ಕೈಯನ್ನು ಆ ಅಚ್ಚಿನಲ್ಲಿಹಾಕಿ ರಥದ ಗಾಲಿಯನ್ನು ಸಾವರಿಸಿ ಹಿಡಿದಳು. ಆಗ ದಶರಥನು ತನ್ನ ಅಮೋಘವಾದ ಅಸ್ತ್ರಗಳಿಂದ ಶುಕ್ರಾಚಾರ್ಯರ ರಥವನ್ನು ಮುರಿದು, ಅವರ ಕಿರೀಟವನ್ನು ಹಾರಿಸಿ, ಅವರನ್ನು ಓಡಿಸಿಬಿಟ್ಟನು. ಆಗ ಎಲ್ಲ ದೇವತೆಗಳು ದಶರಥನ ಜಯಜಯಕಾರವನ್ನು ಮಾಡಿದರು ಇತ್ತ ದಶರಥನು ಕೈಕೇಯಿಯನ್ನು ನೋಡಲಾಗಿ ಅವಳು ತನ್ನ ಕೈಯಿಂದ ರಥದ ಗಾಲಿಯನ್ನು ತಡೆಹಿಡಿದದ್ದಕ್ಕಾಗಿ ಸಂತೋಷಪಟ್ಟು ಆಕೆಗೆ ಎರಡು ವರಗಳನ್ನು ಕೊಡಲು ಸಿದ್ಧನಾದನು. ಮುಂದೆ ಅವಳು ಇವೇ ವರಗಳನ್ನು ಬೇಕಾದಾಗ ಬೇಡಿಕೊಳ್ಳುವೆನೆಂದಳು.

ಕೈಕೇಯಿಯ ಕಡೆಯಿಂದ ದಶರಥನಿಗೆ ಸಹಾಯ ದೊರೆತದ್ದಕ್ಕೆ ಕಾರಣವೇನೆಂದರೆ—ಅವಳು ಕೌಮಾರಿಕಾವಸ್ಥೆಯಲ್ಲಿದ್ದಾಗ್ಗೆ ಅವರ ಮನೆಯಲ್ಲಿ ಒಬ್ಬ ಋಷಿಯು ಬಂದಿದ್ದನು. ಆಗ ಅವಳು ಅವರ ಅನುಷ್ಠಾನದ ಎಲ್ಲ ಸಿದ್ಧತೆಯನ್ನು ತಾನೇ ಮಾಡುತ್ತಿದ್ದಳು. ಇದೇ ರೀತಿಯಾಗಿ ಕೆಲದಿನಗಳು ಕಳೆದುಹೋದವು. ಒಂದುದಿನ ಋಷಿಯು

ಧ್ಯಾನ ಮಗ್ನನಾಗಿ ಕುಳಿತಾಗ ಇವಳು ತನ್ನ ಬಾಲಬುದ್ಧಿಯಿಂದ ಆತನ ಮೋರೆಗೆ ಕಾಡಿಗೆಯನ್ನು ಹಚ್ಚಿದಳು. ಆನಂತರ ಋುಷಿಯು ಧ್ಯಾನವಿಸರ್ಜನೆಯನ್ನು ಮಾಡಿ ನೋಡಲಾಗಿ ತನ್ನ ಮೋರೆಯ ಕಪ್ಪು ಕಂಡು ಬಂದಿತು. ಕೂಡಲೇ ಅವನು " ಎಲಾ ದುಷ್ಟೇ, ನೀನು ನಿನ್ನ ಮಲಮಗನನ್ನು ದ್ವೇಷಿಸಿ ಮೋರೆಗೆ ಕಪ್ಪನ್ನು ಹಚ್ಚಿಕೊಳ್ಳುವೆ" ಎಂದು ಶಾಪವನ್ನಿತ್ತನು. ಆಗ ಅವಳ ತಾಯಿಗೆ ನಿಜ ಸಂಗತಿಯು ತಿಳಿದು ಬಹಳೇ ದುಃಖಿಸಿ ಕೂಡಲೇ ಅವಳು ಉಶಾಪವನ್ನು ಬೇಡಿಕೊಂಡಳು. ಋುಷಿಯು " ನಿನ್ನ ಮಗಳು ನನಗೆ ಯಾವ ಕೈಯಿಂದ ಎಲ್ಲ ಸಾಮುಗ್ರಿಗಳನ್ನು ಸಿದ್ಧಗೊಳಿಸಿ ಕೊಟ್ಟಿರುವಳೋ ಅದೇ ಕೈಯಿಂದ ತನ್ನ ಪತಿಗೆ ರಣರಂಗದಲ್ಲಿ ನೆರವಾಗಿ ಯಶಸ್ಸು ಕೊಡುವಳು" ಎಂದು ಉಶಾಪವನ್ನಿತ್ತು ಹೊರಟುಹೋದನು.

ದಶರಥನ ಯುದ್ಧಕೌಶಲ್ಯವನ್ನು ಕಂಡು ದೇವತೆಗಳು ಸಂತುಷ್ಟರಾಗಿ ಆತನನ್ನು ವಸ್ತ್ರಾಲಂಕಾರಗಳಿಂದ ಸನ್ಮಾನಿಸಿ " ವೈಕುಂಠ ಪತಿಯಾದ ನಾರಾಯಣನು ನಿನ್ನ ಉದರದಿಂದ ಜನಿಸಲಿ" ಎಂದು ಹರಿಸಿ ಕಳುಹಿಸಿಕೊಟ್ಟರು.

## ೪. ಪುತ್ರಕಾಮೇಷ್ಟಿ ಯಾಗ

ಇಂದ್ರಾದಿ ದೇವತೆಗಳಿಂದ ಸನ್ಮಾನಿತನಾದ ದಶರಥನು ಮರಳಿ ಅಯೋಧ್ಯೆಗೆ ಬಂದನು. ಮತ್ತು ತನ್ನ ಗುರುವಾದ ವಶಿಷ್ಠರಿಗೆ ಅಲ್ಲಿ ನಡೆದ ಎಲ್ಲ ಸಂಗತಿಯನ್ನರುಹಿದನು. ಆಗ ವಶಿಷ್ಠಗುರುಗಳು "ಎಲೈ ಅರಸನೇ ಎಲ್ಲವೂ ದೇವರ ಇಚ್ಛೆಯಂತೆ ನಿನ್ನ ಹಿತಕ್ಕಾಗಿಯೇ ಆಗಿರುತ್ತದೆ. ಕಾರಣ ನೀನು ಬೇಗನೆ ಪುತ್ರಕಾಮೇಷ್ಟಿಯಾಗವನ್ನು ಮಾಡು. ಅಂದರೆ ಯಜ್ಞ ದೇವತೆಗಳು ಸಂತುಷ್ಟರಾದ ಕೂಡಲೇ

ನಿನಗೆ ಪುತ್ರ ಪ್ರಾಪ್ತಿಯಾಗುವದು. ಆದರೆ ಈ ಯಜ್ಞಕ್ಕೆ ವಿಭಾಂಡಕ ಋಷಿಯ ಮಗನಾದ ಶೃಂಗಋಷಿಯನ್ನು ಕರೆದುಕೊಂಡು ಬಂದು ಆತನನ್ನು ಋತ್ವಿಜನನ್ನಾಗಿ ನೇಮಿಸಬೇಕು. ಅಂದರೆ ಯಜ್ಞವು ಯಥಾಸಾಂಗವಾಗುವದು'' ಎಂದು ಹೇಳಿದರು. ಕೂಡಲೆ ದಶರಥನು ಇಂದ್ರನ ಕಡೆಯಿಂದ ರಂಭಾ, ಊರ್ವಸಿ, ತಿಲೋತ್ತಮಾ ಎಂಬ ಅಪ್ಸರೆಯರನ್ನು ಕರೆಯಿಸಿ ಶೃಂಗಋಷಿಯನ್ನು ಕರೆತರಲು ಕಳುಹಿಸಿದನು.

ಇತ್ತ ವಿಭಾಂಡಕಋಷಿಯು ಗಂಗಾತೀರದಲ್ಲಿರುವ ಅರಣ್ಯದಲ್ಲಿ ಎತ್ತರವಾದ ಗೋಪುರವನ್ನು ಕಟ್ಟಿಸಿ ಅಲ್ಲಿ ತನ್ನ ಮಗನಾದ ಶೃಂಗ ಋಷಿಯನ್ನಿಟ್ಟು ತಾನು ನಿತ್ಯದಲ್ಲೂ ಅನುಷ್ಠಾನಕ್ಕಾಗಿ ಗಂಗಾತೀರಕ್ಕೆ ಬೆಳಗುಮುಂಜಾನೆ ಹೋಗುತ್ತಿದ್ದನು. ಒಂದುದಿನ ವಿಭಾಂಡಕ ಋಷಿಯು ಅನುಷ್ಠಾನಕ್ಕೆ ಹೋದಸಮಯದಲ್ಲಿ ರಂಭಾ, ಊರ್ವಸಿಯರು ತಮ್ಮ ನೃತ್ಯಕೌಶಲ್ಯದಿಂದ ಶೃಂಗಋಷಿಯನ್ನು ಮೋಹಿಸಿ ಅಯೋಧ್ಯೆಗೆ ಕರೆತಂದರು.

ಕೂಡಲೆ ದಶರಥನು ಆತನನ್ನು ಸನ್ಮಾನದಿಂದ ಕರೆದುಕೊಂಡು ಬಂದು ತನ್ನ ಮಗಳಾದ ಶಾಂತೆಯನ್ನು ಕೊಟ್ಟು ಬಹಳ ವಿಜೃಂಭಣೆಯಿಂದ ಮದುವೆ ಮಾಡಿದನು. ಇತ್ತ ವಿಭಾಂಡಕಋಷಿಯು ತನ್ನ ಆಶ್ರಮಕ್ಕೆ ಬರಲು ಮಗನನ್ನು ಕಾಣದೆ ಕೋಪಗೊಂಡು ಅಯೋಧ್ಯೆಗೆ ಬಂದನು. ಆಗ ಇಲ್ಲಿ ತನ್ನ ಮಗನಿಗೆ ನಡೆದಿರುವ ಮಾನ-ಮರ್ಯಾದೆಗಳನ್ನು ಮತ್ತು ಸೊಸೆಯನ್ನು ನೋಡಿ ಬಹಳೇ ಸಂತುಷ್ಟನಾಗಿ ದಶರಥನಿಗೆ "ನಿನಗೆ ನಾಲ್ಕು ಮಂದಿ ಗಂಡುಮಕ್ಕಳು ಜನಿಸುವರು" ಎಂದು ಆಶೀರ್ವಾದವಿತ್ತನು.

ಕೂಡಲೆ ಪುತ್ರಕಾಮೇಷ್ಟಿ ಯಜ್ಞವು ಸುರುವಾಗಿ ಯಜ್ಞದೇವತೆಗಳು ಸಂತುಷ್ಟರಾಗಿ ಯಜ್ಞ ಸಮಾಪ್ತಿಯ ದಿವಸ ಸಾಕ್ಷಾತ್ ಅಗ್ನಿ

ನಾರಾಯಣನೇ ಪ್ರತ್ಯಕ್ಷನಾಗಿ ಒಂದು ಪಾಯಸ ಪಾತ್ರವನ್ನು ತೆಗೆದು ಕೊಂಡು ಶೃಂಗಋಷಿಯ ಕೈಯಲ್ಲಿ ಕೊಟ್ಟು ಇದನ್ನು ಮೂರು ಮಂದಿ ರಾಣಿಯರಿಗೆ ಸಮವಾಗಿ ಹಂಚಿಕೊಡು ಎಂದು ಹೇಳಿ ಗುಪ್ತನಾದನು. ಆಗ ಆ ಪಾಯಸದ ಪಾತ್ರೆಯನ್ನು ಶೃಂಗಋಷಿಯು ವಶಿಷ್ಠರ ಕೈಯಲ್ಲಿ ಕೊಟ್ಟನು. ಆಗ ವಶಿಷ್ಠರು ಸಮವಾಗಿ ಮೂರು ಭಾಗವನ್ನು ಮಾಡಿ ಮೊದಲನೇ ಭಾಗವನ್ನು ಪಟ್ಟದ ರಾಣಿಯಾದ ಕೌಸಲ್ಯೆಗೆ ಕೊಟ್ಟರು. ಆಗ ಕೈಕೇಯಿಯು ಬಹಳೇ ಕೋಪದಿಂದ ತನ್ನ ಭಾಗವನ್ನು ಸ್ವೀಕರಿಸ ಲಿಲ್ಲ. ಕೂಡಲೆ ಅವಳ ಮುಂದಿನ ಭಾಗವನ್ನು ಒಂದು ಹಾಳೆಯಹದ್ದು ಕಚ್ಚಿಕೊಂಡು ಹಾರಿಹೋಯಿತು. ಆಗ ಕೈಕೇಯಿಯು ಬಹಳೇ ಶೋಕಿ ಸತೊಡಗಿದಳು. ಆಕೆಯ ಈ ಅವಸ್ಥೆಯನ್ನು ದಶರಥರಾಜನು ನೋಡಿ ಬಹಳ ಚಿಂತಾಕ್ರಾಂತನಾಗಿ ಪಟ್ಟದರಸಿಯಾದ ಕೌಸಲ್ಯೆಯ ಮುಖ ವನ್ನು ನೋಡಿದನು. ಆಗ ಕೌಸಲ್ಯಾ—ಸುಮಿತ್ರೆಯರಿಬ್ಬರು ತಮ್ಮ ಪತಿಯ ಮನಸ್ಸಿನ ಭಾವವನ್ನು ತಿಳಿದುಕೊಂಡು ತಮ್ಮ ಭಾಗಗಳಲ್ಲಿಯ ಅರ್ಧ ಅರ್ಧ ಭಾಗವನ್ನು ಅವಳಿಗೆ ಕೊಟ್ಟು ಸಮಾಧಾನ ಮಾಡಿದರು. ಆಗ ಮೂವರೂ ಅರಸಿಯರು ತಮ್ಮ ತಮ್ಮ ಭಾಗಗಳನ್ನು ಪರಮೇಶ್ವ ರನನ್ನು ಧ್ಯಾನಿಸುತ್ತ ಸ್ವೀಕರಿಸಿದರು. ಆದರೆ ಕೈಕೆಯಿಯು ತನ್ನ ಭಾಗ ವನ್ನು ನುಂಗುತ್ತಿರುವಾಗ ಆ ಪಿಂಡವು ಅವಳ ಗಂಟಲದಲ್ಲಿ ಸಿಕ್ಕು ಬಿಟ್ಟಿತು. ಈ ಸಂಗತಿಯು ಅಲ್ಲಿಯೇ ಕುಳಿತಿರುವ ವಶಿಷ್ಠರಿಗೆ ತಿಳಿದು ಅವರು ಕೂಡಲೆ ಅವಳಮೇಲೆ ತೀರ್ಥ ಚಿಮ್ಮಿಸಿದರು. ಆಗ ಎಲ್ಲವೂ ಸರಿಯಾಗಿ ಮೂರೂ ಮಂದಿ ಸತಿಯರು ಗರ್ಭವತಿಯರಾದರು.

ಇತ್ತ ಕೈಕೇಯಿಯ ಕೈಯಲ್ಲಿಯ ಪಾಯಸಪಾತ್ರೆಯನ್ನು ತೆಗೆದು ಕೊಂಡು ಹೋದ ಹಾಳೆಹದ್ದಿನ ಸಂಗತಿಯು ಇಂತಿದೆ. ಕೇಸರಿ ಎಂಬ ವಾನರನ ಪತ್ನಿಯಾದ ಅಂಜನೆಯು ಏಳು ಸಾವಿರ ವರ್ಷಗಳ ಪರ್ಯಂತ ಪುತ್ರಪ್ರಾಪ್ತಿಯ ಸಲುವಾಗಿ ಶಂಕರನನ್ನು ಆರಾಧಿಸುತ್ತಿ

ದ್ದಳು. ಆಗ ಶಂಕರನು ಆಕೆಯ ತಪಸ್ಸಿಗೆ ಮೆಚ್ಚಿ " ನಿನ್ನ ಉದರ ದಿಂದ ಹನ್ನೊಂದನೆಯ ಮಹಾರುದ್ರನು ಅವತಾರ ತಾಳುವನು " ಎಂದು ಹೇಳಿದನು. ಮತ್ತು "ನೀನು ಕಣ್ಣು ಮುಚ್ಚಿಕೊಂಡು ಬೊಗಸೆ ಒಡ್ಡಿ ಕುಳಿತಿರು. ಆಗ ವಾಯುವಿನಿಂದ ನಿನ್ನ ಕೈಯಲ್ಲಿ ಪ್ರಸಾದವು ಬಂದು ಬೀಳುವದು. ಅದನ್ನು ನೀನು ಭಕ್ಷಣಮಾಡು" ಎಂದು ಹೇಳಿ ಶಂಕರನು ಗುಪ್ತನಾದನು ಕೂಡಲೇ ಅಂಜನೆಯು ಅವರಂತೆ ಬೊಗಸೆ ಯೊಡ್ಡಿಕೊಂಡು ಕುಳಿತುಕೊಂಡಿರಲಾಗಿ ಹಾಳಿಯ ಹದ್ದು ಒಯ್ಯು ತ್ತಿರುವ ಆ ಪ್ರಸಾದವು ವಾಯುವೇಗದಿಂದ ಅಂಜನೆಯ ಕೈಯಲ್ಲಿ ಬಿದ್ದಿತು. ಕೂಡಲೆ ಅವಳು ಶಿವಸ್ಮರಣೆಯನ್ನು ಮಾಡುತ್ತ ಅದನ್ನು ಭಕ್ಷಣಮಾಡಿದಳು.ಆ ಪಾತ್ರೆಯನ್ನು ಒಯ್ಯುತ್ತಿರುವ ಹಾಳಿಯಹದ್ದು ಪೂರ್ವಜನ್ಮದಲ್ಲಿ ಒಬ್ಬದೇವಾಂಗನೆಯಾಗಿದ್ದಳು. ಒಂದುದಿನ ಅವಳು ನೃತ್ಯವನ್ನು ಮಾಡುತ್ತಿರುವಾಗ ಬೆದರಿದ ಕಾರಣ ಬ್ರಹ್ಮದೇವನಿಂದ ಶಾಪಹೊಂದಿ ಹಾಳಿಯಹದ್ದಿನ ಜನ್ಮವನ್ನು ತಾಳಿದ್ದಳು. ಕೂಡಲೇ ಅವಳು ಉಶಾಪವನ್ನು ಬೇಡಿಕೊಂಡಳು. " ನೀನು ಹಾಳಿಯಹದ್ದಿನ ಜನ್ಮದಲ್ಲಿರುವಾಗ ನೀನು ಒಯ್ಯುತ್ತಿರುವ ಪಾಯಸಪಾತ್ರೆಯನ್ನು ಅಂಜನೆಯ ಕೈಯಲ್ಲಿ ಬಿದ್ದಕೂಡಲೆ ನಿನ್ನ ಉದ್ಧಾರವಾಗುವದು " ಎಂದು ಉಶಾಪಕೊಟ್ಟು ಬ್ರಹ್ಮದೇವನು ಹೊರಟುಹೋದನು. ಅದೇ ಪ್ರಕಾರವಾಗಿ ಆ ದೇವಾಂಗನೆಯು ತನ್ನ ಹಾಳಿಯಹದ್ದಿನ ಜನ್ಮವನ್ನು ತ್ಯಜಿಸಿ ತನ್ನ ಲೋಕಕ್ಕೆ ಹೊರಟುಹೋದಳು.

ಇತ್ತ ಅಂಜನೆಯು ಆ ಶಿವಪ್ರಸಾದದಿಂದ ಗರ್ಭಿಣಿಯಾಗಿ ನವ ಮಾಸ ತುಂಬಲು ಅಕ್ಷಯ ಕೌಪೀನವನ್ನು ಧರಿಸಿದಂಥ ಬ್ರಹ್ಮಚಾರಿ ಮಗನನ್ನು ಪಡೆದಳು. ಅಂದು ಚೈತ್ರ ಹುಣ್ಣಿವೆಯದಿನದ ಸೂರ್ಯೋ ದಯ ಸಮಯದಲ್ಲಿ ಹನುಮಂತನು ಜನಿಸಿದನು.

## ೫. ಭಗವಾನ್ ಶ್ರೀ ರಾಮ ಜನ್ಮ

ಮುಂದೆ ದಶರಥನು ತನ್ನ ಗರ್ಭವತಿಯರಾದ ಸ್ತ್ರೀಯರ ಇಚ್ಛೆಯನ್ನು ಪೂರೈಸುವದರ ಸಲುವಾಗಿ ಅವರವರ ಮಂದಿರಕ್ಕೆ ಹೋದನು. ಮೊದಲು ಕೈಕೇಯಿಯ ಮಂದಿರಕ್ಕೆ ಬಂದನು. ಆಗ ಅವಳು ತನ್ನ ಪತಿಯು ತನ್ನರೂಪಕ್ಕೆ ಮೆಚ್ಚಿ ತನ್ನನ್ನು ಉಪಚರಿಸಲಿಕ್ಕೆ ಬಂದಿರಬಹುದೆಂದು ತಿಳಿದು ತಾನು ಆತನನ್ನು ಆದರದಿಂದ ಬರಮಾಡಿಕೊಳ್ಳಲಿಲ್ಲ; ಆದರೂ ದಶರಥನು ಕೈಕೇಯಿಯ ಬಳಿಗೆ ಹೋಗಿ:— "ನಿನಗೆ ಏನು ಅಪೇಕ್ಷೆ ಇರುವದು?" ಎಂದು ಕೇಳಿದನು. ಆಗ ಅವಳು ತನ್ನ ಕಠೋರವಾದ ವಾಣಿಯಿಂದ "ನನ್ನ ಮಲಮಗನು ವನಕ್ಕೆ ತೆರಳಬೇಕು, ಮತ್ತು ನನ್ನ ಮಗನಿಗೆ ಪಟ್ಟಾಭಿಷೇಕವಾಗಬೇಕು" ಎಂದು ಹೇಳಿದಳು. ಅದನ್ನು ಕೇಳಿ ಅರಸನು ಬಹಳೇ ದುಃಖದಿಂದ ಹೊರಟು ಸುಮಿತ್ರೆಯ ಮಂದಿರಕ್ಕೆ ಬಂದನು. ಆಗ ಅವಳು ತನ್ನ ಪತಿಯನ್ನು ಬಹಳ ಪ್ರೀತಿಯಿಂದ ಬರಮಾಡಿಕೊಂಡು ಪಂಚಾರತಿಯನ್ನು ಬೆಳಗಿ ಆತನನ್ನು ಒಂದು ಮಂಚದಮೇಲೆ ಕುಳ್ಳಿರಿಸಿದಳು. ಮತ್ತು ಶೈತ್ಯೋಪಚಾರಗಳಿಂದ ಸತ್ಕರಿಸಿದಳು. ಆಗ ಅರಸನು ಅವಳ ಸೌಜನ್ಯಕ್ಕೆ ಮೆಚ್ಚಿ "ನಿನ್ನ ಇಚ್ಛೆಯು ಏನಿರುವದು?" ಎಂದನು. ಆಗ ಅವಳು "ನನ್ನ ಮಗನು ಕೌಸಲ್ಯಾದೇವಿಯರ ಮಗನ ಸೇವೆಯನ್ನು ಮಾಡಬೇಕು" ಎಂದು ಬೇಡಿಕೊಂಡಳು. ಆಕೆಯ ಈ ಅಮೃತವಾಣಿಯನ್ನು ಕೇಳಿ "ನಿನ್ನ ಇಚ್ಛೆಯಂತೆಯೇ ಆಗುವದು" ಎಂದು ಹೇಳಿ ಅಲ್ಲಿಂದ ಹೊರಟು ಕೌಸಲ್ಯೆಯ ಮಂದಿರಕ್ಕೆ ಹೋದನು. ಅವಳು ತನ್ನ ಮಂದಿರದಲ್ಲಿರಲಿಲ್ಲ. ಅವಳು ತನ್ನ ತೋಟದಲ್ಲಿರುವ ಒಂದು ಮರದಡಿಯಲ್ಲಿ ನಿರ್ವಿಕಲ್ಪ ಸಮಾಧಿಯಲ್ಲಿ ಕುಳಿತುಬಿಟ್ಟಿದ್ದಳು. ಕೂಡಲೆ ದಶರಥನು ಅವಳ ಬಳಿಗೆ ಹೋಗಿ ಅವಳು ತನ್ನಮೇಲೆ ಸಿಟ್ಟಾಗಿರಬಹುದೆಂದು

ತಿಳಿದು ಆಕೆಯನ್ನು ಸಂತೈಸತೊಡಗಿದನು; ಆದರೂ ಅವಳಿಗೆ ಎಚ್ಚರ ವಾಗಲಿಲ್ಲ. ಅವಳು ಪೂರ್ಣಬ್ರಹ್ಮನಾದ ರಾಮಚಂದ್ರನ ಧ್ಯಾನದಲ್ಲಿ ಲೀನಳಾಗಿಬಿಟ್ಟಿದ್ದಳು. ಆಗ ದಶರಥನು "ಪ್ರಿಯೇ, ನಿನ್ನ ಇಚ್ಛೆಯು ಏನಿರುವದು? ಅದನ್ನು ನಾನು ಪೂರೈಸುವೆನು" ಎಂದು ಕೇಳಿದನು. ಅದನ್ನು ಕೇಳಿ ಕೌಸಲ್ಯೆಯು "ನನ್ನ ಇಚ್ಛೆಯನ್ನು ಪೂರೈಸುವವನು. ನೀನು ಯಾರು? ನಾನು ಪೂರ್ಣಬ್ರಹ್ಮನಾದ ರಾಮನಿರುವೆನು. ತಾ. ಇಲ್ಲಿ ನನ್ನ ಧನುಷ್ಯ-ಬಾಣಗಳನ್ನು. ಪಿತೃ ವಚನವನ್ನು ಪಾಲಿಸುವದ ಕ್ಕಾಗಿ ದಂಡಕಾರಣ್ಯಕ್ಕೆ ಹೋಗಿ ದಶಮುಖ ರಾವಣನನ್ನು ಸಂಹರಿಸಿ ನನ್ನ ಭಕ್ತ ವಿಭೀಷಣನಿಗೆ ಲಂಕೆಯು ಪಟ್ಟಣವನ್ನು ಕಟ್ಟಿ ಮರಳಿ ಅಯೋಧ್ಯೆಗೆ ಬರುವೆನು" ಎಂದು ಹೇಳತೊಡಗಿದಳು. ಆಗ ದಶರಥನು ಗಾಬರಿಯಿಂದ ಇವಳಿಗೆ ಪಿಶಾಚಿಯ ಬಾಧೆಯಾಗಿರುವದೆಂದು ತಿಳಿದು ಕೂಡಲೆ ತನ್ನ ಕುಲಗುರುವಾದ ವಶಿಷ್ಠರನ್ನು ಕರೆಕಳುಹಿಸಿ ದನು. ಆಗ ವಶಿಷ್ಠರು ಅಲ್ಲಿಗೆ ಬಂದು ಕೌಸಲ್ಯೆಯಲ್ಲಿ ಧನು ರ್ಧಾರಿಯಾದ ರಾಮನನ್ನು ಕಂಡು ಅವರೂ ಸಹ ಅವನ ಧ್ಯಾನದಲ್ಲಿ ಮಗ್ನರಾದರು. ಆಗ ದಶರಥನು ಗಾಬರಿಯಿಂದ "ಎಲಾ ಇದೇನು? ಇವರಿಗೂ ಸಹ ಈ ಪಿಶಾಚಿಯು ಹಿಡಿಯಿತೆ?" ಎಂದು ದುಃಖಿಸತೊಡ ಗಿದನು. ಅಷ್ಟರಲ್ಲಿ ವಶಿಷ್ಠರು ಎಚ್ಚತ್ತು ಅರಸನೇ, ಅಂಜಬೇಡ ಧನುರ್ಧಾರಿಯಾದ ರಾಮನು ನಿನ್ನ ಉದರದಿಂದ ಜನಿಸುವನು" ಎಂದು ಹೇಳಿದರು. ಆಗ ದಶರಥನು ಬಹಳ ಸಂಭ್ರಮದಿಂದ ಅಲ್ಲಿಂದ ಹೊರಟುಹೋದನು. ಮುಂದೆ ಚೈತ್ರ ಶುದ್ಧ ನವಮಿ ದಿವಸ ಮಧ್ಯಾಹ್ನಕಾಲದಲ್ಲಿ ಗುರು-ಚಂದ್ರರು ಕರ್ಕಲಗ್ನದಲ್ಲಿರುವಾಗ ಪುನ ರ್ವಸು ನಕ್ಷತ್ರದಲ್ಲಿ ಶ್ರೀರಾಮಚಂದ್ರನು ಜನ್ಮಿಸಿದನು.

ಆಗ ದೇವತೆಗಳೆಲ್ಲರೂ ಹೂಮಳೆಗರೆದರು. ಎಲ್ಲಕಡೆಗೂ ಆನಂದವೇ ಆನಂದ! ಕೂಡಲೆ ದಶರಥನು ಅಯೋಧ್ಯೆಯ ಜನಕೆಲ್ಲ

ಸಕ್ಕರೆಯನ್ನು ಹಂಚಿದನು. ಬ್ರಾಹ್ಮಣರಿಗೆ ದ್ರವ್ಯ ದಾನವನ್ನು ಕೊಟ್ಟನು. ಆಗ ಬ್ರಾಹ್ಮಣರು ಸಂತುಷ್ಟರಾಗಿ ಅರಸನಿಗೆ ಶುಭಾಶೀರ್ವಾದವನ್ನು ಕೊಟ್ಟು ಹೊರಟುಹೋದರು. ಮುಂದೆ ಮರುದಿನದಶಮಿಯ ದಿವಸ ಲಕ್ಷ್ಮಣನು ಹುಟ್ಟಿದನು ಏಕಾದಶಿಯದಿವಸ ಭರತ ಶತ್ರುಘ್ನರು ಜನಿಸಿದರು. ಹೀಗೆ ಅರಸನಿಗೆ ನಾಲ್ಕುಮಂದಿ ಗಂಡುಮಕ್ಕಳು ಜನಿಸಿದರು.

## ೬. ಭಗವಾನ್ ಶ್ರೀರಾಮಚಂದ್ರನ ಬಾಲ್ಯ

ಮುಂದೆ ದಶರಥನು ತನ್ನ ಕುಲಗುರುವಾದ ವಶಿಷ್ಠನಿಂದ ಈ ನಾಲ್ಕೂ ಮಕ್ಕಳ ಜಾತಕವನ್ನು ಬರೆಯಿಸಿದನು. ಆಗ ವಶಿಷ್ಠರು "ಎಲೈ ಅರಸನೇ, ಈ ನಿನ್ನ ಹಿರಿಯ ಮಗನು ಪೂರ್ಣ ಬ್ರಹ್ಮನಾದ ಸಾಕ್ಷಾತ್ ಪರಮೇಶ್ವರನೇ ನಿನಗೆ ಮಗನಾಗಿ ಅವತರಿಸಿರುವನು ಈತನಿಂದ ಸಾಧು ಸಜ್ಜನರಿಗೆ ಕಲ್ಯಾಣವಾಗುವದು. ಯಜ್ಞಯಾಗಾದಿಕರ್ಮಗಳು ಯಥಾಸಾಂಗವಾಗಿ ಸಾಗುವವು. ಇವನಿಗೆ ಹನ್ನೆರಡು ವರ್ಷಗಳು ತುಂಬಲು ಒಬ್ಬ ಬ್ರಾಹ್ಮಣನು ಬಂದು ತನ್ನ ಯಜ್ಞವನ್ನು ರಕ್ಷಿಸುವ ವರಸಲುವಾಗಿ ಕರೆದುಕೊಂಡು ಹೋಗುವಾಗ್ಗೆ ಇವನು ಅಲ್ಲಿ ಒಬ್ಬ ರಾಕ್ಷಸಿಯನ್ನು ಸಂಹರಿಸುವನು. ಮುಂದೆ ಶಿವಧನುಷ್ಯವನ್ನು ಮುರಿಯುವನು; ಆಗ ಇವನಿಗೆ ಒಬ್ಬ ರಾಜಕುಮಾರಿಯು ಮಾಲೆಯನ್ನು ಹಾಕುವಳು; ಅನಂತರ ಇವನ ಪಟ್ಟಾಭಿಷೇಕ ಸಮಯದಲ್ಲಿ ಒಂದು ವಿಘ್ನವು ಒದಗಿ ಕೂಡಲೆ ಇವನು ಅರಣ್ಯಕ್ಕೆ ತೆರಳುವನು, ಅಲ್ಲಿ ಇವನ ಹೆಂಡತಿಯನ್ನು ರಾಕ್ಷಸನು ತೆಗೆದುಕೊಂಡು ಹೋಗುವನು. ಆಗ ಇವನು ಅಡವಿಯಲ್ಲಿರುವ ಕಪಿಗಳ ಸಹಾಯದಿಂದ ರಾಕ್ಷಸರನ್ನು ಸಂಹರಿಸಿ ಮರಳಿ ಅಯೋಧ್ಯೆಗೆ ಬರುವನು" ಈ ಪ್ರಕಾರ ವಶಿಷ್ಠರು ಜಾತಕ ಹೇಳಿದರು. ಆಗ ಅರಸನು ಬಹಳೇ ಸಂಭ್ರಮದಿಂದ ತನ್ನ

ಗುರುಗಳನ್ನು ವಸ್ತ್ರಾಲಂಕಾರಗಳಿಂದ ಸಂತೋಷಪಡಿಸಿದನು. ಮುಂದೆ ಹನ್ನೆರಡು ದಿವಸಗಳು ಕ್ರಮಿಸಿದ ಬಳಿಕ ದಶರಥನು ಮಕ್ಕಳ ನಾಮಕರಣವನ್ನು ಮಾಡಿದನು. ಆಗ ಅಯೋಧ್ಯೆಯ ಎಲ್ಲ ನರ-ನಾರಿಯರು ವಸ್ತ್ರಾಲಂಕಾರಗಳಿಂದ ಸುಶೋಭಿತರಾಗಿ ಕೌಸಲ್ಯೆಯ ಮಂದಿರಕ್ಕೆ ಬಂದರು. ಮುಂದೆ ಅವರೆಲ್ಲರೂ ಸೇರಿ ಮಕ್ಕಳನ್ನು ತೊಟ್ಟಿಲಲ್ಲಿ ಹಾಕಿ ಕೌಸಲ್ಯೆಯ ಮಗನಿಗೆ ಶ್ರೀರಾಮನೆಂದೂ, ಸುಮಿತ್ರೆಯ ಮಗನಿಗೆ ಲಕ್ಷ್ಮಣನೆಂದೂ, ಕೈಕೇಯಿಯ ಮಕ್ಕಳಿಗೆ ಭರತ, ಶತ್ರುಘ್ನರೆಂದೂ ಹೆಸರಿಟ್ಟು ತೊಟ್ಟಿಲವನ್ನು ತೂಗಿ ಜೋಗುಳವನ್ನು ಹಾಡಿದರು. ಅಂದು ರಾಜಮಂದಿರದಲ್ಲಿ ಎಲ್ಲ ಕಡೆಗೂ ಆನಂದವೇ ಆನಂದ. !!

ಇದೆಲ್ಲವೂ ಮುಗಿದನಂತರ ಕೌಸಲ್ಯೆಯು ಬಂದ ಸುವಾಸಿನಿಯರಿಗೆ ವಸ್ತ್ರಾಲಂಕಾರಗಳನ್ನು ದಾನ ಮಾಡಿದಳು. ಮುಂದೆ ಈ ಬಾಲಕರು ದಿನದಿನಕ್ಕೆ ಶುಕ್ಲಪಕ್ಷದ ಚಂದ್ರಮನಂತೆ ಬೆಳೆದು ದೊಡ್ಡವರಾದರು.

ಶ್ರೀರಾಮಚಂದ್ರನು ೨ ವರ್ಷದವನಿರುವಾಗ ಒಂದುದಿನ ಕೌಸಲ್ಯೆಯು ತನ್ನ ಅರಮನೆಯ ಮಾಳಿಗೆಯ ಮೇಲೆ ಕುಳ್ಳಿರಿಸಿಕೊಂಡು ಕುಳಿತಿದ್ದಳು. ಅಂದು ಹುಣ್ಣಿವೆಯು ಇದ್ದಿತು. ಪೂರ್ಣಚಂದ್ರನು ಬಹಳ ಅಂದವಾಗಿ ಕಾಣುತ್ತಿದ್ದನು. ಆತನನ್ನು ನೋಡಿ ಬಹಳ ಆನಂದದಿಂದ ಆಡಹತ್ತಿದನು. ಕೂಡಲೆ ಒಮ್ಮೆಲೆ ಅಳಲು ಪ್ರಾರಂಭಿಸಿದನು. ಆಗ ಕೌಸಲ್ಯೆಯು ಗಾಬರಿಗೊಂಡು ಮಗುವಿಗೆ ಏನಾಯಿತೆಂದು ಎಲ್ಲ ತರದ ಉಪಚಾರವನ್ನುಮಾಡಿದಳು. ಆದರೂ ಅವನು ಸುಮ್ಮನಾಗದೆ ಚಂದ್ರನಕಡೆಗೆ ಬೆರಳನ್ನು ತೋರಿಸುತ್ತ ಒಂದೆ ಸಮನೇ ಅಳಹತ್ತಿದನು. ಅಷ್ಟರಲ್ಲಿ ದಶರಥನು ಬಂದು ಮಗನನ್ನು ಸಮಾಧಾನಗೊಳಿಸಲು ಯತ್ನಿಸಿದನು. ಅವು ಎಲ್ಲವೂ ವ್ಯರ್ಥವಾದವು. ಆಗ ದಶರಥನು

ತನ್ನ ಸುಮಂತ ಪ್ರಧಾನಿಯನ್ನು ಕರೆಕಳುಹಿದನು. ಸುಮಂತನು ಬಹಳೇ ಕುಶಲನೂ, ಚತುರನೂ ಇದ್ದನು. ಕೂಡಲೆ ಅವನು ಮಗುವನ್ನು ಎತ್ತಿಕೊಂಡು "ನಿನಗೆ ಚಂದ್ರಮನು ಬೇಕೆ?" ಎಂದು ಒಂದು ಕನ್ನಡಿಯನ್ನು ತೆಗೆದುಕೊಂಡು ಅದರಲ್ಲಿ ಆ ಪೂರ್ಣಚಂದ್ರನ ಪ್ರತಿಬಿಂಬವನ್ನು ತೋರಿಸಲು ಅದನ್ನು ನೋಡಿ ಅವನು ಬಹಳೇ ಆನಂದದಿಂದ ಕುಣಿದಾಡಹತ್ತಿದನು. ಈ ಪ್ರಕಾರವಾಗಿ ಈ ಬಾಲಕರು ಅಂದ-ಚಂದವಾದ ಆಟಗಳನ್ನಾಡುತ್ತಿದ್ದರು. ಅವರು ನಾಲ್ವರೂ ಒಂದೆಡೆಗೆ ಸೇರಿ ಮಣ್ಣಿನ ರಾಕ್ಷಸರ ಗೊಂಬೆಗಳನ್ನು ಮಾಡಿಸಿ ಗುರಿಯಿಟ್ಟು ಬಾಣಗಳನ್ನು ಹೊಡೆಯುತ್ತಿದ್ದರು. ಇವೆಲ್ಲವನ್ನು ಕಂಡು ಅವರ ತಂದೆ - ತಾಯಿಗಳು ಸಂತೋಷ ಭರಿತರಾಗುತ್ತಿದ್ದರು.

ಶ್ರೀರಾಮಚಂದ್ರನು ಎಲ್ಲರಲ್ಲಿಯೂ ಹಿರಿಯನು. ಆದಕಾರಣ ಉಳಿದವರು ಆತನ ಸಂಗಡ ಬಹಳ ಮರ್ಯಾದೆಯಿಂದ ನಡೆಯುತ್ತಿದ್ದರು. ಆದರೂ ಶ್ರೀರಾಮಚಂದ್ರನನ್ನು ಲಕ್ಷ್ಮಣನು ಬಹಳೇ ಪ್ರೀತಿ ಸುತ್ತಿದ್ದನು. ಇವರಿಬ್ಬರು ಯಾವಾಗಲೂ ಕೂಡಿಯೇ ಆಡ್ಡಾಡುತ್ತಿದ್ದರು. ಇದರಂತೆಯೇ ಭರತ—ಶತ್ರುಘ್ನರು ಸಹಿತ ಕೂಡಿಯೇ ಇರುತ್ತಿದ್ದರು. ಹೀಗಿರುವಾಗ ಅವರು ಎಂಟು ವರ್ಷದವರಾದರು. ಕೂಡಲೆ ದಶರಥನು ನಾಲ್ವರಿಗೂ ವ್ರತಬಂಧವನ್ನು ಮಾಡಿಸಿ ತೀರ್ಥಯಾತ್ರೆಗೆಂದು ಅಪಾರ ಸೈನ್ಯವನ್ನು ಕೊಟ್ಟು ಕಳಿಸಿದನು. ಮುಂದೆ ಅವರು ಎಲ್ಲ ಯಾತ್ರೆಗಳನ್ನು ಮುಗಿಸಿಕೊಂಡು ಮರಳಿ ಅಯೋಧ್ಯೆಗೆ ಬಂದರು.

ಮುಂದೆ ದಶರಥನು ವಿದ್ಯಾಭ್ಯಾಸಕ್ಕೆಂದು ಇವರನ್ನೆಲ್ಲ ಗುರುಕುಲಕ್ಕೆ ಕಳಿಸಿಕೊಟ್ಟನು. ಆಗ ಅವರು ಒಮ್ಮನಸ್ಸಿನಿಂದ ಎಲ್ಲ ವಿದ್ಯೆಯನ್ನು ಕಲಿತು ಗುರುವಿನ ಪ್ರೀತಿಯನ್ನು ಸಂಪಾದಿಸಿದರು. ಈ ಪ್ರಕಾ



ಶ್ರೀರಾಮಚಂದ್ರನು ವಿಶ್ವಾಮಿತ್ರನ ಯಜ್ಞ ರಕ್ಷಣೆ ಮಾಡುತ್ತಿರುವನು

ರವಾಗಿ ಅವರು ಎಲ್ಲರ ಪ್ರೀತಿಗೂ ಪಾತ್ರರಾಗಿ ವಿದ್ಯೆಯನ್ನು ಮುಗಿಸಿ ಮರಳಿ ಅಯೋಧ್ಯೆಗೆ ಬಂದರು.

## ೭. ವಿಶ್ವಾಮಿತ್ರನ ಯಜ್ಞ ರಕ್ಷಣೆ

ಒಂದುದಿನ ದಶರಥನು ತನ್ನ ರಾಜಸಭೆಯಲ್ಲಿ ಕುಳಿತಿರುವಾಗ ವಿಶ್ವಾಮಿತ್ರರು ಅಲ್ಲಿ ಬಂದರು. ಕೂಡಲೇ ದಶರಥನು ಮುಂದೆ ಹೋಗಿ ಅವರ ಚರಣಕ್ಕೆರಗಿ ಅವರನ್ನು ಆದರದಿಂದ ಬರಮಾಡಿ ಕೊಂಡು ರತ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಅರ್ಘ್ಯಪಾದ್ಯಾದಿ ಗಳಿಂದ ಪೂಜಿಸಿ ಅವರ ಕುಶಲವನ್ನು ಕೇಳಿದನು. ಆಗ ವಿಶ್ವಾಮಿತ್ರರು "ಎಲೈ ಅರಸನೇ, ಕೇಳು. ನನ್ನದೊಂದು ಇಚ್ಛೆ ಇರುವದು. ಅದನ್ನು ನೀನು ಈಡೇರಿಸುವೆನೆಂದರೆ ಹೇಳುವೆನು" ಎಂದರು. ಆಗ ದಶರ ಥನು "ಮುನಿಗಳೇ, ನಾನು ನಿಮ್ಮ ಇಚ್ಛೆಯನ್ನು ಪೂರೈಸುವೆನು" ಎಂದು ವಚನವಿತ್ತನು. ಕೂಡಲೇ ವಿಶ್ವಾಮಿತ್ರರು "ಹಾಗಾದರೆ ಕೇಳು; ನಾನು ಯಜ್ಞವನ್ನು ಮಾಡಬೇಕೆಂದಿರುವೆನು. ಕಾರಣ ರಾಕ್ಷಸ ರಿಂದ ನನಗೆ ಬಹಳೇ ತೊಂದರೆಯಾಗುತ್ತದೆ. ಅದಕ್ಕಾಗಿ ನನ್ನ ಯಜ್ಞ ರಕ್ಷಣೆಯ ಸಲುವಾಗಿ ನಿನ್ನ ಮಕ್ಕಳಾದ ಶ್ರೀರಾಮಚಂದ್ರನನ್ನೂ, ಲಕ್ಷ್ಮಣನನ್ನೂ ನನ್ನ ಸಂಗಡ ಕಳುಹಿಸು" ಎಂದು ಹೇಳಿದರು. ಈ ಮಾತುಗಳನ್ನು ಕೇಳಿ ದಶರಥನಿಗೆ ಸಿಡಿಲು ಬಡಿದಂತಾಯಿತು! ಮತ್ತು "ರಾಮ-ಲಕ್ಷ್ಮಣರು ಇನ್ನೂ ಚಿಕ್ಕವರಿರುವರು, ಅವರು ಇನ್ನೂ ಧನುರ್ವಿದ್ಯೆಯನ್ನು ನೆಟ್ಟಗೆ ಕಲಿತಿರುವದಿಲ್ಲ. ಅಂದಮೇಲೆ ಅವರು ರಾಕ್ಷಸರಿಗೆ ಈಡಾಗುವರೇ? ಕಾರಣ ನಾನೇ ನಿಮ್ಮ ಯಜ್ಞ ರಕ್ಷಣೆಗೆ ಬರುವೆನು" ಎಂದರು. ಆಗ ವಿಶ್ವಾಮಿತ್ರನು ಅತಿ ಕೋಪ ದಿಂದ "ಎಲೈ ಅರಸನೇ, ನೀನು ಮೊದಲು ನನಗೆ ವಚನ ಕೊಟ್ಟು

ಈಗ ವಚನಭ್ರಷ್ಟನಾಗುವಿಯಾ? ಧಿಕ್ಕಾರವಿರಲಿ! ನಿನಗೆ ನೀನು ಸೂರ್ಯವಂಶಕ್ಕೆ ಕಲಂಕವನ್ನುಂಟು ಮಾಡಿದೆ, ಕೇಳು—ಇದೇ ಕುಲದಲ್ಲಿ ಜನಿಸಿದ್ದ ಅರಸನಾದ ಹರಿಶ್ಚಂದ್ರನು ಸ್ವಪ್ನದಲ್ಲಿ ತನ್ನ ರಾಜ್ಯವನ್ನು ದಾನವಾಗಿ ಕೊಟ್ಟನು. ಮತ್ತು ದಕ್ಷಿಣೆಯ ಸಲುವಾಗಿ ತನ್ನನ್ನೂ ಕಟುಕರವನಿಗೆ ಮಾರಿಕೊಂಡನು. ಆದರೂ ಅವನು ವಚನಭ್ರಷ್ಟನಾಗಲಿಲ್ಲ. ನೀನು ಶ್ರೀರಾಮಚಂದ್ರನ ಮಹಿಮೆಯನ್ನು ತಿಳಿದಿರುವದಿಲ್ಲ. ಬೇಕಾದರೆ ವಶಿಷ್ಠರನ್ನು ಕೇಳು" ಎಂದು ಹೇಳಿ ಆ ಕೋಪಿಷ್ಠನಾದ ಮುನಿಯು ಕೂಡಲೇ ಹೊರಟೇಬಿಟ್ಟನು. ಆಗ ದಶರಥನು ಗಾಬರಿಯಿಂದ ಕುಲಗುರುವಾದ ವಶಿಷ್ಠರ ಬಳಿಗೆ ಬಂದು ಎಲ್ಲ ಸಂಗತಿಯನ್ನರುಹಿದನು. ಅದೆಲ್ಲವನ್ನು ಕೇಳಿ ವಶಿಷ್ಠರು "ಎಲೈ ಅರಸನೇ, ಕೇಳು-ವಿಶ್ವಾಮಿತ್ರನು ಬಲು ಕೋಪಿಷ್ಠನು, ಆತನಿಗೆ ಅವಮಾನವಾದರೆ ಅವನು ಶಾಪಕೊಟ್ಟು ನಿನ್ನ ಕುಲವನ್ನು ಭಸ್ಮಮಾಡಿಬಿಡುವನು. ಕಾರಣ ನೀನು ರಾಮ-ಲಕ್ಷ್ಮಣರನ್ನು ಆತನ ಸಂಗಡ ಕಳುಹಿಸಿಕೊಟ್ಟರೆ ಎಲ್ಲವೂ ಸರಿಹೋಗುವದು" ಎಂದು ಹೇಳಿದರು. ಆಗ ದಶರಥನು ಓಡುತ್ತ ಹೋಗಿ ಅವರ ಚರಣಕ್ಕೆರಗಿ ಕ್ಷಮೆ ಬೇಡಿಕೊಂಡು ರಾಮ-ಲಕ್ಷ್ಮಣರನ್ನು ಅವರ ಸಂಗಡ ಕಳುಹಲು ಸಿದ್ಧನಾದನು. ಕೂಡಲೆ ವಿಶ್ವಾಮಿತ್ರನು ಶಾಂತನಾಗಿ ವಶಿಷ್ಠರ ಬಳಿಗೆ ಬಂದು "ತನ್ನ ಶಿಷ್ಯನಾದ ಶ್ರೀರಾಮನು ಎಲ್ಲಿರುವನು" ಎಂದು ಕೇಳಿದರು. ಆಗ ವಶಿಷ್ಠರು ರಾಮ—ಲಕ್ಷ್ಮಣರನ್ನು ಕರೆದುಕೊಂಡು ಬಂದರು. ಕೂಡಲೆ ಶ್ರೀರಾಮ—ಲಕ್ಷ್ಮಣರು ವಿಶ್ವಾಮಿತ್ರರ ಪಾದಕ್ಕೆರಗಿದರು. ಅವರ ಈ ಸೌಜನ್ಯವನ್ನೂ ನಮ್ರ ಸ್ವಭಾವವನ್ನೂ ಕಂಡು ವಿಶ್ವಾಮಿತ್ರರು ಆನಂದದಿಂದ ಅವರನ್ನು ಅಪ್ಪಿಕೊಂಡರು. ಶ್ರೀರಾಮಚಂದ್ರಾ, ಇವತ್ತಿನ ದಿವಸ ನನ್ನ ಜನ್ಮವು ಸಾರ್ಥಕವಾಯಿತು" ಎಂದು ಹೇಳಿದರು. ಮತ್ತು "ನಿನ್ನ ಹೊರತಾಗಿ ನನ್ನ ಯಜ್ಞದ ರಕ್ಷಣೆಯನ್ನು ಇನ್ನಾರು ಮಾಡು

ವರು?" ಎಂದರು. ಆದರಿಂದ ಶ್ರೀರಾಮಚಂದ್ರನಿಗೆ ಬಹಳೇ ಆನಂದ ವಾಯಿತು. !

ಆಗ ಶ್ರೀರಾಮಚಂದ್ರನು "ಗುರುಗಳೇ, ನಾನು ಯಾರು ? ಮತ್ತು ನನ್ನ ಕರ್ತವ್ಯವೇನು ? ಎಂಬುದೇ ನನಗೆ ಗೊತ್ತಿಲ್ಲ. ಅಂದ ಮೇಲೆ ನಾನು ನಾನು ರಾಕ್ಷಸರನ್ನು ಸಂಹರಿಸುವ ಬಗೆ ಹೇಗೆ? ಕಾರಣ ನೀವು ಈ ನನ್ನ ದೇಹಕ್ಕೆ ಆತ್ಮಜ್ಞಾನವನ್ನುಂಟುಮಾಡಿಕೊಡಬೇಕು" ಆಗ ವಿಶ್ವಾಮಿತ್ರರು ವಶಿಷ್ಠರ ಬಳಿಗೆ ಬಂದು ಇವರಿಗೆ ಗುರೂಪದೇಶ ವನ್ನು ಮಾಡಲು ಹೇಳಿದರು. ಕೂಡಲೆ ವಶಿಷ್ಠರು ಶ್ರೀರಾಮಚಂದ್ರ ನನ್ನು ಮುಂದೆ ಕೂಡ್ರಿಸಿಕೊಂಡು ಗುರುಸಾಂಪ್ರದಾಯವಂತೆ ಆತನಿಗೆ ಉಪದೇಶವನ್ನು ಮಾಡಹತ್ತಿದರು. "ಎಲೈ ಶ್ರೀರಾಮಚಂದ್ರನೇ ಕೇಳು ನೀನು ಸರ್ವವ್ಯಾಪಿ ಇರುವಿ. ನಿನ್ನ ಮಾಯೆಯಿಂದ ಎಲ್ಲ ಜನರು ಮೋಹಿತರಾಗಿ ಅದರ ಬೆನ್ನು ಹತ್ತುವರು. ಆದರೆ ಜ್ಞಾನದೃಷ್ಟಿ ಯಿಂದ ನೋಡಲಾಗಿ ಎಲ್ಲವೂ ಮಿಥ್ಯವೆನಿಸುವದು. ಮಿಥ್ಯವೆಂದು ತಿಳಿಯಬೇಕೆಂದರೆ ಮೃಗಜಳದಂತೆ ಸತ್ಯವಾಗಿಯೂ ತೋರುವದು. ಕಾರಣ ಈ ಮಾಯೆಯ ಬಗ್ಗೆ ಒಂದು ಕಥೆಯನ್ನು ಹೇಳುವೆನು ಕೇಳು.

"ಹಿಂದಕ್ಕೆ ಗೌತುಮಋಷಿಗೆ ಗಾಧಿಯೆಂಬ ಬ್ರಾಹ್ಮಣನು ಶಿಷ್ಯ ನಾಗಿದ್ದನು. ಅವನು ಎಲ್ಲ ಶಾಸ್ತ್ರಗಳಲ್ಲಿಯೂ ಪ್ರವೀಣನಿದ್ದನು. ಆತನು ವಿಷ್ಣುವಿನ ಉಪಾಸಕನಿದ್ದನು ಅವನು ವಿಷ್ಣುವನ್ನು ಆರಾಧನೆಯಿಂದ ಪ್ರಸನ್ನಗೊಳಿಸಿದ್ದನು. ಮತ್ತು "ದೇವಾಧಿದೇವಾ ನಿನ್ನ ಮಾಯೆಯು ಸತ್ಯವೆಂದು ನಂಬಬೇಕಾದರೆ ಇಲ್ಲಿ ಕಾಣುವವೆಲ್ಲವೂ ನಾಶಹೊಂದು ತ್ತವೆ. ಮಿಥ್ಯವೆನ್ನ ಬೇಕಾದರೆ ಎಲ್ಲರೂ ನಿನ್ನ ಮಾಯೆಯಲ್ಲಿ ಮುಳುಗಿ ಹೋಗಿರುವರು. ಕಾರಣ ನಾನು ನಿನ್ನ ಮಾಯೆಯ ಸ್ವರೂಪವನ್ನು ಕಾಣಬೇಕೆಂಬ ಇಚ್ಛೆ ಇದೆ" ಆಗ ಭಗವಂತನು

“ನೀನು ನನ್ನ ಮಾಯೆಯಲ್ಲಿ ಸಿಲುಕಿದೆಯೆಂದರೆ ನಿನ್ನ ಪ್ರಾಣವು ಕಸ ವಿಸಿಪಡುವದು ಆಗ ನಿನ್ನನ್ನು ಯಾರು ಬಿಡಿಸುವರು?” ಎಂದನು, ಆಗ ಬ್ರಾಹ್ಮಣನು “ನಾನು ಮಾಯಾಸಾಗರದಲ್ಲಿ ಸಿಲುಕಿ ದುಃಖಿಸುತ್ತಿರು ವಾಗ್ಗೆ ನಿನ್ನ ಸ್ಮರಣೆಯು ನನಗೆ ಆಗಬೇಕು” ಎಂದು ಬೇಡಿಕೊಂಡನು.

ಕೂಡಲೆ ಆ ಗಾಥಿ ಬ್ರಾಹ್ಮಣನು ತನ್ನ ಪತ್ನಿ ಸಮೇತನಾಗಿ ಜಾಹ್ನವೀ ತೀರದಲ್ಲಿರುವ ಅರಣ್ಯಕ್ಕೆ ಬಂದನು. ಮುಂದೆ ಒಂದುದಿನ ಮಧ್ಯಾಹ್ನ ಹೊತ್ತಿನಲ್ಲಿ ಸ್ನಾನಕ್ಕೆಂದು ನದಿಗೆ ಹೋದನು. ನದಿ ಯಲ್ಲಿ ಸ್ನಾನಮಾಡುತ್ತಿರುವಾಗ ದೇವರು ತನ್ನ ಮಾಯೆಯನ್ನು ಇನ್ನೂ ತೋರಿಸಲಿಲ್ಲವಲ್ಲ ! ಎನ್ನುತ್ತಿರುವಷ್ಟರಲ್ಲಿ ಭಗವಂತನು ಆತ ನನ್ನು ತನ್ನ ಮಾಯಾಜಾಲದಲ್ಲಿ ಮುಳಿಗಿಸಿಬಿಟ್ಟನು. ಕೂಡಲೆ ಅವ ನಿಗೆ ಎಲ್ಲವೂ ಸ್ವಪ್ನದಂತೆ ಕಾಣಿಸಹತ್ತಿತು. ತಾನು ದೊಡ್ಡ ಮಹಾ ರೋಗದಿಂದ ಸತ್ತು ಯಮಪಟ್ಟಣದಲ್ಲಿ ಹೋಗಿ ಅಲ್ಲಿ ನಾನಾತರದ ಯಾತನೆಗಳನ್ನು ಅನುಭೋಗಿಸಿ ಮುಂದೆ ಚಾಂಡಾಲಯೋನಿಯಲ್ಲಿ ಜನಿಸಿದಂತಾಯಿತು. ಅಲ್ಲಿ ಕೆಟ್ಟಕರ್ಮಗಳನ್ನು ಮಾಡಿ ಹೊಟ್ಟೆ ಯನ್ನು ತುಂಬಿಕೊಳ್ಳುವಂತೆ ಕಾಣಿಸಿತು. ಈ ಪ್ರಕಾರವಾಗಿ ಎಷ್ಟೋ ಜನ್ಮಗಳನ್ನು ಹೊಂದಿ ಶೋಕಿಸುತ್ತ ಭಗವಂತನನ್ನು ಧ್ಯಾನಿಸತೊಡಗಿ ದನು. ಕೂಡಲೆ ದೇವರು ಪ್ರತ್ಯಕ್ಷನಾಗಿ “ ಎಲೈ ಬ್ರಾಹ್ಮಣಾ ನೋಡಿದಿಯಾ ನನ್ನಮಾಯೆಯನ್ನು; ಈಗ ಹೇಳು, ಮಾಯೆಯು ಸತ್ಯವೋ ಮಿಥ್ಯವೋ? ಎಂಬದನ್ನು ” ಎಂದನು. ಆಗ ಆತನು ದೇವಾಧಿದೇವನೇ ನಾನು ಮೂಢನು, ಅಜ್ಞಾನಿಯು, ಬ್ರಹ್ಮಾದಿದೇವ ತೆಗಳಿಗೆ ಸಹ ನಿನ್ನ ಮಾಯೆಯು ತಿಳಿಯದಿರುವಾಗ ನನ್ನಂಥವನ ಪಾಡೇನು? ಕಾರಣ ನೀನು ದಯ ತೋರಿ ನನ್ನನ್ನು ಉದ್ಧರಿಸಬೇ ಕೆಂದು ಬೇಡಿಕೊಂಡನು. ಆಗ ಭಗವಂತನು ಆತನಿಗೆ ಆತ್ಮಜ್ಞಾನದ ಉಪದೇಶವನ್ನು ಮಾಡಿ ಅವನನ್ನು ಉದ್ಧರಿಸಿದನು.”

ಆಗ ಶ್ರೀರಾಮಚಂದ್ರನು "ಗುರುಗಳೇ, ಮಾಯೆಯು ಎಲ್ಲಿಂದ ಉದ್ಭವಿಸಿತು? ಮಾಯೆಯ ಸ್ವರೂಪವು ನಿರ್ಗುಣವೂ ನಿರಾಕಾರವೂ ಏಕೆ ಆಗಿರುವದು ? ಮಾಯೆಯು ಮಿಥ್ಯವೆನ್ನಬೇಕಾದರೆ ನಿರ್ಗುಣಕ್ಕೆ ಸಗುಣತ್ವವು ಹೇಗೆ ಪ್ರಾಪ್ತವಾಯಿತು ? ಎಂಬುದನ್ನು ತಿಳಿಸಬೇಕು" ಎಂದು ಪ್ರಾರ್ಥಿಸಿದನು. ಆಗ ವಶಿಷ್ಠರು "ಎಲೈ, ಶ್ರೀರಾಮಚಂದ್ರನೇ, ನೀನು ಎಲ್ಲವನ್ನೂ ತಿಳಿದಿರುವಿ. ಆದರೂ ಕೂಡ ನನ್ನ ಮುಖದಿಂದ ಕೇಳಬೇಕೆನ್ನುವ ನಿನ್ನ ಇಚ್ಛೆಯಿದೆ. ಅಂದಮೇಲೆ ಹೇಳುವೆನು ಕೇಳು.

ಯಾವ ಪ್ರಕಾರವಾಗಿ ಮನುಷ್ಯನು ನಿದ್ರೆಯಿಂದ ಎಚ್ಚರಾದ ನಂತರ ಎಲ್ಲವನ್ನೂ ನೆನಸಿಕೊಳ್ಳುವನೋ ಅದೇ ಪ್ರಕಾರವಾಗಿ ಎಲ್ಲವೂ ಬ್ರಹ್ಮಾನಂದದಲ್ಲಿ ಇರುವವು. ಯಾವಾಗ ನಾನು ಬ್ರಹ್ಮನೆಂಬುವ ಧ್ವನಿಯು ಉತ್ಪನ್ನವಾಯಿತೋ ಅದೇ ಮಾಯೆಯು; ಅದಕ್ಕೆ ಮೂಲ ಪ್ರಕೃತಿ ಎನ್ನುವರು. ಅವಳು ಆದಿಪುರುಷನ ಇಚ್ಛಾ ಶಕ್ತಿಯು. ಅವಳಿಂದಲೇ ಸೃಷ್ಟಿಕಾರ್ಯವು ಉತ್ಪನ್ನವಾಯಿತು. ಸತ್ವ, ರಜ, ತಮ ಎಂಬ ಗುಣಗಳೂ ಉತ್ಪನ್ನವಾದವು. ಮುಂದೆ ಸತ್ವ ಗುಣದಿಂದ ವಿಷ್ಣುವು ಜನಿಸಿದನು ರಜೋಗುಣದಿಂದ ಬ್ರಹ್ಮನೂ, ತಮೋ ಗುಣದಿಂದ ರುದ್ರನೂ ಜನಿಸಿದನು. ಮುಂದೆ ಆ ವಿರಾಟ ಪುರುಷನ ಅಂಗಾಲಿನಿಂದ ಟೊಂಕವರೆಗೆ ಪಾತಾಳಲೋಕವು ಹುಟ್ಟಿತು. ಹೊಟ್ಟೆಯಿಂದ ಆಕಾಶವೂ, ಜಠರಾಗ್ನಿಯಿಂದ ವಡವಾಗ್ನಿಯೂ, ಹುಟ್ಟಿದವು. ಆ ವಿರಾಟಪುರುಷನ ಟೊಂಕದ ಭಾಗದಿಂದ ಈ ಭೂಮಿಯು ಉತ್ಪನ್ನವಾಯಿತು. ಗುಪ್ತಸ್ಥಾನದಲ್ಲಿ ನೈಋತ್ಯ ಲೋಕವು ಹುಟ್ಟಿತು; ಆತನ ಹೊಟ್ಟೆಯೊಳಗಿನಭಾಗವೇ ಸಪ್ತ ಸಮುದ್ರಗಳು ಆದವು. ಅವನ ಎದೆಯಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳು ಉದ್ಭವಿಸಿದವು. ಅವನ ದವಡೆಯಿಂದ ಯಮಲೋಕವೂ, ತಲೆಯಿಂದ ಬ್ರಹ ಲೋಕವೂ, ಉತ್ಪನ್ನ

ವಾದವು. ಆ ವಿರಾಟಪುರುಷನ ಕಣ್ಣಿನಿಂದ ಸೂರ್ಯನು ಹುಟ್ಟಿದನು. ಆತನಿಂದಲೇ ಈ ಪೃಥ್ವಿಯೆಲ್ಲ ಬೆಳಗುತ್ತಿರುವದು. ಅವನ ಮನಸ್ಸಿನಿಂದಲೇ ಚಂದ್ರಮನು ಹುಟ್ಟಿದನು. ಅವನು ಕಣ್ಣು ಮುಚ್ಚಿದರೆ ರಾತ್ರಿಯಾಗುವದು, ತೆಗೆದಕೂಡಲೇ ಬೆಳಗಾಗುವದು. ಆತನ ಮೈಮೇಲಿನ ಕೂದಲುಗಳೆಲ್ಲ ವನಸ್ಪತಿಗಳಾಗಿ ಜನಿಸಿದವು. ಈ ಪ್ರಕಾರವಾಗಿ ಆತನಿಂದ ಸೃಷ್ಟಿಯು ನಿರ್ಮಾಣವಾಯಿತು.

ಹೀಗೆ ವಶಿಷ್ಠರು ಶ್ರೀರಾಮಚಂದ್ರನಿಗೆ ವಿರಾಟಪುರುಷನ ಸ್ವರೂಪ ಜ್ಞಾನವನ್ನು ಹೇಳುತ್ತಿರುವಾಗ ಶ್ರೀರಾಮಚಂದ್ರನಿಗೆ ಸಮಾಧಿಯು ಹತ್ತಿತು. ಆಗ ವಿಶ್ವಾಮಿತ್ರ—ದಶರಥರು ಶ್ರೀರಾಮನ ಈ ಅವಸ್ಥೆಯನ್ನು ಕಂಡು ಗಾಬರಿಯಾದರು. ಆಗ ಅವರಿಗೆ ಶ್ರೀರಾಮಚಂದ್ರನ ಅವತಾರ ಕೃತ್ಯವು ಈಗಲೇ ಮುಗಿಯುವದೋ ಏನೋ ಎಂಬಂತೆ ಭಾಸವಾಗಹತ್ತಿತು. ಆಗ ವಿಶ್ವಾಮಿತ್ರರು ವಶಿಷ್ಠರಕಡೆಗೆ ನೋಡಿ ಶ್ರೀರಾಮಚಂದ್ರನನ್ನು ಎಚ್ಚರಗೊಳಿಸಲು ಹೇಳಿದರು. ಕೂಡಲೆ ವಶಿಷ್ಠರು ಆತನಿಗೆ ತಾನು ಅವತರಿಸಿದ ಕಾರಣವನ್ನು ಜ್ಞಾಪಕಕ್ಕೆ ತಂದುಕೊಟ್ಟರು; ಕೂಡಲೆ ಅವನು ಎಚ್ಚತ್ತನು. ಆಗ ವಶಿಷ್ಠರು "ಇದೆಲ್ಲ ಮಾಯೆಯು ನಿನ್ನದೇ" ಎಂದು ಹೇಳಿ ಬ್ರಹ್ಮಾನಂದದಲ್ಲಿ ಲೀನರಾದರು. ಮುಂದೆ ಕೆಲಹೊತ್ತಿನಮೇಲೆ ಎಚ್ಚತ್ತು ಶ್ರೀರಾಮಚಂದ್ರನಿಗೆ ಆತ್ಮಜ್ಞಾನದ ಉಪದೇಶವನ್ನು ಕೊಟ್ಟು ವಿಶ್ವಾಮಿತ್ರರ ಸಂಗಡ ಕಳುಹಿಸಿಕೊಟ್ಟರು.

ಮುಂದೆ ವಿಶ್ವಾಮಿತ್ರರು ರಾಮ—ಲಕ್ಷ್ಮಣರನ್ನು ಕರೆದುಕೊಂಡು ಗಂಗಾತೀರದ ಸಮೀಪಕ್ಕೆ ಬಂದರು. ಅಲ್ಲಿ ಅವರು ಸ್ನಾನ-ಸಂಧ್ಯಾದಿ ಕರ್ಮಗಳನ್ನು ತೀರಿಸಿದನಂತರ ವಿಶ್ವಾಮಿತ್ರರು ಶ್ರೀರಾಮಚಂದ್ರನಿಗೆ ಧನುರ್ವಿದ್ಯೆಯನ್ನು ಕಲಿಸಿದರು. ಕೂಡಲೆ ಶಸ್ತ್ರದೇವತೆಗಳು ಪ್ರಸನ್ನರಾಗಿ ಶ್ರೀರಾಮಚಂದ್ರನಲ್ಲಿ ಲೀನರಾದರು. ಮುಂದೆ ವಿಶ್ವಾಮಿತ್ರರು

ರಾಮ–ಲಕ್ಷ್ಮಣರೊಡಗೂಡಿ ಅದೇ ಮಾರ್ಗವಾಗಿ ಹೊರಟರು. ಆಗ ವಿಶ್ವಾಮಿತ್ರರು "ಎಲೈ ಶ್ರೀರಾಮಚಂದ್ರನೇ, ಈ ಮಾರ್ಗದಲ್ಲಿ ತ್ರಾಟಿಕೆ ಯೆಂಬ ರಾಕ್ಷಸಿ ಇರುವಳು. ಅವಳು ಈ ಮಾರ್ಗದಿಂದ ಹೋಗುವ ಜನರನ್ನು ಮುರಿದು ತಿನ್ನುವಳು. ಕಾರಣ ನಾವೆಲ್ಲರೂ ಬಹಳ ಎಚ್ಚರದಿಂದ ಹೋಗಬೇಕು" ಆಗ ಶ್ರೀರಾಮಚಂದ್ರನು "ಗುರುಗಳೇ, ತಮ್ಮ ಕೃಪಾದೃಷ್ಟಿ ಇದ್ದರೆ ಆ ತ್ರಾಟಿಕೆಯು ನಮಗೇನು ಮಾಡು ವಳು?" ಎಂದನು. ಇಷ್ಟರೊಳಗಾಗಿ ಕೆಟ್ಟ ಧ್ವನಿಯಿಂದ ಚೀರುತ್ತ ಮಣ್ಣನ್ನು ತೂರುತ್ತ "ಆ" ಎಂದು ಬಾಯನ್ನು ತೆರೆದು ಅಲ್ಲಿಗೆ ಬಂದೇಬಿಟ್ಟಳು. ಕೂಡಲೆ ಶ್ರೀರಾಮಚಂದ್ರನು ತನ್ನ ಗುರುಸ್ಮರಣೆ ಯನ್ನು ಮಾಡುತ್ತ ಧನುಷ್ಯಕ್ಕೆ ಬಾಣವನ್ನು ಹೂಡಿ ಗುರಿಯಿಟ್ಟು ಬಿಟ್ಟನು. ಆಗ ಅದು ಅವಳ ಎದೆಯಲ್ಲಿ ನಟ್ಟಿತು. ಕೂಡಲೆ ಅವಳು ಧೊಪ್ಪನೇ ನೆಲಕ್ಕುರುಳಿ ಕೆಟ್ಟ ಧ್ವನಿಯಿಂದ ಚೀರುತ್ತ, ಒದ್ದಾಡುತ್ತ ಪ್ರಾಣವನ್ನು ಬಿಟ್ಟಳು. ಆಗ ವಿಶ್ವಾಮಿತ್ರರು ಆತನ ಅಸ್ತ್ರವಿದ್ಯೆಯನ್ನು ನೋಡಿ ಸಂತುಷ್ಟರಾದರು. ಮುಂದೆ ಅವರೆಲ್ಲರು ಸುರಕ್ಷಿತವಾಗಿ ಬಂದು ಆಶ್ರಮಕ್ಕೆ ಮುಟ್ಟಿದರು. ಕೂಡಲೆ ವಿಶ್ವಾಮಿತ್ರರು ಒಂದು ಸುಮುಹೂರ್ತದಲ್ಲಿ ಯಜ್ಞವನ್ನು ಪ್ರಾರಂಭಿಸಿದರು. ಈ ವರ್ತ ಮಾನವು ಮಾರೀಚ–ಸುಬಾಹು ಎಂಬ ರಾಕ್ಷಸರಿಗೆ ತಿಳಿದಕೂಡಲೆ ಅವರು ರಾಕ್ಷಸರ ಅಪಾರ ಸೇನೆಯೊಂದಿಗೆ ಬಂದು ಯಜ್ಞಕ್ಕೆ ವಿಘ್ನ ವನ್ನುಂಟುಮಾಡಹತ್ತಿದರು. ಆಗ ಶ್ರೀರಾಮಚಂದ್ರನು ಅನಂತ ರೂಪಗಳನ್ನು ಧರಿಸಿ ಆ ರಾಕ್ಷಸರನ್ನು ಸಂಹರಿಸಿದನು. ಮತ್ತು ಒಂದು ಬಾಣದ ಹೊಡೆತದಿಂದ ಸುಬಾಹುನನ್ನು ಕೊಂದನು. ಮತ್ತೊಂದು ಬಾಣವನ್ನು ಗುರಿಯಿಟ್ಟು ಅದರಿಂದ ಮಾರೀಚನನ್ನು ಆಕಾಶಕ್ಕೆ ಹಾರಿ ಸಿಬಿಟ್ಟನು. ಆಗ ಮಾರೀಚನು ಧೊಪ್ಪನೇ ಸಮುದ್ರದಲ್ಲಿ ಹೋಗಿ ಬಿದ್ದನು. ಇತ್ತ ಯಜ್ಞವು ಯಥಾಸಾಂಗವಾಗಿ ಸಾಗಿತು.

## ೮. ಸೀತಾ ಕಲ್ಯಾಣ

ಮಿಥಿಲಾ ಪಟ್ಟಣದಲ್ಲಿ ಜನಕನೆಂಬ ರಾಜನು ರಾಜ್ಯವಾಳುತ್ತಿದ್ದನು. ಆತನು ಸತ್ಯವಂತನೂ, ಗುಣವಂತನೂ, ನ್ಯಾಯವಂತನೂ ಇದ್ದನು. ತನ್ನ ಪ್ರಜೆಗಳನ್ನು ಮಕ್ಕಳಂತೆ ಪಾಲಿಸುತ್ತಿದ್ದನು. ಹೀಗಿರುವಾಗ ಒಮ್ಮೆ ಆತನ ರಾಜ್ಯದಲ್ಲಿ ಹನ್ನೆರಡು ವರ್ಷಗಳ ಪರ್ಯಂತ ಬರಗಾಲವು ಬಿದ್ದಿತು. ಆಗ ಎಲ್ಲ ಪ್ರಜೆಗಳು ಕೂಡಿ ಜನಕರಾಜನ ಬಳಿಗೆ ಬಂದು " ಪ್ರಭುಗಳೇ, ನಾವು ಹೊಟ್ಟೆಗಿಲ್ಲದೆ ಸಾಯುತ್ತಿರುವೆವು. ಕಾರಣ ತಾವು ಹೇಗಾದರೂ ಮಾಡಿ ನಮ್ಮನ್ನು ಉಳಿಸಬೇಕು " ಎಂದು ಬೇಡಿಕೊಂಡರು. ಆಗ ಆತನು ಅಂತರ್ಜ್ಞಾನದಿಂದ ಎಲ್ಲ ಸಂಗತಿಯನ್ನು ತಿಳಿದುಕೊಂಡನು. ಕೂಡಲೆ ಒಂದು ಯಜ್ಞವನ್ನು ಪ್ರಾರಂಭಿಸಿ ಎಲ್ಲ ಯಜ್ಞದೇವತೆಗಳನ್ನು ಸಂತೋಷಪಡಿಸಿದನು. ಆಗ ಆ ಯಜ್ಞದೇವತೆಗಳು " ಎಲೈ ಅರಸನೇ, ನೀನು ನಿನ್ನ ಪ್ರಜೆಗಳ ಸಲುವಾಗಿ ಈ ರೀತಿ ಸಹಾನುಭೂತಿಯನ್ನು ತೋರಿಸಿದ್ದಕ್ಕೆ ನಾವು ನಿನಗೊಂದು ಉಪಾಯವನ್ನು ಹೇಳುವೆವು ಕೇಳು—ನೀನು ಈ ಭೂಮಿಯಲ್ಲಿ ನೇಗಿಲವನ್ನು ಹೂಡಿವರೆ ಬರಗಾಲವು ಅಳಿದು ಹೋಗಿ ಭೂದೇವಿಯು ಸಂತುಷ್ಟಳಾಗಿ ನೀನು ಬೇಡಿದ್ದನ್ನು ಕೊಡುವಳು " ಎಂದು ಹೇಳಿ ಅವರು ಗುಪ್ತರಾದರು. ಕೂಡಲೆ ಜನಕನು ನೇಗಿಲವನ್ನು ತರಿಸಿ ಅದನ್ನು ಶಾಸ್ತ್ರೋಕ್ತ ವಿಧಿಯಿಂದ ಪೂಜಿಸಿ ಭೂಮಿಯನ್ನು ನೇಗಿಲದಿಂದ ಹೊಡೆದನು. ಆಗ ಅದು ಸ್ವಲ್ಪ ಮುಂದಕ್ಕೆ ಹೋಗುವಷ್ಟರಲ್ಲಿ ಅದಕ್ಕೆ ಒಂದು ಪೆಟ್ಟಿಗೆಯು ತಗುಲಿ ಮೇಲಕ್ಕೆ ಬಂದಿತು. ಕೂಡಲೆ ಭೂದೇವಿಯು ಪ್ರತ್ಯಕ್ಷಳಾಗಿ:— " ಎಲೇ ಜನಕ ರಾಜನೇ, ಇಗೋ ಈ ಪೆಟ್ಟಿಗೆಯನ್ನು; ಇದರಲ್ಲಿ ನನ್ನ ಮಗ

ಳಿರುವಳು. ಇವಳನ್ನು ನೀನು ಸಲುಹಿದರೆ ನಿನ್ನ ರಾಜ್ಯದಲ್ಲೆಲ್ಲ ಶಾಂತಿ ಯುಂಟಾಗಿ ಎಲ್ಲಕಡೆಗೂ ಆನಂದವಾಗುವದು'' ಎಂದು ಹೇಳಿ ಅವಳು ಅದೃಶ್ಯಳಾದಳು. ಆಗ ಜನಕನು ಪೆಟ್ಟಿಗೆಯೊಳಗಿದ್ದ ಆ ಮಗುವನ್ನು ಎತ್ತಿ ಕೊಂಡು ಬಹಳ ಸಂಭ್ರಮದಿಂದ ಮನೆಗೆ ಬಂದನು. ಆ ಬಾಲಿಕೆಯು ಜನ ಕನಿಂದ ಪೋಷಿತಳಾದ ಕಾರಣ ಎಲ್ಲರೂ ಆಕೆಯನ್ನು "ಜಾನಕಿ" ಎಂದು ಕರೆಯಹತ್ತಿದರು. ಇತ್ತ ಜಾನಕಿಯು ಶುಕ್ಲಪಕ್ಷದ ಚಂದ್ರಮನಂತೆ ದಿನದಿನಕ್ಕೆ ಬೆಳೆಯಹತ್ತಿದಳು. ಆಗ ಜನಕನ ರಾಜ್ಯದಲ್ಲಿಯ ಬರ ಗಾಲವೆಲ್ಲವೂ ಅಳಿದು ಹೋಗಿ ಎಲ್ಲಕಡೆಗೂ ಸುಖ—ಸಮೃದ್ಧಿಯಾ ಯಿತು. ಒಂದುದಿನ ಜಾನಕಿಯು ತನ್ನ ಗೆಳತಿಯರಿಂದಾಡುತ್ತಿರುವಾಗ ಜನಕರಾಜನ ದರ್ಶನಕ್ಕೆಂದು ಪರಶುರಾಮರು ಅಲ್ಲಿಗೆ ಬಂದರು; ಕೂಡಲೆ ಪರಶುರಾಮರು ತಮ್ಮ ಧನುಷ್ಯವನ್ನು ಒಂದು ಮೂಲೆಯ ಲ್ಲಿಟ್ಟು ಜನಕರಾಜನ ಸಂಗಡ ಕೆಲವೊಂದು ನಿಮಿಷ ಮಾತನಾಡುತ್ತ ಕುಳಿತರು. ಆ ಸಮಯದಲ್ಲಿ ಜಾನಕಿಯು ಆ ಶಿವಧನುಷ್ಯವನ್ನು ತೆಗೆದುಕೊಂಡು ಕುದುರೆಯನ್ನು ಮಾಡಿ ಆಡುತ್ತಿರುವಾಗ ಪರಶು ರಾಮರು ಅಲ್ಲಿಗೆ ಬಂದರು. ಅವರನ್ನು ಕಂಡು ಜಾನಕಿಯು ನಾಚಿ ಕೆಯಿಂದ ಆ ಧನುಷ್ಯವನ್ನು ಅಲ್ಲಿಯೇ ಒಗೆದು ಓಡಿ ಹೋದಳು. ಇದೆಲ್ಲ ವನ್ನು ಕಂಡು ಪರಶುರಾಮರು ಬೆರಗಾಗಿ "ಇವಳು ಸಾಕ್ಷಾತ್ ಲಕ್ಷ್ಮೀ ದೇವಿಯೇ ಆಗಿರಬಹುದು" ಎಂದು ನಂಬಿದರು. "ಇಲ್ಲವಾದರೆ ಈ ಶಿವಧನುಷ್ಯವನ್ನು ಎರಡನೇಯವರು ಕೈಯಿಂದ ಎತ್ತಲು ಸಾಧ್ಯವೇ" ಎಂದುಕೊಂಡರು. ಕೂಡಲೆ ಜನಕರಾಜನಬಳಿಗೆ ಬಂದು "ರಾಜನೇ ಕೇಳು:— ಈ ಧನುಷ್ಯದಿಂದ ಯಾವನು ಬಾಣ ಹೂಡು ವನೋ ಅವನಿಗೆ ಇವಳನ್ನು ಕೊಟ್ಟು ಲಗ್ನ ಮಾಡು" ಎಂದು ಹೇಳಿ ಹೊರಟುಹೋದರು.

ಮುಂದೆ ಜನಕರಾಜನು ಇದೇ ಪ್ರಕಾರವಾಗಿ ಪಣವನ್ನು ತೊಟ್ಟು ಜಾನಕಿಯ ಸ್ವಯಂವರವನ್ನು ಹೂಡಿ, ಎಲ್ಲಕಡೆಗೂ ಸ್ವಯಂವರ ಪತ್ರಿಕೆಗಳನ್ನು ಕಳಿಸಿದನು. ಆಗ ವಿಶ್ವಾಮಿತ್ರರಿಗೂ ಒಂದು ಪತ್ರಿಕೆಯು ಬಂದು ತಲುಪಿತು. ಕೂಡಲೆ ಅವರು ಜಾನಕಿಯ ಸ್ವಯಂವರಕ್ಕೆಂದು ರಾಮ—ಲಕ್ಷ್ಮಣರನ್ನು ಕರೆದುಕೊಂಡು ಮಿಥಿಲಾವತಿಗೆ ಹೊರಟರು.

ಬರಬರುತ್ತ ದಾರಿಯಲ್ಲಿ ಶ್ರೀರಾಮಚಂದ್ರನ ಪಾದಧೂಳಿಯು ಒಂದು ಶಿಲೆಯಮೇಲೆ ಬೀಳಲು ಅಲ್ಲಿ ಒಂದು ಸುಂದರ ತರುಣಿಯ ರೂಪವನ್ನು ಹೊಂದಿ ಕೂಡಲೆ ಶ್ರೀರಾಮಚಂದ್ರನ ಚರಣಕ್ಕೆ ಬಂದೆರಗಿದಳು. ರಾಮಚಂದ್ರನು ವಿಶ್ವಾಮಿತ್ರರನ್ನು ಕುರಿತು:— "ಗುರುಗಳೇ ಇವಳು ಯಾರು? ಇವಳ ವೃತ್ತಾಂತವೇನು?" ಎಂದು ಕೇಳಿದನು. ಆಗ ವಿಶ್ವಾಮಿತ್ರರು "ಇವಳು ಬ್ರಹ್ಮದೇವರ ಮಗಳು; ಇವಳ ರೂಪಕ್ಕೆ ಮೆಚ್ಚಿ ಎಲ್ಲ ದೇವತೆಗಳು ಮದುವೆಯಾಗಲು ಇಚ್ಛಿಸಿದರು" ಆಗ ಇಂದ್ರನೂ ಕೂಡ ಇವಳನ್ನು ಮದುವೆಯಾಗಲು ಬಂದನು. ಕೂಡಲೆ ಬ್ರಹ್ಮದೇವನು "ಎರಡು ಪ್ರಹರದೊಳಗಾಗಿ ಯಾರು ಪೃಥ್ವಿ ಪ್ರದಕ್ಷಿಣೆಯನ್ನು ಹಾಕುವರೋ ಅವರಿಗೆ ನನ್ನ ಮಗಳನ್ನು ಕೊಡುವೆನು" ಎಂದು ಪಣ ಕಟ್ಟಿದನು. ಆಗ ಎಲ್ಲ ದೇವತೆಗಳು ಪೃಥ್ವಿ ಪ್ರದಕ್ಷಿಣೆಗೆಂದು ಹೊರಟರು; ಇತ್ತ ಗೌತಮಋಷಿಯು ತನ್ನ ಆಶ್ರಮದಲ್ಲಿ ನಿತ್ಯ—ನೈಮಿತ್ತಿಕ ಕರ್ಮಗಳನ್ನು ತೀರಿಸಿಕೊಂಡು ಸ್ವಸ್ಥ ಚಿತ್ತದಿಂದ ಕುಳಿತಿದ್ದನು. ಅಷ್ಟರಲ್ಲಿ ನಾರದರು ಬಂದು ಬ್ರಹ್ಮಲೋಕದಲ್ಲಿಯ ಎಲ್ಲ ವೃತ್ತಾಂತವನ್ನು ಹೇಳಿ "ಎಲೈ ಗೌತಮನೇ ಏಳು "ನೋಡು ನಿನ್ನ ಕಪಿಲಾಧೇನುವು ಈಯುತ್ತಿರುವದು" ಕೂಡಲೆ ಗಂಗಾಸ್ನಾನವನ್ನು ಮಾಡಿಬಂದು ಅದಕ್ಕೆ ಮೂರುಬಾರಿ ಪ್ರದಕ್ಷಿಣೆ ಹಾಕಿದರೆ ಪೃಥ್ವಿ ಪ್ರದಕ್ಷಿಣೆಯ ಪುಣ್ಯವು ನಿನಗೆ ಬರುವದು" ಎಂದು

ಹೇಳಿ ಆತನ ಕಡೆಯಿಂದ ಎಲ್ಲವನ್ನು ಮಾಡಿಸಿ ಸಂಗಡ ಕರೆದು ಕೊಂಡು ಬ್ರಹ್ಮಲೋಕಕ್ಕೆ ಬಂದರು. ಮತ್ತು ಎಲ್ಲ ವೃತ್ತಾಂತವನ್ನು ಬ್ರಹ್ಮದೇವನಿಗೆ ಅರುಹಿದರು. ಆಗ ಅಹಿಲ್ಯೆಯು ಬಂದು ಗೌತಮನ ಕೊರಳಿಗೆ ಮಾಲೆಯನ್ನು ಹಾಕಿದಳು. ಮುಂದೆ ತುಸು ಹೊತ್ತಿನಲ್ಲಿಯೇ ಇಂದ್ರಾದಿ ದೇವತೆಗಳು ಬಂದರು. ಇಂದ್ರನು ಇಲ್ಲಿ ನಡೆದಿರುವ ಸಂಗತಿಯನ್ನು ಕಂಡು ಬಹಳೇ ಕೋಪಗೊಂಡು "ನಾನು ಒಂದು ದಿವಸವಾದರೂ ಅಹಿಲ್ಯೆಯನ್ನು ಉಪಭೋಗಿಸುವೆನೆಂದು" ಹೇಳಿ ಹೊರಟು ಹೋದನು.

ಮುಂದೆ ಕೆಲದಿವಸದನಂತರ ಒಂದುದಿನ ಗೌತಮಋಷಿಗಳು ಅನುಷ್ಠಾನಕ್ಕೆಂದು ಗಂಗಾತೀರಕ್ಕೆ ಹೋಗಿದ್ದರು. ಆಗ ಇಂದ್ರನು ಕಪಟವೇಷದಿಂದ ಬಂದು ಅವಳನ್ನು ಉಪಭೋಗಿಸಿದನು. ಕೂಡಲೆ ಅಂತರ್ಜ್ಞಾನದೃಷ್ಟಿಯಿಂದ ಗೌತಮಋಷಿಗೆ ಎಲ್ಲವೂ ತಿಳಿದುಬಂದಿತು ಆಗ ಅವರು ಬಹಳ ಕೋಪದಿಂದ "ಎಲೇ ದುಷ್ಟೇ, ನೀನು ಸಹಸ್ರ ವರ್ಷ ಪರ್ಯಂತ ಶಿಲೆಯಾಗಿ ಬೀಳು" ಎಂದು ಶಾಪ ಕೊಟ್ಟರು. ಆಗ ಅವಳು ಬಹಳ ದುಃಖದಿಂದ ಅವರನ್ನು ಪರಿಪರಿಯಾಗಿ ಬೇಡಿ ಕೊಂಡಳು. ಕೂಡಲೆ ಅವರು "ಶ್ರೀರಾಮಚಂದ್ರನು ಈ ದಾರಿಯಿಂದ ಹೋಗುತ್ತಿರುವಾಗ ಆತನ ಪಾದಧೂಳಿಯ ಸ್ಪರ್ಶದಿಂದ ನಿನ್ನ ಉದ್ಧಾರವಾಗುವದು" ಅದರಂತೆ ಅವರು ಇಂದ್ರನಿಗೂ ಶಾಪವಿತ್ತರು "ಇಂದ್ರಾ, ನೀನು ಅತಿ ಕಾಮಿಯಾದ್ದರಿಂದ ಸಹಸ್ರ ಕಣ್ಣುಳ್ಳ ನವಿಲಿನ ರೂಪವನ್ನು ಹೊಂದು" ಎಂದು ಹೇಳಿದರು. ಆಗ ಎಲ್ಲ ದೇವತೆಗಳು ಕೂಡಿ ಉಶ್ಶಾಪವನ್ನು ಬೇಡಿಕೊಂಡರು. ಗೌತಮರು ತಪಸ್ಸಿಗಾಗಿ ಬದರಿಕಾಶ್ರಮಕ್ಕೆ ಹೊರಟುಹೋದರು. ರಾಮಚಂದ್ರಾ ಅವಳೇ ಈ ಅಹಲ್ಯೆಯು" ಎಂದು ವಿಶ್ವಾಮಿತ್ರರು ಹೇಳಿದರು.

ಇತ್ತ ಗೌತಮಋಷಿಗೆ ಅಂತಜ್ಞಾ೯ನದಿಂದ ಪತ್ನಿ ಉದ್ಧಾರವಾದುದು ತಿಳಿದು ಪತ್ನಿ ಸಮೇತನಾಗಿ ಅಲ್ಲಿಗೆ ಬಂದು ಶ್ರೀರಾಮಚಂದ್ರನಿಗೆ ಹರಿಸಿ ಹೊರಟುಹೋದರು. ಮುಂದೆ ವಿಶ್ವಾಮಿತ್ರರು ಶ್ರೀರಾಮ-ಲಕ್ಷ್ಮಣರಿಂದ ಕೂಡಿ ಮಿಥಿಲೆಗೆ ಬಂದರು.

ವಿಶ್ವಾಮಿತ್ರರು ಬಂದ ಸಂಗತಿಯು ಜನಕರಾಜನಿಗೆ ತಿಳಿದ್ದ ಕೂಡಲೆ ಆತನು ಮುಂದೆ ಹೋಗಿ ಅವರನ್ನು ಆದರದಿಂದ ಬರಮಾಡಿಕೊಂಡನು. ಮತ್ತು ರಾಮ—ಲಕ್ಷ್ಮಣರನ್ನು ಕರೆದುಕೊಂಡು " ಈ ಸುಕುಮಾರರು ಯಾರು?" ಎಂದು ವಿಚಾರಿಸಿದನು. ಆಗ ವಿಶ್ವಾಮಿತ್ರರು ಎಲೈ ಜನಕರಾಜನೇ ಇವರು ಅಯೋಧ್ಯೆಯ ಅರಸನಾದ ದಶರಥರಾಜನ ಮಕ್ಕಳು. ಇವರನ್ನು ನನ್ನ ಯಜ್ಞ ರಕ್ಷಣೆಯಸಲುವಾಗಿ ಕರೆದುಕೊಂಡುಬಂದಿದ್ದೆನು. ಇವರಿಂದ ನನ್ನ ಯಜ್ಞವು ಯಥಾಸಾಂಗವಾಗಿ ಸಾಗಿತು " ಎಂದು ಹೇಳಿದರು.

ಮರುದಿವಸ ಸೀತಾಸ್ವಯಂವರದ ಸಲುವಾಗಿ ದೇಶದೇಶಗಳಿಂದ ಎಲ್ಲ ಅರಸರು ಬಂದು ಕೂಡಿದರು. ಸ್ವಯಂವರ ಮಂಟಪವು ಬಹಳೇ ಸುಂದರವಾಗಿ ಕಟ್ಟಲ್ಪಟ್ಟಿತ್ತು. ಅಲ್ಲಿ ಎಲ್ಲ ತರಹದ ಜನರಿಗೆ ಕೂಡಲು ವ್ಯವಸ್ಥೆ ಮಾಡಲ್ಪಟ್ಟಿತ್ತು. ಕೂಡಲೆ ಸುಮುಹೂರ್ತದಲ್ಲಿ ಸೀತಾಸ್ವಯಂವರವು ಪ್ರಾರಂಭವಾಯಿತು. ಆಗ ಎಲ್ಲ ಅರಸರು ಬಂದು ತಮ್ಮ ತಮ್ಮ ಆಸನದಲ್ಲಿ ಕುಳಿತರು. ಮತ್ತು ಋಷಿಸಮುದಾಯವು ಒತ್ತಟ್ಟಿಗೆ ಕುಳಿತಿತು ಆ ಋಷಿ ಸಮುದಾಯದಲ್ಲಿ ರಾಮ-ಲಕ್ಷ್ಮಣರ ಸಮೇತರಾಗಿ ವಿಶ್ವಾಮಿತ್ರರು ಬಂದು ಕುಳಿತರು. ರಾಮ-ಲಕ್ಷ್ಮಣರನ್ನು ಕಂಡೊಡನೆ ಅಲ್ಲಿ ಕುಳಿತಿರುವ ಬ್ರಾಹ್ಮಣರೆಲ್ಲರೂ ಬೆರಗಾಗಿ ನೋಡಹತ್ತಿದರು.

ಅಷ್ಟರಲ್ಲಿ ಲಂಕಾಧೀಶನಾದ ರಾವಣನು ಬಂದು ತಲುಪಿದನು ಆಗ ಎಲ್ಲರೂ ಗಾಬರಿಗೊಂಡರು. ಕೂಡಲೆ ಆ ಶಿವಧನುಷ್ಯವನ್ನು ಗಾಡಿಯ ಮೇಲಿಟ್ಟುಕೊಂಡು ಎಂಟು ಸಾವಿರ ಜನರು ಎಳೆಯುತ್ತ ಸ್ವಯಂವರ ಮಂಟಪದಲ್ಲಿ ತಂದಿಳಿಸಿದರು. ಮುಂದೆ ಜಾನಕಿಯು ವರಮಾಲೆಯನ್ನು ಹಿಡಿದುಕೊಂಡು ಸ್ವಯಂವರ ಮಂಟಪಕ್ಕೆ ಬಂದಳು.

ಆ ಶಿವಧನುಷ್ಯನ್ನು ಕಂಡಕೂಡಲೆ ಎಲ್ಲ ಜನರು ಗಾಬರಿಯಿಂದ ಕುಳಿತ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಆಗ ಲಂಕಾಧಿಪತಿಯಾದ ರಾವಣನು ಮುಂದೆ ಬಂದು “ ಎಲೈ ಜನಕರಾಜನೇ, ನೀನು ನನಗೆ ಸ್ವಯಂವರ ಪತ್ರಿಕೆಯನ್ನು ಕಳಿಸದಿದ್ದರೂಕೂಡ ನಾನು ಇಲ್ಲಿಗೆ ಬಂದಿರುವೆನು. ಇಲ್ಲಿರುವ ಶಿವಧನುಷ್ಯವನ್ನು ಭಂಗಿಸಿ ನಿನ್ನ ಮಗಳಾದ ಜಾನಕಿಯನ್ನು ವರಿಸುವೆನು ” ಎಂದು ಬಹಳ ಹೆಮ್ಮೆಯಿಂದ ಹೇಳಿ ಅದನ್ನು ಎತ್ತಲು ಅದು ಆತನ ಮೈಮೇಲೆ ಬಿದ್ದಿತು; ಆಗ ರಾವಣನು ಅದರ ಕೆಳಗೆ ಸಿಕ್ಕು ಬಹಳ ಒದ್ದಾಡಿದನು. ಕೂಡಲೆ ಜನಕರಾಜನು ಜಾನಕಿಯನ್ನು ಕರೆದು ಅದನ್ನು ತೆಗೆದಿಡಲು ಹೇಳಿದನು. ಆಗ ಅವಳು ಬಂದು ಆ ಧನುಷ್ಯವನ್ನು ಎತ್ತಿಟ್ಟಳು. ಕೂಡಲೆ ರಾವಣನು ಅಪಮಾನ ಹೊಂದಿ ಅಲ್ಲಿಂದ ಓಡಿಹೋದನು.

ಮುಂದೆ ಋಷಿ ಸಮುದಾಯದಲ್ಲಿ ಕುಳಿತಿರುವ ರಾಮಚಂದ್ರನನ್ನು ವಿಶ್ವಾಮಿತ್ರರು ಎಬ್ಬಿಸಿ ಶಿವಧನುಷ್ಯದ ಬಳಿಗೆ ಕಳಿಸಿದರು. ಆಗ ರಾಮನು ಮನದಲ್ಲಿಯೇ ಗುರುಸ್ಮರಣೆಯನ್ನು ಮಾಡಿ ಅಲ್ಲಿ ಕುಳಿತಿರುವ ವಿಶ್ವಾಮಿತ್ರರಿಗೆ ನಮಿಸಿ ಆ ಧನುಷ್ಯವನ್ನು ಎತ್ತಿ ಬಾಣವನ್ನು ಹೂಡುವಷ್ಟರಲ್ಲಿ ಅದು ಮುರಿದು ಬಿದ್ದಿತು. ಅದರ ಸಪ್ಪಳದಿಂದ ಎಲ್ಲ ಜನರು



ಭಗ್ನೀಶಕಾರ್ಮುಕ ರಾಮ

ಮೂರ್ಛೆಹೊಂದಿದರು. ಮತ್ತು ತುಸು ಸಮಯದಲ್ಲಿಯೇ ಎಚ್ಚತ್ತರು ಕೂಡಲೆ ಜಾನಕಿಯು ಶ್ರೀರಾಮಚಂದ್ರನ ಕೊರಳಿಗೆ ವರಮಾಲೆಯನ್ನು ಹಾಕಿದಳು. ಮುಂದೆ ಜನಕರಾಜನು ಕುಂಕುಮಪತ್ರಿಕೆಯನ್ನು ಕೊಟ್ಟು ಒಬ್ಬ ಬ್ರಾಹ್ಮಣನನ್ನು ಅಯೋಧ್ಯೆಗೆ ದಶರಥರಾಜನನ್ನು ಕರೆಯಲು ಕಳುಹಿಸಿದನು. ಆಗ ದಶರಥನು ತನ್ನ ಎಲ್ಲ ಪರಿವಾರ

ದೊಂದಿಗೆ ಮಿಥಿಲೆಗೆ ಬಂದನು. ಮುಂದೆ ಜನಕರಾಜನು ಶ್ರೀರಾಮ ಚಂದ್ರನಿಗೆ ಜಾನಕಿಯನ್ನೂ, ಲಕ್ಷ್ಮಣನಿಗೆ ಉರ್ಮಿಳೆಯನ್ನೂ, ಭರತ-ಶತ್ರುಘ್ನರಿಗೆ ಮಾಂಡವಿ ಶ್ರುತಕೀರ್ತಿಯರನ್ನೂ ಕೊಟ್ಟು ಬಹಳ ವಿಜೃಂಭಣೆಯಿಂದ ಲಗ್ನ ಸಮಾರಂಭವನ್ನು ಜರುಗಿಸಿದನು. ಮುಂದೆ ಅವರೆಲ್ಲರೂ ಕೂಡಿ ಮರಳಿ ಅಯೋಧ್ಯೆಗೆ ಹೊರಟರು. ಬರುತ್ತ ದಾರಿಯಲ್ಲಿ ಪರಶುರಾಮನು ಎದುರಾದನು. ಕೂಡಲೆ ರಾಮ ಚಂದ್ರನು ಆತನನ್ನು ನಮಸ್ಕರಿಸಿದನು. ಆಗ ಪರಶುರಾಮನು "ಎಲೈ ರಾಮನೇ, ನೀನು ಕ್ಷತ್ರಿಯನೆನಿಸಿಕೊಂಡು ಸ್ತ್ರೀ ಹತ್ಯೆಯು ನಿಂದ್ಯ ಇರುವದೆಂದು ತಿಳಿದರೂ ಕೂಡ ತ್ರಾಟಿಕೆಯುನ್ನು ಕೊಂದೆಯಲ್ಲ!" ಎಂದು ಅಂದನು. ಆಗ ರಾಮಚಂದ್ರನು "ತ್ರಾಟಿಕೆಯು ಹೆಂಗಸಿದ್ದರೂಕೂಡ ನನ್ನ ತಾಯಿಯಾಗಿರಲಿಲ್ಲ. ಮೇಲಾಗಿ ಅವಳು ರಾಕ್ಷಸಿ. ತಾಯಿಹತ್ಯೆಗಿಂತಲೂ ರಾಕ್ಷಸಿಯಹತ್ಯೆಯು ಪಾಪಯುಕ್ತವಲ್ಲ. ಮೇಲಾಗಿ ನೀನು ಬ್ರಾಹ್ಮಣನಿದ್ದು ನಿನ್ನ ಮಾತೃಹತ್ಯೆಯನ್ನುಮಾಡಿದೆ. ಇದು ನಿನ್ನ ಬ್ರಾಹ್ಮಣತ್ವಕ್ಕೆ ಶೋಭಿಸುವದೇ? ಎಂದು ಪ್ರತಿಯಾಗಿ ಕೇಳಿದನು. ಆಗ ಪರಶುರಾಮನು ಬಹಳೇ ಕೋಪಗೊಂಡನು. ಮತ್ತು ತನ್ನ ಅಮೋಘವಾದ ಅಸ್ತ್ರಗಳನ್ನು ಬಿಡಹತ್ತಿದನು. ಆಗ ಅವು ರಾಮಚಂದ್ರನೆದುರಿಗೆ ಬಂದಕೂಡಲೆ ಕರಗಿ ಹೋಗಹತ್ತಿದವು. ಈ ಎಲ್ಲ ಚಮತ್ಕಾರಗಳನ್ನು ಕಂಡು ಪರಶುರಾಮನು ಬೆರಗಾದನು. ಮತ್ತು ಇವನು ಸಾಕ್ಷಾತ್ ಶೇಷಶಾಯಿಯಾದ ನಾರಾಯಣನೇ ಅವತರಿಸಿರುವನೆಂದು ತಿಳಿದು ಧನುಷ್ಯನ್ನು ಕೆಳಗಿಟ್ಟನು. ಇತ್ತ ರಾಮ ಚಂದ್ರನುಕೂಡ ತನ್ನ ಬಾಣವನ್ನು ಹೂಡಿದ್ದನು. ಮತ್ತು "ಈ ಬಾಣವನ್ನು ನಾನು ಎಲ್ಲಿ ಬಿಡಲಿ?" ಎಂದು ಪರಶುರಾಮನನ್ನು ಕೇಳಿದನು. ಆಗ ಪರಶುರಾಮನು "ಈ ಬಾಣದಿಂದ ನನ್ನ ಮೃತ್ಯು ಮಾರ್ಗವನ್ನು ಬಂದುಮಾಡಿ ನನ್ನನ್ನು ಚಿರಂಜೀವಿಯನ್ನಾಗಿ ಮಾಡು"

ಎಂದು ಬೇಡಿಕೊಂಡನು. ಕೂಡಲೆ ರಾಮಚಂದ್ರನು ಅದರಂತೆಯೇ ಮಾಡಿದನು. ಮುಂದೆ ಪರಶುರಾಮನು ಬದರಿಕಾಶ್ರಮಕ್ಕೆ ಹೊರಟು ಹೋದನು. ಆಗ ಎಲ್ಲ ಜನರು ಸುರಕ್ಷಿತವಾಗಿ ಅಯೋಧ್ಯೆಗೆ ಬಂದು ತಲುಪಿದರು.

## ೯. ಪಟ್ಟಾಭಿಷೇಕಕ್ಕೆ ವಿಘ್ನ

ಮುಂದೆ ದಶರಥನು ಎಷ್ಟೋದಿವಸದವರೆಗೆ ಆನಂದದಿಂದ ಕಾಲ ಕಳೆದನು. ಆಗ ಒಂದುದಿನ ಕೈಕೇಯಿಯು ಅಣ್ಣನಾದ ಸಂಗ್ರಾಮಜಿತನು ಅಯೋಧ್ಯೆಗೆ ಬಂದು ಭರತ-ಶತ್ರುಘ್ನರನ್ನು ತಮ್ಮ ಊರಿಗೆ ಕರೆದುಕೊಂಡು ಹೋದನು. ಇತ್ತ ಶ್ರೀರಾಮಚಂದ್ರನು ತಂದೆಯಾದ ದಶರಥಮಹಾರಾಜನ ಸೇವೆಯನ್ನೂ ಮತ್ತು ಗುರುಗಳಾದ ವಶಿಷ್ಠರ ಸೇವೆಯನ್ನೂ ಮಾಡುತ್ತ ಆನಂದದಿಂದ ಕಾಲಕಳೆಯಹತ್ತಿದನು.

ಹೀಗಿರುವಾಗ ಒಂದುದಿನ ದಶರಥನು ತನ್ನ ಮುಖವನ್ನು ಕನ್ನಡಿಯಲ್ಲಿ ನೋಡುತ್ತಿರುವಾಗ ತನ್ನ ಕೂದಲುಗಳು ಬೆಳ್ಳಗಾಗುತ್ತಿರುವವೆಂಬುದು ಕಂಡು ಬಂದಿತು. ಆಗ ಆತನು ತನಗೆ ವೃದ್ಧಾಪ್ಯಕಾಲವು ಸಮೀಪಿಸಿತೆಂದು ತಿಳಿದು ತನ್ನ ಗುರುಗಳಾದ ವಶಿಷ್ಠರನ್ನು ಕರೆಕಳುಹಿ "ಗುರುಗಳೇ, ನನಗೆ ಇನ್ನು ವೃದ್ಧಾವಸ್ಥೆಯು ಸಮೀಪಿಸಿತು, ಕಾರಣ ರಾಜ್ಯಕಾರಭಾರವನ್ನು ಸಾಗಿಸುವದು ಕಠಿಣವಾಗುತ್ತದೆ. ಅದಕ್ಕಾಗಿ ನನ್ನ ಜ್ಯೇಷ್ಠಪುತ್ರನಾದ ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕವನ್ನು ಮಾಡಿ ನಾನು ಸ್ವಸ್ಥಚಿತ್ತದಿಂದ ಹರಿ ಧ್ಯಾನವನ್ನು ಮಾಡುತ್ತ ಕಾಲವನ್ನು ಕಳೆಯಬೇಕೆಂದು ಇಚ್ಛಿಸುತ್ತೇನೆ. ಕಾರಣ ತಾವೆಲ್ಲರೂ ಇದಕ್ಕೆ ಅನುಮತಿಯನ್ನು ಕೊಡಬೇಕು" ಎಂದು ಹೇಳಿದನು. ಕೂಡಲೆ ವಶಿಷ್ಠರಿಗೆ ಬಹಳೇ ಆನಂದವಾಯಿತು. ಮತ್ತು ಅವರು ಸುಮಂತ

ಪ್ರಧಾನಿಯನ್ನು ಕರೆಯಿಸಿ ಅವನಿಂದ ಈ ಸಂಗತಿಯನ್ನು ಊರ ಜನರಿಗೆಲ್ಲ ತಿಳಿಸಿವರು. ಆಗ ಎಲ್ಲರಿಗೂ ಬಹಳ ಆನಂದವಾಯಿತು. !

ಮುಂದೆ ಒಂದು ಸುಮುಹೂರ್ತದಲ್ಲಿ ವಶಿಷ್ಠಗುರುಗಳು ರಾಜ್ಯಾಭಿಷೇಕದ ಸಿದ್ಧತೆಯನ್ನು ಮಾಡಿದರು. ಮತ್ತು ಎಲ್ಲ ರಾಜರಿಗೂ ಆಮಂತ್ರಣ ಪತ್ರಿಕೆಗಳನ್ನು ಕಳಿಸಲಾಯಿತು. ಕೂಡಲೆ ಅವರೆಲ್ಲರು ತಮ್ಮ ಪರಿವಾರ ಸಮೇತರಾಗಿ ಅಯೋಧ್ಯೆಗೆ ಬಂದರು. ಆಗ ಅಯೋಧ್ಯಾನಗರವು ಆನಂದಸಾಗರದಲ್ಲಿ ಮುಳುಗಿತು. ಎಲ್ಲ ಜನರು ಆನಂಪದಿಂದ ಜಯಘೋಷವನ್ನು ಮಾಡುತ್ತ ಪಟ್ಟಣದಲ್ಲಿ ಓಡಾಡಹತ್ತಿದರು.

ಮುಂದೆ ದಶರಥನು ಶ್ರೀರಾಮಚಂದ್ರನನ್ನು ಏಕಾಂತದಲ್ಲಿ ಕರೆಯಿಸಿ ತನ್ನ ಇಚ್ಛೆಯನ್ನು ಆತನ ಮುಂದೆ ಹೇಳಿದನು. ಆಗ ಆ ಪಿತೃಭಕ್ತನಾದ ರಾಮನು ತಂದೆಯ ಚರಣಕ್ಕೆರಗಿ ಆತನ ವಚನವನ್ನು ಶಿರಸಾವಹಿಸಿದನು. ಅನಂತರ ವಶಿಷ್ಠಗುರುಗಳು ರಾಜ್ಯಾಭಿಷೇಕದ ಮೊದಲನೆಯದಿವಸ ಶ್ರೀರಾಮ-ಸೀತೆಯರ ಕಡೆಯಿಂದ ಉಪವಾಸವನ್ನು ಮಾಡಿಸಿ ಒಂದು ಹೋಮವನ್ನುಮಾಡಿ ಅಗ್ನಿನಾರಾಯಣನನ್ನು ತೃಪ್ತಗೊಳಿಸಿವರು. ಮತ್ತು ಬಂದ ಬ್ರಾಹ್ಮಣರನ್ನೆಲ್ಲ ಸಂತುಷ್ಟಪಡಿಸಿದರು. ಆಗ ಲಕ್ಷ್ಮಣನು ಮುಂದೆ ಬಂದು ತಂದೆಯ ಚರಣಕ್ಕೆರಗಿ“ ನಾನು ನಿರಂತರವಾಗಿ ಶ್ರೀರಾಮಚಂದ್ರನ ಸೇವೆಯನ್ನೇ ಮಾಡುವೆನು”ಎಂದು ಹೇಳಿದನು. ಈ ಮಾತಿನಿಂದ ದಶರಥನಿಗೆ ಬಹಳೇ ಆನಂದವಾಯಿತು. ಮರುದಿವಸ ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕವಾಗುವದೆಂದು ತಿಳಿದು ಊರಲ್ಲಿಯ ಎಲ್ಲ ಜನರು ನಾನಾದೇಶಗಳಿಂದ ಎಲ್ಲ ತರಹದವಾದ್ಯಗಳನ್ನು ತರಿಸಿದ್ದರು. ಅವೆಲ್ಲವೂ ಒಂದೇ ಸವನೆ ಬಾರಿಸಹತ್ತಿದವು. ಎಲ್ಲಿ ನೋಡಿದರೂ ವಾದ್ಯದಧ್ವನಿಯು ಹೊರತಾಗಿ ಬೇರೆ

ಸಪ್ಪಳವು ಸಹ ಕೇಳುತ್ತಿರಲಿಲ್ಲ. ಈ ರೀತಿಯಿಂದ ಅಯೋಧ್ಯಾ ನಗರವು ಸಂತೋಷಸಾಗರದಲ್ಲಿ ತೇಲಾಡುತ್ತಿತ್ತು.

ಹೀಗಿರುವಾಗ ಸ್ವರ್ಗಲೋಕದಲ್ಲಿ ದೇವತೆಗಳೆಲ್ಲರಿಗೂ ಒಂದು ದೊಡ್ಡ ಚಿಂತೆಯುತ್ಪನ್ನವಾಯಿತು. ಆಗ ಅವರೆಲ್ಲರೂ ಒಂದೇಕಡೆಗೆ ಸೇರಿ ಆಲೋಚಿಸಹತ್ತಿದರು. ಮತ್ತು ಇಂದ್ರನ ಬಳಿಗೆ ಹೋಗಿ ಎಲ್ಲ ಸಂಗತಿಯನ್ನು ಅರುಹಿದರು. "ಎಲೈ ಇಂದ್ರನೇ, ಈಗ ಸುಮ್ಮನೆ ಕೂಡ್ರಲು ಸಮಯವಿಲ್ಲ; ಕಾರಣ ಹೇಗಾದರೂ ಮಾಡಿ ಈ ಪಟ್ಟಾಭಿಷೇಕವನ್ನು ಮುರಿಯಲೇ ಬೇಕು. ಇಲ್ಲವಾದರೆ ಶ್ರೀರಾಮಚಂದ್ರನು ಪಟ್ಟದಮೇಲೆ ಕುಳಿತನೆಂದರೆ ನಾವೆಲ್ಲರು ರಾವಣನ ಸೆರೆಮನೆಯಿಂದ ಮುಕ್ತರಾಗುವ ಬಗೆ ಹೇಗೆ?" ಎಂದರು. ಆಗ ಇಂದ್ರನು ಅವರೆಲ್ಲರನ್ನು ಬ್ರಹ್ಮದೇವರ ಬಳಿಗೆ ಕರೆದುಕೊಂಡು ಹೋದನು. ಮತ್ತು ಆ ಎಲ್ಲ ಸಂಗತಿಯನ್ನು ಆತನ ಮುಂದೆ ಹೇಳಿದನು. ಕೂಡಲೆ ಬ್ರಹ್ಮದೇವನು ಆಲೋಚಿಸಿ ಕಲಿಯನ್ನು ಕರೆಯ ಕಳುಹಿಸಿದನು. ಮತ್ತು ಆತನಿಗೆ ಅಯೋಧ್ಯೆಗೆ ಹೋಗಿ "ನೀನು ಶ್ರೀರಾಮಚಂದ್ರನ ಪಟ್ಟಾಭಿಷೇಕಕ್ಕೆ ವಿಘ್ನವನ್ನು ತಂದೊಡ್ಡು. ಮತ್ತು ಆತನು ೧೪ ವರ್ಷಗಳ ಪರ್ಯಂತ ವನವಾಸಕ್ಕೆ ಹೋಗುವಂತೆ ಮಾಡು. ಅಂದರೆ ನಾವೆಲ್ಲರು ಮುಂದೆ ಬಂಧನದಿಂದ ಮುಕ್ತರಾಗುವೆವು" ಎಂದು ಹೇಳಿದರು.

ಕೂಡಲೆ ಕಲಿಯು ಅಯೋಧ್ಯೆಗೆ ಬಂದು ಅರಸನ ತೋಟದಲ್ಲಿ ಒಂದು ಗಿಡದಡಿಯಲ್ಲಿ ಕುಳಿತನು. ಆಗ ಕೈಕೇಯಿಯ ಮಂಥರೆ ಎಂಬ ದಾಸಿಯು ಹೂ-ಕಾಯಿಗಳನ್ನು ತರುವದರ ದೆಸೆಯಿಂದ ಆ ತೋಟಕ್ಕೆ ಬಂದಳು. ಅವಳು ಬಹಳೇ ಕುರೂಪಿ ಇದ್ದಳು, ಇವಳ ರೂಪವನ್ನು ಕಂಡು ಇವಳು ಹೂ ಕೊಯ್ಯುತ್ತಿರುವಾಗಲೇ ಕಲಿಯು

ಇವಳ ಮೈಯಲ್ಲಿ ಹೊಕ್ಕನು. ಅವಳು ಮೊದಲೇ ಶ್ರೀರಾಮಚಂದ್ರನನ್ನು ದ್ವೇಷಿಸುತ್ತಿದ್ದಳು. ಈಗ ಕಲಿಯ ಸಂಚಾರವಾದಮೇಲಂತೂ ಅದು ಇಮ್ಮಡಿಯಾಯಿತು. ಆಗ ಅವಳು ಹೇಗಾದರೂ ಮಾಡಿ ರಾಮನನ್ನು ವನಕ್ಕೆ ತೆರಳಿಸಬೇಕೆಂದು ಮನದಲ್ಲಿ ನಿರ್ಧಾರ ಮಾಡಿದಳು. ಮತ್ತು ಹೂಗಳನ್ನು ತೆಗೆದುಕೊಂಡು ಕೈಕೇಯಿಯ ಮಂದಿರಕ್ಕೆ ಬಂದಳು. ಆಗ ಅಲ್ಲಿ ದೊಡ್ಡ ಸಂಭ್ರಮವೇ ನಡೆದಿತ್ತು, ಅದನ್ನು ಕಂಡು ತಾನು ಧೊಪ್ಪನೆ ನೆಲಕ್ಕೆ ಬಿದ್ದು ಅಳಹತ್ತಿದಳು. ಕೂಡಲೆ ಕೈಕೇಯಿಯು ಅವಳ ಹತ್ತಿರ ಬಂದು “ ನೀನು ಹೀಗೇಕೆ ಮಾಡುತ್ತಿರುವೆ? ” ಎಂದು ಕೇಳಿದಳು. ಆಗ ಅವಳು “ ನಿನ್ನ ದೈವವು ಬಲು ಕೆಟ್ಟದು ನಿನ್ನ ಮಕ್ಕಳನ್ನು ನಿನ್ನ ತವರೂರಿಗೆ ಕಳಿಸಿರುವಾಗಲೇ ದಶರಥನು ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕವನ್ನು ಮಾಡುವನು. ಅಂದಮೇಲೆ ನೀನು ಎಂಥ ದುರ್ದೈವಿಯು?” ನಾಳಿನ ದಿವಸ ಶ್ರೀರಾಮಚಂದ್ರನು ಪಟ್ಟದಮೇಲೆ ಕುಳಿತನೆಂದರೆ ನಿನ್ನನ್ನು ಮತ್ತು ನಿನ್ನ ಮಕ್ಕಳನ್ನು ದಾಸ—ದಾಸಿಯರಂತೆ ನಡೆಸಿಕೊಳ್ಳುವನು. ಕಾರಣ ನೀನು ಎಚ್ಚರಾಗಿರು. ಇಲ್ಲದಿದ್ದರೆ ಎಲ್ಲ ಕೆಲಸವೂ ಕೆಟ್ಟು ಹೋಗುವದು ” ಎಂದು ಹೇಳಿದಳು. ಮಂಥರೆಯ ಮಾತುಗಳನ್ನು ಕೇಳಿ ಕೈಕೇಯಿಯ ಬುದ್ಧಿಯು ಕೆಟ್ಟು ಹೋಯಿತು. ಆಗ ಅವಳು ತನ್ನ ಮೈಮೇಲಿನ ಎಲ್ಲ ಆಭರಣಗಳನ್ನು ತೆಗದೊಗೆದು ಕೂದಲಗಳನ್ನುಬಿಚ್ಚಿಕೊಂಡು ಹೊಲಸು ಅರಿವೆಗಳನ್ನುಟ್ಟು ದಶರಥನು ಬರುವ ಸಮಯವನ್ನು ಕಾಯುತ್ತ ಒಂದು ಮೂಲೆಯಲ್ಲಿ ಹೋಗಿ ಬಿದ್ದುಕೊಂಡಳು. ಇಷ್ಟೆಲ್ಲ ಸಂಗತಿಗೆ ಆ ಮಂಥರೆಯೇ ಕಾರಣಳಾಗಿದ್ದಳು. “ ಕೆಟ್ಟ ಜನರ ಸಂಗತಿಯನ್ನು ಹಿಡಿವರೆ ಸಜ್ಜನರು ಸಹ ಕೆಡುವರು ” ಎಂಬ ಮಾತು ನಿಜ; ಅಂತೆಯೇ ಅಂಥ ಜನರಿಂದ ದೂರಾಗಿರಬೇಕು.

ಇತ್ತ ದಶರಥನು ನಿತ್ಯದಂತೆ ಕೈಕೇಯಿಯ ಮಂದಿರಕ್ಕೆ ಬಂದನು. ಆಗ ಅವಳು ಅಲ್ಲಿ ಕಾಣಿಸಲಿಲ್ಲ. ಕೂಡಲೆ ಮಂಥರೆಯನ್ನು ಕರೆದು "ಕೈಕೇಯಿಯು ಎಲ್ಲಿರುವಳು?" ಎಂದು ಕೇಳಿದನು. ಆಗ ಅವಳು ಮೂಲೆಯಲ್ಲಿ ಬಿದ್ದಿರುವ ಕೈಕೇಯಿಯ ಕಡೆಗೆ ಬೆರಳನ್ನು ಮಾಡಿ ತೋರಿಸಿ "ರಾಜ್ಞಿಯವರು ಇಲ್ಲಿರುವರು" ಎಂದು ಹೇಳಿದಳು. ಕೂಡಲೆ ದಶರಥನು ಅವಳ ಬಳಿಗೆ ಬಂದು "ನಿನಗೆ ಯಾರೇನು ಮಾಡಿದರು?" ಎಂದು ಕೇಳಿದನು. ಆಗ ಅವಳು ಬಲು ಆಕ್ರೋಶದಿಂದ "ದೂರ ಸರಿಯಿರಿ; ನಿಮ್ಮ ಮತ್ಸರ ಬುದ್ಧಿಯು ಇಂದು ಕಂಡುಬಂದಿತು.ಏಕೆಂದರೆ ನನ್ನ ಮಲಮಗನಾದ ಆ ರಾಮನಿಗೆ ಪಟ್ಟಾಭಿಷೇಕವನ್ನು ಮಾಡಿ ನನ್ನ ಮಗನನ್ನು ವನಕ್ಕೆ ತೆರಳಿಸಬೇಕೆನ್ನು ವಿರಾ? ಕಾರಣ ಅದನ್ನು ನಾನು ಎಂದಿಗೂ ಮಾಡಗೊಡಲಾರೆನು" ಎಂದು ಹೇಳಿದಳು.

ಅವಳು ಈ ಮಾತನ್ನು ಕೇಳಿ ದಶರಥನ ಎದೆ ನಡುಗಿತು. ಆಗ ಅವನು "ಪ್ರಿಯ ಕೈಕೇಯಿಯೆ, ಈಗ ನೀನು ಪಟ್ಟಾಭಿಷೇಕ ಸಮಾರಂಭಕ್ಕೆ ವಿಘ್ನವನ್ನುಂಟುಮಾಡಬೇಡ. ನೀನು ಬೇಡಿದ್ದನ್ನು ಕೊಡುವೆನು" ಎಂದು ಪರಿಪರಿಯಿಂದ ತಿಳಿಹೇಳಿದನು.ಆಗ ಅವಳು "ಹಿಂದಕ್ಕೆ ನೀವು ದೇವದಾನವರ ಯುದ್ಧದಲ್ಲಿ ಎರಡುವರಗಳನ್ನು ಕೊಡಲು ಸಿದ್ಧರಾಗಿದ್ದಿರಲ್ಲವೇ? ಅವನ್ನೇ ಈಗ ನನಗೆ ಕೊಡಬೇಕು" ಎಂದು ಬೇಡಿಕೊಂಡಳು. ಮೊದಲನೇ ವರದಿಂದ ನನ್ನ ಮಗ ಭರತನಿಗೆ ಪಟ್ಟಗಟ್ಟಬೇಕು. ಮತ್ತು ಎರಡನೇ ವರದಿಂದ ರಾಮ ನನ್ನು ೧೪ ವರ್ಷ ವನಕ್ಕೆ ಕಳಿಸಬೇಕು ಎಂದೂ ಬೇಡಿಕೊಂಡಳು. ಈ ವರಗಳನ್ನು ಕೇಳಿ ದಶರಥನಿಗೆ ಮೈಮೇಲೆ ಸಿಡಿಲು ಬಿದ್ದಂತಾಗಿ ಅವನು ಮೂರ್ಛಿತನಾದನು. ಮುಂದೆ ತುಸು ಹೊತ್ತಿನಲ್ಲಿಯೇ

ಎಚ್ಚತ್ತು ಕೈಕೇಯಿಯನ್ನು ಕುರಿತು:— “ನಾನು ನಿನ್ನ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿ ನನ್ನ ಎಲ್ಲ ಸ್ತ್ರೀಯರನ್ನು ನಿನ್ನ ದಾಸಿಯರನ್ನಾಗಿ ಮಾಡುವೆನು; ಆದರೆ ನನ್ನ ಸುಕುಮಾರನಾದ ರಾಮನನ್ನು ವನಕ್ಕೆ ಮಾತ್ರ ತೆರಳಿಸಬೇಡ” ಎಂದು ಪರಿಪರಿಯಾಗಿ ಹೇಳಿದನು. ಆಗ ಅವಳು ಕಠೋರವಾಣಿಯಿಂದ “ನೀವು ಕೊಟ್ಟ ವಚನವನ್ನು ತಪ್ಪಿಸಿ ಸೂರ್ಯಕುಲಕ್ಕೆ ಕಲಂಕವನ್ನುಂಟು ಮಾಡುವಿರಿ. ಮತ್ತು ನನ್ನನ್ನು ಮೋಸಗೊಳಿಸುತ್ತಿರುವಿರಿ; ಆದರೆ ನಾನು ನಿಮ್ಮ ಮೋಸದ ಮಾತಿಗೆ ಎಂದಿಗೂ ಬಲಿ ಬೀಳಲಾರೆ” ಎಂದು ಸ್ಪಷ್ಟವಾಗಿ ಹೇಳಿಬಿಟ್ಟಳು. ಅವಳ ಈ ಮಾತನ್ನು ಕೇಳಿ ದಶರಥನು ಅಂದಿನ ರಾತ್ರಿಯನ್ನೆಲ್ಲ ಬಹಳ ದುಃಖದಿಂದ ಕಳೆದನು. ಮತ್ತು ಪುತ್ರವಿಯೋಗದ ದುಃಖದಿಂದ ಮೇಲಿಂದಮೇಲೆ ಮೂರ್ಛಿತ ಹೊಂದಹತ್ತಿದನು.

ಮುಂದೆ ಬೆಳಗಿನಲ್ಲಿ ಸುಮಂತಪ್ರಧಾನನು ದಶರಥನ ಬಳಿಗೆ ಬಂದು “ಮಹಾರಾಜರೇ, ಪಟ್ಟಾಭಿಷೇಕದ ಸಮಯವು ಸಮೀಪಿಸಿದೆ. ಕಾರಣ ತಾವು ಬೇಗ ಬರಬೇಕೆಂದು ವಶಿಷ್ಠಗುರುಗಳು ಹೇಳಿದ್ದಾರೆ” ಎಂದು ಹೇಳಿದನು. ಆಗ ದಶರಥನ ಕಣ್ಣಿನಿಂದ ನೀರು ಒಂದೇಸವನೆ ಧಾರೆಯಾಗಿ ಸುರಿಯಹತ್ತಿತು. ಅರಸನ ಈ ಅವಸ್ಥೆಯನ್ನು ಕಂಡು ಸುಮಂತನು ಬೆರಗಾದನು ಮತ್ತು ಕೈಕೇಯಿಯನ್ನು ಕೇಳಿದನು; ಆಗ ದಶರಥನು ತನ್ನ ದುಃಖವನ್ನು ಬದಿಗಿಟ್ಟು “ಸುಮಂತಾ, ನನ್ನ ಮರಣಸಮಯವು ಸಮೀಪಿಸಿದೆ. ಕಾರಣ ಬೇಗ ಹೋಗಿ ಶ್ರೀರಾಮಚಂದ್ರನನ್ನು ಕರೆದುಕೊಂಡು ಬಾ. ಮತ್ತು ಇಲ್ಲಿ ನಡೆದಿರುವ ಸಂಗತಿಯನ್ನು ಯಾರ ಮುಂದೆಯೂ ಹೇಳಬೇಡ” ಈ ಪ್ರಕಾರವಾಗಿ ಹೇಳಿ ಸುಮಂತನನ್ನು ಕಳುಹಿಕೊಟ್ಟನು. ಇತ್ತ ಸುಮಂತನು ಹೊರಟು ಶ್ರೀರಾಮಚಂದ್ರನ ಮಂದಿರಕ್ಕೆ ಬಂದು ಆತ

ನಿಗೆ ನಮಸ್ಕರಿಸಿ "ದಶರಥಮಹಾರಾಜರು ತಮ್ಮನ್ನು ಕರೆದಿರುವರು; ಅವರು ಕೈಕೇಯಿಯವರ ಮಂದಿರದಲ್ಲಿರುವರು" ಎಂದು ಹೇಳಿದನು.

ಕೂಡಲೆ ಶ್ರೀರಾಮಚಂದ್ರನು ರಥದಲ್ಲಿ ಕುಳಿತು ಅಲ್ಲಿಂದಹೊರಟು ಕೈಕೇಯಿಯ ಮಂದಿರಕ್ಕೆ ಬರುತ್ತಿರಲು ಆತನ ಸಂಗಡ ಐವತ್ತಾರು ದೇಶದ ರಾಜರೂ, ರಾಜಕುಮಾರರೂ, ಚತುರಂಗಯುಕ್ತಸೈನ್ಯವೂ, ಮತ್ತು ಎಲ್ಲ ತರದ ವಾದ್ಯ ವೈಭವವೂ ಇವುಗಳಿಂದೊಡಗೂಡಿ ಅಲ್ಲಿಗೆ ಬಂದನು. ಮತ್ತು ಎಲ್ಲ ಜನರನ್ನು ಅಲ್ಲಿಯೇ ನಿಲ್ಲಿಸಿ ತಾನೊಬ್ಬನೆ ಒಳಗೆ ಬಂದನು. ಮತ್ತು ದಶರಥಮಹಾರಾಜರು ಮೂರ್ಛಿತರಾಗಿ ಭೂಮಿಯಮೇಲೆ ಬಿದ್ದುದನ್ನು ಕಂಡು ಕೈಕೇಯಿ ಮಾತೆಯನ್ನು ಕೇಳಿದನು. ಆಗ ಅವಳು "ರಾಮಾ, ನಿನ್ನ ತಂದೆಯು ಹಿಂದಕ್ಕೆ ನನಗೆ ಎರಡು ವರಗಳನ್ನು ಕೊಡಲು ಸಿದ್ಧರಾಗಿದ್ದರು. ಅವೇ ವರಗಳನ್ನು ಈಗ ನಾನು ಬೇಡಿದ್ದಕ್ಕಾಗಿ ಅವರು ಈ ರೀತಿಯಾಗಿ ಶೋಕಿಸುತ್ತ ಭೂಮಿಯಮೇಲೆ ಬಿದ್ದಿರುವರು" ಎಂದು ಹೇಳಿದಳು.ಆಗ ರಾಮನು "ಮಾತೆಯೇ, ಅವೆಂಥ ವರಗಳು? ನನಗೆ ಹೇಳು ಅವನ್ನು ನಾನು ಪೂರೈಸುವೆನು" ಎಂದನು. ಕೂಡಲೆ ಆ ದುಷ್ಟಳು "ಎಲೈ ರಾಮಚಂದ್ರನೇ ಕೇಳು; ನೀನು ನಿಜವಾಗಿಯೂ ಪಿತೃವಚನವನ್ನು ಪಾಲಿಸುತ್ತಿದ್ದರೆ ಒಂದು ವರದಿಂದ ನನ್ನ ಮಗ ಭರತನಿಗೆ ಯೌವರಾಜ್ಯಾಭಿಷೇಕವಾಗಬೇಕು; ಮತ್ತೊಂದು ವರದಿಂದ ನೀನು ಹದಿನಾಲ್ಕು ವರ್ಷ ವನವಾಸಕ್ಕೆ ತೆರಳಬೇಕು" ಎಂದು ಹೇಳಿದಳು. ಆಗ ಆ ಪಿತೃಭಕ್ತನಾದ ಶ್ರೀರಾಮನು ಪಿತೃವಚನವನ್ನು ಪಾಲಿಸುವದಕ್ಕಾಗಿ ಕೈಕೇಯಿಮಾತೆಗೆ ನಮಸ್ಕರಿಸಿ ಅಲ್ಲಿಂದ ಹೊರಟು ಕೌಸಲ್ಯೆಯ ಮಂದಿರಕ್ಕೆ ಬಂದು ಅಲ್ಲಿ ಅವಳಿಗೆ ಎಲ್ಲ ಸಂಗತಿಯನ್ನು ಅರುಹಿದನು. ಕೂಡಲೆ ಅವಳು ಮೂರ್ಛಿತಳಾಗಿ ಬಿದ್ದು

ಬಿಟ್ಟಳು. ಆಗ ಅವನು ಅವಳನ್ನು ಎಬ್ಬಿಸಿ "ಮಾತೆ ಶೋಕಿಸಬೇಡ. ತಂದೆಯ ವಚನವನ್ನು ಪಾಲಿಸುವದು ಪುತ್ರನ ಕರ್ತವ್ಯವಾಗಿದೆ. ಅದಕ್ಕಾಗಿ ನಾನು ವನಕ್ಕೆ ತೆರಳಬೇಕು. ಕಾರಣ ನೀನು ನನಗೆ ಆಜ್ಞೆಯನ್ನು ಕೊಡು" ಎಂದು ಹೇಳಿ ಆತನು ವನಕ್ಕೆ ಹೊರಡಲು ಸಿದ್ಧನಾದನು. ಕೂಡಲೆ ಈ ಸಂಗತಿಯು ಅಯೋಧ್ಯೆಯಲ್ಲೆಲ್ಲ ಹಬ್ಬಿ ಹಾ! ಹಾ! ಕಾರವೆದ್ದಿತು. ಆಗ ಲಕ್ಷ್ಮಣನು ಮುಂದೆ ಬಂದು "ಅಣ್ಣಾ, ನಾನು ಈಗಲೇ ಹೋಗಿ ಕೈಕೇಯಿಯ ಶಿರಚ್ಛೇದವನ್ನು ಮಾಡುವೆನು"ನನಗೆ ಆಜ್ಞೆಕೊಡು ಎಂದು ಬಹಳ ಕೋಪದಿಂದ ಹೇಳಿದನು. ಆಗ ರಾಮಚಂದ್ರನು "ತಮ್ಮಾ ಲಕ್ಷ್ಮಣಾ, ಮನುಷ್ಯನಿಗೆ ಎಂಥ ಸಂಕಟವು ಬಂದರೂ ಕೂಡ ಸಿಟ್ಟಿನ ಕೈಯಲ್ಲಿ ಎಂದಿಗೂ ಬುದ್ಧಿಯನ್ನು ಕೊಡಬಾರದು. ಮತ್ತು ಭಾವನೆಯ ವಶನಾಗಿ ಕರ್ತವ್ಯ ಮಾಡುವದನ್ನು ಮರೆಯಬಾರದು. ಭಾವನೆಯಕ್ಕಿಂತಲೂ ಕರ್ತವ್ಯ ಕರ್ಮವು ಶ್ರೇಷ್ಠವಿರುವದು ಕಾರಣ ನಾನು ತಂದೆಯ ವಚನವನ್ನು ಪಾಲಿಸುವದು ನನ್ನ ಕರ್ತವ್ಯವಿದೆ; ಅದಕ್ಕಾಗಿ ನಾನು ಕೂಡಲೆ ವನಕ್ಕೆ ತೆರಳುವೆನು" ಎಂದು ಹೇಳಿದನು. ಆಗ ಲಕ್ಷ್ಮಣನಿಗೆ ಏನೂ ಮಾತನಾಡಲು ಬಾರದಂತಾಯಿತು. ಕೂಡಲೆ ಅವನು "ಅಣ್ಣಾ, ನಾನು ನಿನ್ನ ಸಂಗಡ ವನಕ್ಕೆ ಬರುವೆನು" ಎಂದು ಹಟ ಹಿಡಿದನು.

ಕೂಡಲೆ ರಾಮಚಂದ್ರನು ಸೀತೆಯ ಮಂದಿರಕ್ಕೆ ಬಂದನು. ಆಗ ಅವಳು ಶ್ರೀರಾಮಚಂದ್ರನ ದಾರಿಯನ್ನೇ ಕಾಯುತ್ತ ಕುಳಿತಿದ್ದಳು. ಆತನು ಬಂದಕೂಡಲೆ ನಮಸ್ಕರಿಸಿ ಆದರದಿಂದ ಬರಮಾಡಿಕೊಂಡು ಮಂಚದಮೇಲೆ ಕುಳ್ಳಿರಿಸಿದಳು. ತರುವಾಯ ಶ್ರೀರಾಮಚಂದ್ರನು ಅವಳ ಮುಂದೆ ಎಲ್ಲ ಸಂಗತಿಯನ್ನು ಹೇಳಿದನು. ಮತ್ತು "ನಾನು ಈಗಲೇ ಹೊರಡಬೇಕು" ಎಂದು ಹೇಳಿದನು. ಆಗ

ಅವಳು "ಪ್ರಾಣನಾಥಾ, ನಾನೂ ನಿನ್ನ ಸಂಗಡ ಬರುವೆನು. ನೀನೆ ಲ್ಲಿರುವೆಯೋ ಅಲ್ಲಿಯೇ ನಾನು ಇರಬೇಕು. ಇಲ್ಲವಾದರೆ ನನ್ನ ಜನ್ಮವು ವ್ಯರ್ಥವು. ಸತಿಗೆ ಪತಿಯೇ ದೇವರು. ಕಾರಣ ನಾನು ನಿನ್ನನ್ನು ಬಿಟ್ಟು ಒಂದು ಅರಗಳಿಗೆ ಕೂಡ ಇರಲಾರೆನು" ಎಂದು ಹೇಳಿದಳು. ನಂತರ ಶ್ರೀರಾಮಚಂದ್ರನು "ಎಲೈ ಜಾನಕಿ, ನೀನು ಸುಕುಮಾರಿಯು; ನಿನಗೆ ಬಿಸಿಲಿನ ತಾಪವು ಸಹನವಾಗಲಿಕ್ಕಿಲ್ಲ. ಮತ್ತು ಅಡವಿಯಲ್ಲಿ ಕಲ್ಲು—ಮುಳ್ಳುಗಳನ್ನು ತುಳಿಯುತ್ತ ದಾರಿಯನ್ನು ನಡೆಯ ಬೇಕಾಗುತ್ತದೆ; ನಿದ್ರೆ, ಹಸಿವೆ, ನೀರಡಿಕೆಗಳನ್ನು ಕಟ್ಟಬೇಕಾಗು ತ್ತದೆ; ವನದಲ್ಲಿ ರಾಕ್ಷಸರೂ, ಹಿಂಸ್ರಪಶುಗಳೂ, ಇತರ ಕಾಡಮೃಗ ಗಳ ಅಂಜಿಕೆಯೂ ಬಹಳ; ಆದಕಾರಣ ನೀನು ನನ್ನಸಂಗಡ ಬರಲು ಹಟತೊಡಬೇಡ" ಎಂದನು. ಕೂಡಲೆ ಅವಳು "ನಾಥಾ ನಿನ್ನ ಸಂಗಡ ಇರುವಾಗ ನನಗೆ ಏತರ ಭಯವು? ನನಗೂ ವನಸಿರಿಯ ಶೋಭೆಯನ್ನು ನೋಡಬೇಕೆಂಬ ಆಸೆಯಿದೆ. ವನದಲ್ಲಿಯ ಅಂದವಾದ ಪಶು-ಪಕ್ಷಿಗಳನ್ನು ನೋಡಿ ನನ್ನ ಮನಸ್ಸು ಬಹಳೇ ಆನಂದಿತವಾಗಲಿ. ನಿನ್ನ ಸಂಗಡ ನಾನುಇದ್ದರೆ ರಾಜ್ಯಸುಖದಲ್ಲಿದ್ದಂತೆ ಇರುವೆನು ನೀನು ನನ್ನನ್ನು ಅಗಲಿ ಹೋದರೆ ನನಗೆ ಎಲ್ಲ ಸುಖ-ಸಂಪತ್ತುಗಳಿ ದ್ದರೂ ಕೂಡ ಅವು ನನಗೆ ಸ್ಮಶಾನವತ್ತಾಗಿ ತೋರುವವು. ಕಾರಣ ನೀನು ನನ್ನನ್ನು ಬಿಟ್ಟು ಹೋಗಬೇಡ ನಾನು ನಿನ್ನ ನೆಳಲಿನಂತೆಯೇ ನಿನ್ನನ್ನು ಹಿಂಬಾಲಿಸುವೆನು" ಎಂದು ಪರಿಪರಿಯಾಗಿ ಬೇಡಿ ಕೊಂಡಳು. ಆಗ ಶ್ರೀರಾಮಚಂದ್ರನು ಅವಳನ್ನು ಸಂಗಡ ಕರೆದು ಕೊಂಡು ಹೋಗಲು ಒಪ್ಪಿದನು.

ಈ ರೀತಿಯಾಗಿ ಮೂವರೂ ವನಕ್ಕೆ ಹೊರಡಲು ಸಿದ್ಧರಾದರು ಅಹಹಾ! ನೋಡಿದಿರಾ ದೈವದ ಗತಿಯನ್ನು; ಅಂಥ ಶ್ರೀರಾಮಚಂದ್ರ

ನಿಗೂ ಕೂಡ ಕಾಲ ಚಕ್ರವು ಬಿಡಲಿಲ್ಲ. ಅಂದಮೇಲೆ ನಮ್ಮಂಥ ಮನುಜರ ಪಾಡೇನು? ಎಂಥ ಸಂಕಟ ಬಂದರೂ ಎದೆಗುಂದದೆ ಧೈರ್ಯದಿಂದ ಪಾರಾಗುವವನೇ ಜಾಣನು; ಅದಕ್ಕೆ ಮನುಷ್ಯನು ಯಾವಾಗಲೂ ಭಾವನಾವಶನಾಗದೆ ಕರ್ತವ್ಯನಿರತನಾಗಿ ಬಾಳ ಬೇಕು.

ಈ ರೀತಿಯಾಗಿ ಶ್ರೀರಾಮಚಂದ್ರನ ಪಟ್ಟಾಭಿಷೇಕ ಸಮಾರಂಭಕ್ಕೆ ವಿಘ್ನವುಂಟಾಯಿತು.

## ೧೦. ವನವಾಸಗಮನ

ಬಳಿಕ ಶ್ರೀರಾಮ—ಲಕ್ಷ್ಮಣರು ಸುಮಿತ್ರಾಮಾತೆಯ ಮಂದಿರಕ್ಕೆ ಬಂದರು. ಆಗ ಆ ಸಾಧ್ವೀಶಿರೋಮಣಿಯು ಅವರನ್ನು ಆದರದಿಂದ ಉಪಚರಿಸಿ ಎಲ್ಲ ಸಂಗತಿಯನ್ನು ಕೇಳಿಕೊಂಡಳು. ಕೂಡಲೆ ಶ್ರೀರಾಮಚಂದ್ರನು "ಮಾತೆ, ನಾನು ತಂದೆಯ ವಚನಕ್ಕಾಗಿ ಅರಣ್ಯಕ್ಕೆ ತೆರಳುವೆನು; ಅದಕ್ಕೆ ನೀನು ನನಗೆ ಆಜ್ಞೆ ಕೊಡು" ಎಂದು ಬೇಡಿಕೊಂಡನು. ಆಗ ಅವಳು "ಶ್ರೀರಾಮಚಂದ್ರಾ, ನೀನೊಬ್ಬನೇ ಹೋಗಬೇಡ; ಸಂಗಡ ನಿನ್ನ ತಮ್ಮನಾದ ಲಕ್ಷ್ಮಣನನ್ನು ಕರೆದುಕೊಂಡು ಹೋಗು" ಎಂದು ಆಜ್ಞೆಯಿತ್ತಳು. ಮತ್ತು ಆತನ ದೃಷ್ಟಿಯನ್ನು ತೆಗೆದು ಮಂತ್ರಿಸಿದ ದಾರವನ್ನು ತಂದು ಆತನ ರಟ್ಟೆಯಲ್ಲಿ ಕಟ್ಟಿದಳು. ಹೀಗೆ ಅವರು ಸುಮಿತ್ರಾಮಾತೆಯ ಆಜ್ಞೆಯನ್ನು ತೆಗೆದುಕೊಂಡು ಅವಳಿಗೆ ವಂದಿಸಿ; ವಶಿಷ್ಠಗುರುಗಳ ಬಳಿಗೆ ಬಂದರು. ಮತ್ತು "ಗುರುಗಳೇ, ನಾವು ಪಿತೃವಚನಕ್ಕಾಗಿ ವನಕ್ಕೆ ತೆರಳುವೆವು; ಕಾರಣ ನೀವು ಆಜ್ಞೆಯನ್ನು ಕೊಡಬೇಕು. ಮತ್ತು ಸತಿ ಸೀತೆಯು ನನ್ನಸಂಗಡ ವನಕ್ಕೆ ಬರುವೆನೆಂದು ಹಟ ಹಿಡಿದಿರು

ತ್ತಾಳೆ, ನೀವು ಆಜ್ಞೆಯನ್ನು ಕೊಟ್ಟರೆ ನಾನು ಅವಳನ್ನೂ ಸಂಗಡ ಕರೆದುಕೊಂಡು ಹೋಗುವೆ'' ಎಂದು ಹೇಳಿದನು. ಕೂಡಲೆ ವಶಿಷ್ಠರು ಅಂತರ್ಜ್ಞಾನದಿಂದ ಎಲ್ಲ ಸಂಗತಿಯನ್ನು ತಿಳಿದುಕೊಂಡು "ಎಲೈ ಶ್ರೀರಾಮಚಂದ್ರನೇ, ಸೀತೆಯನ್ನು ನಿನ್ನ ಸಂಗಡ ಕರೆದು ಕೊಂಡು ಹೋಗು; ನಿಮ್ಮಿಬ್ಬರ ರಕ್ಷಣೆಗಾಗಿ ಲಕ್ಷ್ಮಣನನ್ನು ಕರೆದು ಕೊಂಡು ಹೋಗು" ಎಂದು ಅಪ್ಪಣೆ ಕೊಟ್ಟರು. ಕೂಡಲೆ ಅವರು ವಶಿಷ್ಠರ ಕಡೆಯಿಂದ ತಮ್ಮ ಶಸ್ತ್ರಾಸ್ತ್ರಗಳನ್ನಿಸಿದುಕೊಂಡರು. ಮತ್ತು ತಮ್ಮ ವಸ್ತ್ರಾಭರಣಗಳನ್ನೆಲ್ಲ ಗುರುಪುತ್ರರಿಗೆ ದಾನ ಮಾಡಿ ದರು. ಅದರಂತೆ ಸೀತೆಯೂ ಸಹ ತನ್ನ ವಸ್ತ್ರಾಲಂಕಾರಗಳನ್ನು ಋಷಿಪತ್ನಿಯರಿಗೆ ದಾನಕೊಟ್ಟಳು; ಈ ಅವರ ಸೌಜನ್ಯವನ್ನು ನೋಡಿ ಮತ್ತು ಅವರು ವನಕ್ಕೆ ತೆರಳುವವನ್ನು ಕಂಡು ಅಯೋಧ್ಯಾ ವಾಸಿಯ ಜನರು ದುಃಖಸಾಗರದಲ್ಲಿ ಮುಳುಗಿದರು.

ಕೂಡಲೆ ಶ್ರೀರಾಮಚಂದ್ರನು ಅಲ್ಲಿಂದ ಹೊರಟು ವನಕ್ಕೆ ತೆರ ಳುವ ಮೊದಲು ತಂದೆಯ ಅಪ್ಪಣೆ ಪಡೆಯಬೇಕೆಂದು ಕೈಕೇಯಿ ಮಾತೆಯ ಮಂದಿರಕ್ಕೆ ಬಂದನು. ಮತ್ತು ದಶರಥನ ಬಳಿಗೆ ಹೋಗಿ ಸಾಷ್ಟಾಂಗವೆರಗಿ ಅಪ್ಪಣೆಯನ್ನು ಬೇಡಿದನು. ಆಗ ದಶರಥನು "ಮಗನೇ, ನಾನು ಬಲು ಪಾಪಿ, ನಿನ್ನನ್ನು ವನಕ್ಕೆ ಕಳಿಸಿ ನಾನೆಂತು

ಬದುಕಬೇಕು? ನೀನಿಲ್ಲದೇ ನನ್ನ ಪ್ರಾಣವು ಒಂದು ಕ್ಷಣವಾದರೂಸಹ ನಿಲ್ಲುವದಿಲ್ಲ, ಕೂಡಲೆ ಅದು ಹಾರಿಹೋಗುವದು'' ಎಂದು ಬಹು ಪರಿಪರಿಯಿಂದ ದುಃಖಿಸಹತ್ತಿದನು. ಬಳಿಕ ತುಸು ತಡೆದು—ಎಲೈ ರಾಮಚಂದ್ರನೇ, ನೀನೊಬ್ಬನೇ ಹೀಗೆ ವನಕ್ಕೆ ತೆರಳಬೇಡ. ಸಂಗಡ ಚತುರಂಗ ಬಲ ಸೈನ್ಯಕರೆದುಕೋ'' ಎಂದು ಹೇಳಿದನು. ಆಗ ರಾಮ ಚಂದ್ರನು "ತಾತನೇ, ನಾನು ತಪಸ್ಸಿಗಾಗಿ ವನಕ್ಕೆ ತೆರಳುತ್ತಿರುವಾಗ

ಆ ಚತುರಂಗ ಸೈನ್ಯದ ಉಪಯೋಗವೇನು? ನನಗೆ ನಾರು ಬಟ್ಟೆಗಳಿದ್ದರೆ ಸಾಕು; ಅವನ್ನೇ ನಾನು ಉಟ್ಟುಕೊಂಡು ವನಕ್ಕೆ ತೆರಳುವೆನು" ಎಂದನು. ಈ ಮಾತುಗಳನ್ನು ಕೇಳಿ ಅಲ್ಲಿ ನಿಂತಿರುವ ಕೈಕೇಯಿಯು ಕೂಡಲೆ ನಾರಿನ ಬಟ್ಟೆಗಳನ್ನು ತಂದು ಕೊಟ್ಟಳು. ಆಗ ಶ್ರೀರಾಮಚಂದ್ರನು ತನ್ನ ಮೈಮೇಲಿನ ಉಡುಪನ್ನೆಲ್ಲ ಇಳಿಸಿ ನಾರ ಬಟ್ಟೆಯನ್ನುಟ್ಟುಕೊಂಡನು. ಅದರಂತೆ ಲಕ್ಷ್ಮಣನು ಸಹ ಧರಿಸಿದನು. ಆದರೆ ಸೀತೆಗೆ ಮಾತ್ರ ನಾರಿನ ಸೀರೆಯನ್ನುಟ್ಟುಕೊಳ್ಳಲು ಬರಲೊಲ್ಲದು; ಅವಳು ರಾಮಚಂದ್ರನಕಡೆಗೆ ನೋಡುತ್ತ ನಿಂತು ಬಿಟ್ಟಳು. ಆಗ ರಾಮಚಂದ್ರನು ಮುಂದೆ ಬಂದು ಅವಳಿಗೆ ಆ ನಾರು ಸೀರೆಯನ್ನುಡಿಸಿದನು. ಈ ರೀತಿಯಾಗಿ ಅವರು ಮೂವರೂ ವನಕ್ಕೆ ಹೊರಡಲು ಸಿದ್ಧರಾದರು. ಆಗ ದಶರಥನು ಬಹಳೇ ಶೋಕಾಕುಲನಾಗಿ "ನಾನೇನು ಮಾಡಲಿ? ನಾನು ವಚನಬದ್ಧನಾಗಿರುವೆನು; ಇಲ್ಲದಿದ್ದರೆ ಆ ದುಷ್ಟಳಾದ ಕೈಕೇಯಿಯ ಶಿರಚ್ಛೇದವನ್ನು ಮಾಡಿ ಬಿಡುತ್ತಿದ್ದೆ" ಎಂದು ಅತಿ ದುಃಖದಿಂದ ಅನ್ನಹತ್ತಿದನು. ಆಗ ರಾಮಚಂದ್ರನು "ತಾತನೇ, ಶೋಕಿಸಬೇಡ; ನಾನು ಹದಿನಾಲ್ಕು ವರ್ಷ ಮುಗಿದನಂತರ ಮರಳಿ ಬಂದು ನಿನ್ನ ಚರಣಸೇವೆಯನ್ನು ಮಾಡುವೆನು" ಎಂದು ಹೇಳಿದನು. ಮತ್ತು ತಂದೆಯ ಚರಣಕ್ಕೆ ನಮಸ್ಕರಿಸಿ "ನನ್ನನ್ನು ಆಶೀರ್ವದಿಸಿ ಅಪ್ಪಣೆ ಕೊಡಬೇಕು" ಎಂದು ಬೇಡಿಕೊಂಡನು. ಅಷ್ಟರಲ್ಲಿ ವಶಿಷ್ಠಗುರುಗಳು ಅಲ್ಲಿಗೆ ಬಂದು ಆ ಮೂವರಿಗೂ ಆಶೀರ್ವದಿಸಿ ದಶರಥನಿಗೆ ಸಮಾಧಾನವನ್ನು ಹೇಳಿದರು. ಆಗ ದಶರಥನು "ಶ್ರೀರಾಮಚಂದ್ರಾ, ನೀನು ಇಲ್ಲಿಂದ ರಥದಲ್ಲಿ ಕುಳಿತು ಹೊರಡು" ಎಂದು ಹೇಳಿ ಸುಮಂತನಿಗೆ ಸಾರಥಿಯಾಗಲು ಹೇಳಿದನು; ಕೂಡಲೆ ರಥವು ಸಿದ್ಧವಾಯಿತು. ರಾಮಚಂದ್ರನು ರಥದಲ್ಲಿ ಕುಳಿತು ದಶರಥನ ಕಡೆಯ ಭೆಟ್ಟಿಯನ್ನು ತೆಗೆದುಕೊಂಡು

ಹೊರಟೇಬಿಟ್ಟನು, ಆಗ ಅಯೋಧ್ಯೆಯ ಜನರ ದುಃಖವನ್ನು ವರ್ಣಿಸುವದು ಬಲು ಅಸಾಧ್ಯವಾಯಿತು.

ಈ ರೀತಿಯಾಗಿ ರಥದಲ್ಲಿ ಕುಳಿತು ಹೊರಟಾಗ ಊರ ಜನರೆಲ್ಲರೂ ಅವನ ರಥದ ಹಿಂದಿನಿಂದ ಸಾಗಿದರು. ಆಗ ಶ್ರೀರಾಮಚಂದ್ರನು ಕೈಜೋಡಿಸಿ “ ನಗರ ವಾಸಿಗಳೇ, ನೀವು ಹಿಂದೆ ತಿರುಗಿರಿ; ರಾಜನಾದ ದಶರಥನು ನಿಮ್ಮನ್ನು ಸಂರಕ್ಷಿಸುವನು ; ನೀವು ಸ್ವಲ್ಪವೂ ಸಹ ಚಿಂತಿಸಬೇಡಿರಿ, ಕೂಡಲೆ ನೀವು ನಿಮ್ಮ ಮನೆಗಳಿಗೆ ಹೋಗಿರಿ. ನಾನು ಹದಿನಾಲ್ಕು ವರ್ಷ ಮುಗಿದನಂತರ ಬಂದು ಭೆಟ್ಟಿಯಾಗುವೆನು ” ಎಂದು ಹೇಳಿದನು. ಆದರೂ ಆ ಜನರು ಆತನ ಮಾತನ್ನು ಕೇಳದೆ ಸಂಗಡ ಹೊರಟೇಬಿಟ್ಟರು. ಇಷ್ಟರಲ್ಲಿ ಸೂರ್ಯಾಸ್ತ ಸಮಯವಾಯಿತು; ಆಗ ಸುಮಂತನು ಅಲ್ಲಿಯೇ ಅಯೋಧ್ಯೆಗೆ ಸಮೀಪದಲ್ಲಿರುವ ಅಡವಿಯಲ್ಲಿ ರಥವನ್ನು ನಿಲ್ಲಿಸಿ “ ಇಂದಿನ ರಾತ್ರಿಯನ್ನು ಇಲ್ಲಿ ಕಳೆದು ಮರುದಿವಸ ಇಲ್ಲಿಂದ ಹೊರಡೋಣ ಎನ್ನಲು ಎಲ್ಲರೂ ಅಲ್ಲಿಯೇ ಉಳಿದರು.

ಇತ್ತ ಸೂರ್ಯಾಸ್ತವಾದಕೂಡಲೆ ದಶರಥನು ಪ್ರಧಾನಿಯ ಕೈಯನ್ನು ಹಿಡಿದುಕೊಂಡು ಕೌಸಲ್ಯೆಯ ಮಂದಿರಕ್ಕೆ ಬಂದನು; ಆಗ ದಶರಥನ ಎಲ್ಲ ಸ್ತ್ರೀಯರು ಕೌಸಲ್ಯೆಯ ಸುತ್ತಮುತ್ತು ಕುಳಿತುಕೊಂಡು ಒಂದೇಸವನೆ ಶೋಕಿಸಹತ್ತಿದರು; ಮತ್ತು “ ನಾವು ವಿಷವನ್ನು ಕುಡಿದು ಪ್ರಾಣವನ್ನು ಕೊಡುವೆವು ” ಎಂದು ನಿರ್ಧರಿಸಿ ವಿಷವನ್ನು ತರಿಸಿದರು. ಆಗ ವಶಿಷ್ಠರು ಅಲ್ಲಿಗೆ ಬಂದು ಅವರೆಲ್ಲರನ್ನೂ ಸಮಾಧಾನಗೊಳಿಸಿ ವಾಲ್ಮೀಕಿಯು ಬರೆದಿರುವ ಭವಿಷ್ಯವನ್ನು ಅವರ ಮುಂದೆ ಹೇಳಿದರು. ಆಗ ಅವರೆಲ್ಲರೂ ಗುರುವಚನವೇ ಪ್ರಮಾಣವೆಂದು ತಿಳಿದು ವಿಷ ಕುಡಿಯುವದನ್ನು ತ್ಯಜಿಸಿದರು.

ಇತ್ತ ವನದಲ್ಲಿ ಎಲ್ಲ ಪ್ರಜೆಗಳು ತನ್ನ ಸುತ್ತಮುತ್ತಲೂ ಮಲಗಿರುವದನ್ನು ಕಂಡು ಶ್ರೀರಾಮಚಂದ್ರನು ಮೂರು ಘಳಿಗೆ ರಾತ್ರಿಯಾದನಂತರ ಎದ್ದು ಸುಮಂತನನ್ನು ಎಬ್ಬಿಸಿ " ರಥವನ್ನು ಇಲ್ಲಿಂದ ಬೇಗನೆ ಹೊರಡಿಸಬೇಕು " ಎಂದು ಹೇಳಿದನು. ಮತ್ತು ಲಕ್ಷ್ಮಣ, ಸೀತೆಯರನ್ನೆಬ್ಬಿಸಿ ರಥದಲ್ಲಿ ಕುಳಿತುಕೊಂಡು ಆಕಾಶಮಾರ್ಗವಾಗಿ ಹೊರಟರು. ಆದರೆ ರಥದ ಗಾಲಿಗಳು ಅಯೋಧ್ಯೆಯ ಮಾರ್ಗವಾಗಿ ಹೋದಂತೆ ಕಾಣಿಸುವಂತೆ ಮಾಡಿದನು. ಶೃಂಗವೇರದ ಹತ್ತಿರ ಭಾಗೀರಥಿನದಿಯ ದಂಡೆಯ ಮೇಲಿರುವ ಗೂಹಕನ ವಾಸ್ತವ್ಯದ ಹತ್ತಿರ ರಥವು ಬಂದು ನಿಂತಿತು. ಆಗ ಬೆಳಗಾಗಿದ್ದಿತು ರಾಮ, ಲಕ್ಷ್ಮಣ, ಸೀತಾ ಮತ್ತು ಸುಮಂತ ಇವರೆಲ್ಲರೂ ಭಾಗೀರಥಿಸ್ನಾನವನ್ನು ಮಾಡಿದರು. ಅನಂತರ ಶ್ರೀರಾಮಚಂದ್ರನು ಭಾಗೀರಥಿಯನ್ನು ಸ್ತುತಿಸಿ ತನ್ನ ನಿತ್ಯ-ನೈಮಿತ್ತಿಕ ಕರ್ಮಗಳನ್ನೆಲ್ಲ ಮುಗಿಸಿ ಒಂದು ಆಲದ ಮರದ ಕೆಳಗೆ ದರ್ಭಾಸನವನ್ನು ಹಾಕಿ ಅದರಮೇಲೆ ಕುಳಿತುಕೊಂಡನು. ಮತ್ತು ಲಕ್ಷ್ಮಣನನ್ನು ಕರೆದು ಆಲದ ಮರದ ಹಾಲನ್ನು ತರಿಸಿ ಲಕ್ಷ್ಮಣಸಹಿತನಾಗಿ ತಮ್ಮ ಕೂದಲುಗಳಿಗೆ ಒರಿಸಿಕೊಂಡು ಜಡೆಯನ್ನು ಕಟ್ಟಿಕೊಂಡರು. ಮತ್ತು ಸರ್ವಾಂಗಕ್ಕೆ ಭಸ್ಮವನ್ನು ಪೂಸಿಕೊಂಡು ಯೋಗಿಗಳಾದರು.

ಇತ್ತ ಬೆಳಗಾದನಂತರ ರಥದ ಸುತ್ತಮುತ್ತಲೂ ಮಲಗಿದ ಜನರು ಎಚ್ಚತ್ತು ನೋಡುವಷ್ಟರಲ್ಲಿ ರಾಮ-ಲಕ್ಷ್ಮಣರೂ ಮತ್ತು ರಥವೂ ಕಾಣಿಸಲಿಲ್ಲ. ಆಗ ಅವರು ಶೋಕಾಕುಲರಾಗಿ ಅತ್ತಿತ್ತ ನೋಡುವಷ್ಟರಲ್ಲಿ ರಥಚಕ್ರಗಳು ಅಯೋಧ್ಯೆಯ ಮಾರ್ಗವಾಗಿ ಹೊರಟಂತೆ ಕಂಡು ಬಂದಿತು. ಕೂಡಲೆ ಅವರೆಲ್ಲರು ಮರಳಿ ಅಯೋಧ್ಯೆಗೆ ಬಂದು ನೋಡುವಷ್ಟರಲ್ಲಿ ರಾಮ-ಲಕ್ಷ್ಮಣರು ಅಲ್ಲಿ ಕಾಣಿಸಲಿಲ್ಲ

ಕಾರಣ ಅವರು ನಿರುಪಾಯರಾಗಿ ರಾಮವಿಯೋಗದಿಂದ ವಿರಕ್ತ ರಾದರು.

ಇತ್ತ ರಾಮ–ಲಕ್ಷ್ಮಣರು ತಮ್ಮ ಬೆಳಗಿನ ನಿತ್ಯಕರ್ಮವನ್ನು ತೀರಿಸಿದನಂತರ ಗಂಗೆಯನ್ನು ದಾಟಿ ಹೋಗುವದರ ಸಲುವಾಗಿ ಗೂಹಕನೆಂಬ ಅಂಬಿಗನನ್ನು ಕರೆಕಳುಹಿದರು. ಮತ್ತು “ ನಮ್ಮನ್ನು



ಗೂಹಕನು ರಾಮಪೂಜೆ ಮಾಡಿದ್ದು

ಆಚೆಯ ದಂಡೆಗೆ ಮುಟ್ಟಿಸಬೇಕು ” ಎಂದು ಹೇಳಿದರು. ಆಗ ಆವನು “ ನೀವಾರು ? ಎಲ್ಲಿಂದ ಬಂದಿರುವಿರಿ ? ” ಎಂದು ಕೇಳಿ ದನು. ಕೂಡಲೆ ಶ್ರೀರಾಮಚಂದ್ರನು “ ಎಲೈ ಅಂಬಿಗನೇ, ನಾನು

ಅಯೋಧ್ಯಾಪತಿಯಾದ ದಶರಥರಾಜನ ಮಗನು; ನನಗೆ ರಾಮಚಂದ್ರನೆನ್ನುವರು” ಎಂದು ಹೇಳಿದನು. ಆಗ ಅಲ್ಲಿಯೇ ನಿಂತಿರುವ ಗೂಹಕನ ತಾಯಿಯು ಆ ಮಾತನ್ನು ಕೇಳಿ “ಎಲೈ ಮಗನೇ, ನೀನು ಈತನನ್ನು ಡೋಣಿಯಲ್ಲಿ ಕುಳ್ಳಿರಿಸಬೇಡ. ಏಕೆಂದರೆ-ಹಿಂದಕ್ಕೆ ಈತನ ಚರಣ ಸ್ಪರ್ಶದಿಂದ ಒಂದು ಕಲ್ಲು ಸ್ತ್ರೀಯರೂಪವನ್ನು ಹೊಂದಿತು. ಎಂದು ನಾನು ಕೇಳಿದ್ದೇನೆ. ನಾವು ಬಡವರು ಈತನ ಚರಣ ಸ್ಪರ್ಶದಿಂದ ನಿನ್ನ ಡೋಣಿಯು ಸ್ತ್ರೀರೂಪ ಹೊಂದೀತು. ನಿನಗೆ ನಿನ್ನ ಮೊದಲನೆಯ ಹೆಂಡತಿಯ ಹೊಟ್ಟೆ ತುಂಬಿಸುವದೇ ಕಷ್ಟ. ಆಗ ನೀನು ಈ ಎರಡನೆಯ ಹೆಂಗಸಿನಿಂದ ತೊಂದರೆ ಪಡಬೇಕಾದೀತು” ಎಂದು ಹೇಳಿದಳು. ತನ್ನ ತಾಯಿಯು ಈ ಮಾತನ್ನು ಕೇಳಿ ಗೂಹಕನು ಬಹಳೇ ಕೋಪಿಸಿ “ಮಾತೇ, ನಿನಗೆ ನಿಜ ಸಂಗತಿಯು ತಿಳಿಯಲಾರದು ಕಾರಣ ನೀನು ಸುಮ್ಮನಿರು” ಎಂದು ಹೇಳಿದನು. ಮತ್ತು ಶ್ರೀರಾಮಚಂದ್ರನನ್ನು ತನ್ನ ವಾಸ್ತವ್ಯಕ್ಕೆ ಕರೆದುಕೊಂಡು ಬಂದು ಫಲ-ಪುಷ್ಪಗಳನ್ನು ತಂದು ಷೋಡಶೋಪಚಾರಗಳಿಂದ ಪೂಜಿಸಿ ಆತನ ಪಾದಗಳನ್ನು ಗಟ್ಟಿಯಾಗಿ ಹಿಡಿದು “ಹೇ ದಯಾಸಾಗರನಾದ ರಾಮಚಂದ್ರನೇ, ನೀನು ಮರಳಿ ಅಯೋಧ್ಯೆಗೆ ಬರುವವರೆಗೆ ನಾನು ನನ್ನಎಲ್ಲ ಸುಖೋಪಭೋಗ ತ್ಯಜಿಸುವೆನು”ಎಂದು ಪ್ರತಿಜ್ಞೆ ತೊಟ್ಟನು. ಆತನ ಪ್ರೇಮಳ ಭಕ್ತಿಯನ್ನು ಕಂಡು ಶ್ರೀರಾಮಚಂದ್ರನು ಬಹಳ ಆನಂದಿತನಾಗಿ ಗೂಹಕನನ್ನು ಶಾಂತಪಡಿಸಿದನು. ಕೂಡಲೆ ಅವರೆಲ್ಲರೂ ಬಂದು ಡೋಣಿಯಲ್ಲಿ ಕುಳಿತರು. ಮತ್ತು ರಾಮನು ಸುಮಂತನನ್ನು ಕರೆದು “ನೀನು ಮರಳಿ ಅಯೋಧ್ಯೆಗೆ ಹೋಗಿ ಎಲ್ಲರನ್ನೂ ಶಾಂತಗೊಳಿಸು” ಎಂದು ಹೇಳಿದನು. ಆಗ ಸುಮಂತನು “ನೀವು ಬರುವವರೆಗೆ ನಾನು ಇಲ್ಲಿಯೇ ಇರುವೆನು ಕಾರಣ ನಾನು ಬರಿಯ ರಥವನ್ನು ತೆಗೆದುಕೊಂಡು ಹೋದರೆ ದಶರಥ-ಕೌಸಲ್ಯೆಯರು

ಪ್ರಾಣವನ್ನೇ ಕೊಡುವರು, ಮತ್ತು ಅವರ ಪಾಪವು ನನಗೆ ತಟ್ಟು ವದು” ಎಂದು ಹೇಳಿದನು. ಅನಂತರ ಶ್ರೀರಾಮಚಂದ್ರನು ಆತನನ್ನು ಸಮಾಧಾನಗೊಳಿಸಿ ಅವನ ಮಸ್ತಕದಮೇಲೆ ತನ್ನ ವರದ ಹಸ್ತವನ್ನಿಟ್ಟನು. ಮುಂದೆ ಶ್ರೀರಾಮಚಂದ್ರನು ಆಚೆಯ ದಡಕ್ಕೆಹೋಗಿ




ಜಾನಕೀ ಲಕ್ಷ್ಮಣೋಪೇತ ಜಟಾಮುಕುಟಮಂಡಿತ ರಾಮ

ಮುಟ್ಟುವವರೆಗೆ ಸುಮಂತನು ನೋಡುತ್ತ ನಿಂತುಕೊಂಡನು ನಂತರ ಅವರು ಅವನಿಗೆ ಮರಳಿ ಹೋಗಲು ಸನ್ನೆಯನ್ನು ಮಾಡಿದರು.

ಇತ್ತ ರಾಮನು ಲಕ್ಷ್ಮಣ, ಸೀತೆಯರ ಸಹಿತವಾಗಿ ಅಲ್ಲಿಂದ ಹೊರಟು ಒಂದು ರಾತ್ರಿ, “ಪುಷ್ಕರ”ಎಂಬ ತೀರ್ಥದ ಬಳಿಗೆ ಬಂದು ನಿಂತು ಬಳಿಕ ಪ್ರಯಾಗಕ್ಕೆ ಬಂದನು. ಅಲ್ಲಿಂದ ಭಾರದ್ವಾಜಋಷಿಗಳ ಆಶ್ರಮದ ಸಮೀಪಕ್ಕೆ ಬಂದನು. ಕೂಡಲೆ ಭಾರದ್ವಾಜ ಋಷಿಗಳು ತಮ್ಮ ಶಿಷ್ಯಸಮೇತರಾಗಿ ಆತನನ್ನು ಎದುರ್ಗೊಂಡು ತಮ್ಮ ಆಶ್ರಮಕ್ಕೆ ಕರೆದುಕೊಂಡು ಬಂದರು. ಆಗ ಅಲ್ಲಿರುವ ಸುತ್ತಮುತ್ತ

ಲಿನ ಎಲ್ಲ ಋಷಿಸಮುದಾಯವು ಶ್ರೀರಾಮಚಂದ್ರನ ಸುತ್ತಲೂ ಬಂದು ನೆರೆದು “ನೀನು ಮುಂದೆ ಹೋಗಬೇಡ ಇಲ್ಲಿಯೇ ಇರು” ಎಂದು ಪರಿಯಿಂದ ಹೇಳಿದರು. ಆಗ ಶ್ರೀರಾಮನು ಅವರೆಲ್ಲರನ್ನು ಸಮಾಧಾನಗೊಳಿಸಿ ಆ ರಾತ್ರಿ ಅಲ್ಲಿಯೇ ಕಳೆದನು. ಮರುದಿವಸ ಅಲ್ಲಿಂದ ಹೊರಟು ಸಿದ್ಧವಟಿ ಎಂಬ ಕ್ಷೇತ್ರಕ್ಕೆ ಬಂದರು. ಅಲ್ಲಿ ಶ್ರೀರಾಮಚಂದ್ರನು ಸಿದ್ಧವಟವೃಕ್ಷಕ್ಕೆ ನಮಸ್ಕರಿಸಿದನು. ಮತ್ತು ಸೀತೆಯು ವಟಸಾವಿತ್ರೀದೇವಿಯನ್ನು ಪೂಜಿಸಿ ಬೇಡಿಕೊಂಡಳು “ಮಾತೇ, ನಾವು ವಿಜಯಿಗಳಾಗಿ ಮರಳಿ ಅಯೋಧ್ಯೆಗೆ ಬರುವಾಗ ಈ ಸ್ಥಾನದಲ್ಲಿ ಇಳಿದು, ಎರಡು ಲಕ್ಷ ಆಕಳುಗಳನ್ನು ದಾನಕೊಡುವೆನು ಮತ್ತು ಬ್ರಾಹ್ಮಣಭೋಜನವನ್ನು ಮಾಡಿಸುವೆನು” ಎಂದಳು. ಮುಂದೆ ಅವರೆಲ್ಲ ಚಿತ್ರಕೂಟ ಪರ್ವತಕ್ಕೆ ಬಂದರು. ಅಲ್ಲಿ ವಾಲ್ಮೀಕರ ಆಶ್ರಮಕ್ಕೆ ಹೋಗಿ ಅವರಿಗೆ ಭೆಟ್ಟಿಯಾಗಿ ಅಲ್ಲಿಯೇ ಒಂದು ಪರ್ಣಕುಟೀರವನ್ನು ಕಟ್ಟಿಕೊಂಡು ಇರಹತ್ತಿದರು.

ಇತ್ತ ಸುಮಂತನು ತನ್ನ ರಥಸಹಿತನಾಗಿ ಮರಳಿ ಅಯೋಧ್ಯೆಗೆ ಬಂದನಂತರ ಅಲ್ಲಿಯ ಜನರೆಲ್ಲರೂ ಸುಮಂತನನ್ನು “ನೀನು ಶ್ರೀರಾಮಚಂದ್ರನನ್ನು ಎಲ್ಲಿ ಬಿಟ್ಟಿ?” ಎಂದು ಶೋಕಿಸತೊಡಗಿದರು. ಕೂಡಲೆ ಸುಮಂತನು ತನ್ನ ರಥವನ್ನು ಕೌಸಲ್ಯೆಯಮಂದಿರದ ಮುಂದೆ ತಂದು ನಿಲ್ಲಿಸಿದನು. ಆಗ ದಶರಥನು ಸುಮಂತನ ಬಳಿಗೆ ಬಂದು “ಸುಮಂತಾ, ನನ್ನ ಕಂದನನ್ನು ಎಲ್ಲಿ ಬಿಟ್ಟಿ?” ಎಂದು ಶ್ರೀರಾಮಚಂದ್ರನ ಗುಣವನ್ನು ನೆನೆಸುತ್ತ ಒಂದೇಸವನೆ ದುಃಖಿಸಹತ್ತಿದನು. ಆಗ ಸುಮಂತನು ಗದ್ಗದಿತ ಕಂಠದಿಂದ “ರಾಮಚಂದ್ರನು ಭಾಗೀರಥಿಯನ್ನು ದಾಟಿ ಆಚೆಯ ದಡಕ್ಕೆ ಹೋದದ್ದನ್ನು ನಾನು ಕಂಡೆನು; ಅಲ್ಲಿಂದ ಅವರು ನನಗೆ ತಿರುಗಿ ಹೋಗಲು ಸನ್ನೆ ಮಾಡಿ ತಾವು ಕಾಲುನಡಿಗೆಯಿಂದ ಮುಂದೆ ಹೋದರು” ಎಂದು

ಸೀತಾದೇವಿಯು ಶ್ರೀರಾಮಚಂದ್ರನ ಪಾದಸೇವೆ ಮಾಡುತ್ತಿರುವಳು

ಹೇಳಿದನು. ಈ ಸುಮಂತನ ಮಾತನ್ನು ಕೇಳಿ ದಶರಥನು ಎದೆ ಎದೆ ಬಡೆದುಕೊಂಡು “ ಹಾ ರಾಮಚಂದ್ರಾ ! ನೀನು ನನ್ನನ್ನಗಲಿ ಎಲ್ಲಿ ಹೋದೆ ?” ಎಂದು ಮರಗುತ್ತ ಪ್ರಾಣಬಿಟ್ಟನು!.

ಈ ರೀತಿಯಾಗಿ ಶ್ರೀರಾಮಚಂದ್ರನಿಗೆ ವನವಾಸವು ಆರಂಭ ವಾಯಿತು.

## ೧೧. ಭರತನ ಭೆಟ್ಟಿ

ಅಹಹಾ ! ನೋಡಿದಿರಾ ಕರ್ಮದ ಗತಿಯು ಎಷ್ಟು ವಿಚಿತ್ರ ವಾಗಿರುವದು. ದಶರಥ ಮಹಾರಾಜರಿಗೆ ನಾಲ್ಕುಮಂದಿ ಮಕ್ಕಳಿದ್ದರೂ ಕೂಡ ಅಂತ್ಯಕಾಲದಲ್ಲಿ ಒಬ್ಬನೂ ಸಹ ಹತ್ತಿರ ಇರಲಿಲ್ಲ. ಅಂಥವರ ಗತಿ ಹೀಗಾದಮೇಲೆ ನಮ್ಮಂಥವರ ಪಾಡೇನು ? ಅಂತೆಯೇ ಸುಮಂತ ಪ್ರಧಾನನು ದಶರಥನ ಮರಣಕಾಲದಲ್ಲಿ ತನ್ನ ತೊಡೆಯನ್ನು ಕೊಡಬೇಕಾಯಿತು. ಕೂಡಲೆ ಕೌಸಲ್ಯಾ, ಸುಮಿತ್ರಾ ಮತ್ತು ದಶರಥನ ಇತರ ಏಳುನೂರು ಜನ ಸ್ತ್ರೀಯರು ಹತ್ತಿರ ಬಂದು ಎದೆ ಎದೆ ಬಡೆದುಕೊಂಡು ಒಂದೇಸವನೆ ಶೋಕಿಸಹತ್ತಿದರು. ಕೌಸಲ್ಯಾ, ಸುಮಿತ್ರೆಯರಿಗೆ ಮೊದಲೇ ಶ್ರೀರಾಮ—ಲಕ್ಷ್ಮಣರ ವಿಯೋಗದ ದುಃಖವು, ಅದರಲ್ಲಿ ಪತಿಯು ಮರಣ; ಅಂದಮೇಲಂತೂ ಅವರ ದುಃಖಕ್ಕೆ ಎಣೆಯೇ ಇಲ್ಲದಾಯಿತು. ಆಗ ಅವರು ಸತಿ ಹೋಗಲು ಸಿದ್ಧರಾದರು; ಅಷ್ಟರಲ್ಲಿ ವಶಿಷ್ಠಗುರುಗಳು ಅಲ್ಲಿಗೆ ಬಂದು ಅವರನ್ನು ಶಾಂತಗೊಳಿಸಿ “ ಇನ್ನು ನೀವು ದುಃಖಿಸಬೇಡಿರಿ. ವ್ಯರ್ಥ ಶೋಕಿಸಿದರೆ ಪ್ರಯೋಜನವಿಲ್ಲ. ಕಾರಣ ನಾವು ಮೊದಲು ಭರತನನ್ನು ಕರೆತರುವ ಯೋಜನೆಯನ್ನು ಮಾಡಬೇಕು ಮಗನ ಪಟ್ಟಗಟ್ಟಿದ ಹೊರತಾಗಿ ಅರಸನ ಪ್ರೇತವನ್ನು ದಹಿಸಲು ಬರುವದಿಲ್ಲ. ಎಂದು

ಹೇಳಿ ಅಲ್ಲಿಯವರೆಗೆ ದಶರಥಮಹಾರಾಜನ ಶವವನ್ನು ಒಂದು ಎಣ್ಣೆಯ ಕಡಾಯಿಯಲ್ಲಿ ಹಾಕಿಟ್ಟರು. ಕೂಡಲೆ ಸುಮಂತನನ್ನು ಕರೆದು ರಥ ಸಹಿತವಾಗಿ ಭರತನನ್ನು ಕರೆತರಲು ಕಳಿಸಿದರು. ಮತ್ತು "ಸುಮಂತಾ ನೀನು ಈ ಸಂಗತಿಯನ್ನು ಭರತನ ಮುಂದೆ ಆಗಲಿ ಮತ್ತಾರ ಮುಂದಾಗಲಿ ಹೇಳವೆ ನಾಳೆ ಸೂರ್ಯೋದಯದ ಒಳಗಾಗಿ ಭರತನನ್ನು ಇಲ್ಲಿಗೆ ಕರೆದುಕೊಂಡು ಬಾ. ನೀನು ನಿಜ ಸಂಗತಿಯನ್ನು ಆತನಿಗೆ ಹೇಳಿದರೆ ಅವನು ಕೂಡಲೆ ಪ್ರಾಣ ಬಿಡುವನು. ಕಾರಣ ನೀನು ಇವನ್ನು ಜ್ಞಾಪಕದಲ್ಲಿಟ್ಟುಕೊಂಡು ಆದಷ್ಟು ತೀವ್ರವಾಗಿ ಬರಬೇಕು" ಎಂದು ಹೇಳಿದರು.

ಇತ್ತ ಹಾ! ಹಾ! ಎನ್ನುವಷ್ಟರಲ್ಲಿ ದಶರಥನು ಮೃತಪಟ್ಟ ನೆಂಬ ಸುದ್ದಿಯು ಅಯೋಧ್ಯೆಯಲ್ಲೆಲ್ಲ ಹಬ್ಬಿತು. ಕೂಡಲೆ ನಗರ ವಾಸಿಗಳು ಗುಂಪು ಗುಂಪಾಗಿ ಕೌಸಲ್ಯೆಯ ಮಂದಿರದ ಕಡೆಗೆ ಸಾಗಿ ದರು. ಮತ್ತು ದಶರಥಮಹಾರಾಜನ ಅಂತ್ಯ ದರ್ಶನವನ್ನು ತೆಗೆದು ಕೊಂಡು ಕೈಕೇಯಿಯನ್ನು ಹಳಿಯುತ್ತ ದುಷ್ಟಳಾದ ಹೆಂಗಸೇ "ನಿನಗೆ ವೈಧವ್ಯವು ರುಚಿಸಿತಲ್ಲವೇ" ಎಂದು ನುಡಿದರು. ಮತ್ತು ಕೌಸಲ್ಯೆ-ಸುಮಿತ್ರೆಯರನ್ನು ಸಮಾಧಾನಗೊಳಿಸಿ ತಮ್ಮ ತಮ್ಮ ಮನೆಯಕಡೆಗೆ ಸಾಗಿದರು. ಈ ರೀತಿಯಾಗಿ ಅಯೋಧ್ಯಾನಗರವು ದುಃಖಸಾಗರದಲ್ಲಿ ತೇಲುತ್ತಿತ್ತು.

ಇತ್ತ ಭರತನಿಗೆ ಮೊದಲನೆಯ ದಿನದ ರಾತ್ರಿಯಲ್ಲಿ ಒಂದು ದುಃಸ್ವಪ್ನವು ಬಿದ್ದಿತು. ಆದುದರಿಂದ ಆತನು ಬಹಳೇ ಚಿಂತಾತುರ ನಾಗಿ ಕುಳಿತಿದ್ದನು. ಆಗ ಆತನ ಸೋದರಮಾವನಾದ ಸಂಗ್ರಾಮ ಜಿತನು ಅಲ್ಲಿಗೆ ಬಂದು ಅವನನ್ನು ಸಮಾಧಾನಗೊಳಿಸಿ "ನಾಳಿನ ದಿನ ಬೆಳಗಾದಕೂಡಲೆ ನಿನ್ನನ್ನು ಅಯೋಧ್ಯೆಗೆ ಮುಟ್ಟಿಸುವೆ"

ಎಂದು ಹೇಳಿದನು. ಅಷ್ಟರಲ್ಲಿ ಬೆಳಗಿನ ತಂಗಾಳಿಯು ಬೀಸತೊಡಗಿತು. ಕೂಡಲೆ ಎಲ್ಲ ಪಕ್ಷಿಗಳು ತಮ್ಮ ಕಿಲಬಿಲ ಶಬ್ದ ಮಾಡುತ್ತ ಅತ್ತಿಂದಿತ್ತ ಇತ್ತಿಂದತ್ತ ಹಾರಾಡಹತ್ತಿದವು. ಆಗ ಭರತನು ಮಹಡಿಯಮೇಲೆ ಬಂದು ಅಯೋಧ್ಯೆಯಕಡೆಗೆ ಹೋಗುವ ದಾರಿಯನ್ನು ನಿರೀಕ್ಷಿಸತೊಡಗಿದನು ಆಗ ಆತನ ದೃಷ್ಟಿಗೆ ಒಂದು ರಥವು ಇತ್ತ ಕಡೆಗೆ ಅತಿ ವೇಗದಿಂದ ಓಡುತ್ತ ಬರುವದು ಕಂಡಿತು. ಮತ್ತು ಅದರಲ್ಲಿ ಕುಳಿತಿರುವ ಸಾರಥಿಯು ಅತಿ ದುಃಖದಿಂದ ಒಂದೇಸವನೆ ಕಣ್ಣನ್ನೊರಿಸಿಕೊಳ್ಳುವದನ್ನು ಕಂಡು ಗಾಬರಿಯಿಂದ ಶತ್ರುಘ್ನನನ್ನು ಕರೆದು ತಾನು ಓಡುತ್ತ ರಥದ ಬಳಿಗೆ ಹೋದನು. ಮತ್ತು ಸುಮಂತನನ್ನು ಕಂಡು " ಅಯೋಧ್ಯೆಯಲ್ಲಿ ಎಲ್ಲರೂ ಕ್ಷೇಮದಿಂದಿರುವರೆ? " ಎಂದು ಒಂದೇಸವನೆ ಕೇಳಹತ್ತಿದನು. ಆಗ ಸುಮಂತನು " ದಶರಥಮಹಾರಾಜರು ತಮ್ಮನ್ನು ಈಗಿಂದೀಗ ಕರೆದುಕೊಂಡು ಬರಲು ಹೇಳಿರುವರು " ಎಂದು ಅವರನ್ನು ರಥದಲ್ಲಿ ಕುಳ್ಳಿರಿಸಿಕೊಂಡು ವಾಯುವೇಗದಿಂದ ರಥವನ್ನು ನಡಿಸಿ ಎಲ್ಲರೂ ದಶರಥನ ಮಂದಿರಕ್ಕೆ ಬಂದರು.

ಅಲ್ಲಿ ಮಹಾರಾಜರು ಕಾಣದ್ದರಿಂದ ಕೈಕೇಯಿಮಾತೆಯ ಮಂದಿರದಲ್ಲಿರಬಹುದೆಂದು ಅಲ್ಲಿಗೆ ತ್ವರೆಮಾಡಿ ಬಂದರು; ಆಗ ಕೈಕೇಯಿಯು ಅವರನ್ನು ಕಂಡು ಬಹಳ ಸಂತೋಷದಿಂದ ಅವರನ್ನು ಸ್ವಾಗತಿಸಿ " ಊರಲ್ಲಿ ಎಲ್ಲರೂ ಕ್ಷೇಮದಿಂದಿರುವರೇ ? " ಎಂದು ಕೇಳಹತ್ತಿದಳು. ನಂತರ ಭರತನು ಮುಂದೆ ಬಂದು ಮಾತೆಯ ಚರಣಕ್ಕೆರಗಿ " ಎಲ್ಲರೂ ಕ್ಷೇಮದಿಂದಿರುವರು; ಆದರೆ ನನ್ನ ಪೂಜ್ಯ ತಾತನು ಎಲ್ಲಿರುವರು ? ಕೌಸಲ್ಯಾಮಾತೆಯ ಮಂದಿರಕ್ಕೆ ಹೋಗಿರುವರೇನು ? " ಎನ್ನುತ್ತ ಮೇಲಿಂದಮೇಲೆ ವಿಚಾರಿಸಹತ್ತಿದನು. ಆಗ ಆ ರಾಜ್ಯಲೋಭಿಯಾದ ಸ್ತ್ರೀಯು ಏನೂ ಅರಿಯದ

ಭರತನಿಗೆ "ಮಗನೇ, ಮಹಾತ್ಮನೂ, ಸತ್ಯಸಂಧನೂ, ಅತಿತೇಜಸ್ವಿಯೂ, ಅನೇಕ ಯಜ್ಞಯಾಗಾದಿಗಳನ್ನು ಮಾಡಿದವನೂ ಮತ್ತು ಸಜ್ಜನರನ್ನು ರಕ್ಷಿಸಿ ದುಷ್ಟರನ್ನು ಶಿಕ್ಷಿಸಿದವನೂ ಆದ ನಿನ್ನ ತಂದೆಯು ಎಲ್ಲ ಪ್ರಾಣಿ ಮಾತ್ರಗಳು ಕಡೆಗೆ ಯಾವ ಗತಿಯನ್ನು ಹೊಂದುತ್ತವೆಯೋ ಆ ಗತಿಯನ್ನು ಹೊಂದಿದನು" ಎಂದು ಹೇಳಿದಳು. ಭರತನು ಈ ಕಠೋರವಾದ ಮಾತನ್ನು ಕೇಳಿ "ಹಾ ತಂದೆಯೇ!" ಎಂದು ಶೋಕಿಸುತ್ತ ಭೂಮಿಯಮೇಲೆ ಬಿದ್ದನು. "ಮಾತೇ, ನಾನು ಯಾವ ಆಶೆಯಿಂದ ಇಲ್ಲಿಯವರೆಗೆ ಬಂದೆನೋ, ನಾನು ಇದನ್ನೇನು ಕೇಳುತ್ತಿರುವೆನೋ" ಎಂದನು. "ನನ್ನ ಪೂಜ್ಯ ತಂದೆಯು ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕವನ್ನು ಮಾಡುತ್ತಿರಬಹುದು; ಇಲ್ಲವಾದರೆ ಯಾವದಾದರೊಂದು ಯಜ್ಞವನ್ನು ಹೂಡಿರಬಹುದು; ಅದಕ್ಕಾಗಿಯೇ ವಶಿಷ್ಠಗುರುಗಳು ತೀವ್ರನಾಗಿ ನನ್ನನ್ನು ಕರೆಕಳುಹಿಸಿರಬಹುದು" ಎಂದು ನಾನು ನಂಬಿದ್ದೆನು; ಆದರೆ ಅವೆಲ್ಲವೂ ಮಿಥ್ಯವಾದವು. ಯಾವಾಗಲೂ ನನ್ನ ಹಿತವನ್ನು ಬಯಸುತ್ತಿರುವ ತಂದೆಯು ನನ್ನನ್ನು ಬಿಟ್ಟು ಸ್ವರ್ಗವಾಸಿಯಾದನಲ್ಲ! ಹಾ! ದೈವವೇ, ನನ್ನನ್ನಾದರೂ ಜೀವದಿಂದೇಕೆ ಇಟ್ಟಿರುವೆ! ಈಗಲೇ ಪ್ರಾಣವು ಹಾರಿಹೋಗಬಾರದೇ?" ಎಂದು ಬಹು ಪರಿಪರಿಯಾಗಿ ದುಃಖಿಸಿದನು. ಮತ್ತು "ಧನ್ಯ ಆ ನನ್ನಅಣ್ಣಂದಿರು. ಅವರು ಮರಣದ ಸಮಯದಲ್ಲಿ ತಂದೆಯ ಸೇವೆಯನ್ನು ಮಾಡಿದರು; ಮಾತೆಯೇ ತಂದೆಯವರಿಗೆ ಏನಾಗಿತ್ತು? ಇನ್ನು ಮುಂದೆ ನನ್ನ ಮೈಮೇಲೆ ಪ್ರೇಮದಿಂದ ಕೈಯಾಡಿಸುವವರು ಯಾರೂ ಇಲ್ಲವಲ್ಲ! ಇನ್ನು ನಾನು ಹಿರಿಯಣ್ಣನನ್ನೇ ತಂದೆಯ ಸಮಾನನಾಗಿ ತಿಳಿದುಕೊಂಡು ಅವನ ಆಜ್ಞೆಯನ್ನು ಪಾಲಿಸುವೆನು. ಕಾರಣ ಅವನಿಗೆ ನಾನು ಬಂದಿರುವ ಸುದ್ದಿಯನ್ನು ಮುಟ್ಟಿಸು" ಎಂದು ಹೇಳಿದನು. "ಆರ್ಯಳೇ, ನನ್ನ ತಂದೆಯು ಪ್ರಾಣವನ್ನು ಬಿಡು

ತ್ತಿರುವಾಗ ಏನಾದರೂ ಹೇಳಿರುವನೇ ?" ಎಂದು ಅತಿ ದುಃಖದಿಂದ ಕೇಳಿದನು.

ಆಗ ಕೈಕೇಯಿಯು " ಮಗು ಭರತಾ, ನಿನ್ನ ತಂದೆಯು ದೇಹ ವನ್ನು ಬಿಡುವಾಗ "ಹಾ ! ರಾಮಾ, ಹಾ! ಸೀತೆ, ಹಾ ! ಲಕ್ಷ್ಮಣಾ" ಎಂದು ಶೋಕಿಸುತ್ತ ಪ್ರಾಣವನ್ನು ತ್ಯಜಿಸಿದನು. ಕಾರಣವೇನಂದರೆ ರಾಜಪುತ್ರನಾದ ರಾಮನು ಸೀತಾ–ಲಕ್ಷ್ಮಣರ ಸಮೇತನಾಗಿ ನಾರು ಬಟ್ಟೆಗಳನ್ನುಟ್ಟು ದಂಡಕಾರಣ್ಯಕ್ಕೆ ವನವಾಸಕ್ಕೆಂದು ತೆರಳಿರುವನು " ಎಂದು ಹೇಳಿದಳು. ಮನುಷ್ಯನಿಗೆ ಒಮ್ಮೆ ದುಃಖವು ಬರಹತ್ತಿ ತೆಂದರೆ ಅವು ಒಂದರ ಹಿಂದೊಂದು ಬರುತ್ತವೆ. ಅಹಹಾ ! ಭರತ ನಿಗೆಸಹ ಅದರಂತೆಯೇ ಆಯಿತು. ಆತನು ತಂದೆಯ ಮರಣದ ಸಲು ವಾಗಿ ದುಃಖಿಸಬೇಕೋ, ಮತ್ತು ರಾಮ—ಲಕ್ಷ್ಮಣರು ವನಕ್ಕೆ ತೆರಳಿ ದರೆಂದು ದುಃಖಿಸಬೇಕೋ ತಿಳಿಯದಾಯಿತು ಆಗ ಅವನು ದುಃಖಾತಿಶಯದಿಂದ " ಮಾತೇ, ರಾಮ-ಲಕ್ಷ್ಮಣರು ವನವಾಸ ಕ್ಕೆತೆರ ಳಲು ಕಾರಣವೇನು? ಅವರು ಯಾವದಾದರೂ ಬ್ರಾಹ್ಮಣನ ಧನವನ್ನು ಅಪಹರಿಸಿರುವರೇ ? ಕಾರಣವಿಲ್ಲದೆ ಯಾರನ್ನಾದರೂ ಕೊಂದಿರುವರೇ ಇಲ್ಲವಾದರೆ ಯಾವ ಪರಸ್ತ್ರೀಯರನ್ನು ಕಂಡು ಮೋಹಿಸಿದರೇ ಏನು ಕಾರಣವಾಗಿ ಅವನು ವನಕ್ಕೆ ತೆರಳಿದರು. ಹೇಳು ನಮ್ಮ ಕುಲದಲ್ಲಿ ಎಂದಿಗೂ ಕೆಟ್ಟ ನಡತೆಯ ಮನುಷ್ಯರು ಹುಟ್ಟಲಾರರು ; ನನಗೆ ನನ್ನ ಕುಲದಭಿಮಾನ ಬಹಳವಿರುತ್ತದೆ; ಶ್ರೀರಾಮಚಂದ್ರನು ಪರಮ ಪವಿ ತ್ರನು; ಬಲು ಧಾರ್ಮಿಕವೃತ್ತಿಯವನು; ಅಂಥವನ ವಿಷಯಕ್ಕೆ ನನಗೆ ಶಂಕೆಯೇ ! ಛೀ ! ನಾನೆಂಥ ಪಾಪಿಯು; ಅವನದಸೆಯಿಂದ ಕೆಟ್ಟ ಕಲ್ಪನೆಯನ್ನು ಮಾಡುವೆನಲ್ಲ; ಇಲ್ಲ ಇಲ್ಲ ಈ ಕಲ್ಪನೆಯೂ ಸಹ ಸಹನವಾಗಲಾರದು. ಮಾತೇ ಹೇಳು ಹೇಳು ಬೇಗ ಹೇಳು; ಯಾವ

ಕಾರಣದಿಂದ ಶ್ರೀರಾಮಚಂದ್ರನು ವನಕ್ಕೆ ತೆರಳಿದನು? ” ಎಂದು ಶೋಕಾಕುಲನಾಗಿ ಕೇಳಿದನು.

ಆಗ ಆ. ಮಹಾಮೂರ್ಖ ಕೈಕೇಯಿಯು ಅತಿಆನಂದದಿಂದ ಹೇಳಹತ್ತಿದಳು; ಮಗು ಭರತಾ, ಶ್ರೀರಾಮನು ಹಾಗೆ ಎಂದಿಗೂ ಮಾಡಲಿಲ್ಲ. ಇದೆಲ್ಲವನ್ನು ನಾನು ನಿನ್ನದೆಸೆಯಿಂದ ಮಾಡಿರುವೆನು. ಮಹಾರಾಜರು ರಾಮಚಂದ್ರನಿಗೆ ಪಟ್ಟಾಭಿಷೇಕವನ್ನು ಮಾಡುವದ ರಲ್ಲಿದ್ದರು, ಅವರು ನನಗೆ ಹಿಂದಕ್ಕೆ ಎರಡು ವರಗಳನ್ನು ಕೊಡಲು ಸಿದ್ಧರಾಗಿದ್ದರು; ಅವನ್ನೇ ನಾನು ಈ ಕಾಲಕ್ಕೆ ಬೇಡಿದೆನು. “ ಒಂದ ರಿಂದ ಶ್ರೀರಾಮಚಂದ್ರನಿಗೆ ವನವಾಸವಾಗಬೇಕು; ಮತ್ತೊಂದರಿಂದ ನೀನು ಯುವರಾಜನಾಗಬೇಕು ” ಎಂದು ಬೇಡಿಕೊಂಡೆನು, ಆಗ ನಿನ್ನ ತಂದೆಯು ಒಪ್ಪಿದನು. ಕೂಡಲೆ ಶ್ರೀರಾಮಚಂದ್ರನು ಪಿತೃ ವಚನಕ್ಕಾಗಿ ವನಕ್ಕೆತೆರಳಿದನು. ಈಗ ರಾಜ್ಯವು ನಿನ್ನ ಕೈಯಲ್ಲಿ ಬಂದಿ ರುವದು; ಅದನ್ನು ನೀನು ಸುಖದಿಂದ ಆಳು. ವ್ಯರ್ಥ ಶೋಕಿಸಬೇಡ ಎಂದು ಹೇಳಿದಳು. ತನ್ನ ತಾಯಿಯ ಈ ಮಾತನ್ನು ಕೇಳಿ ಅತಿ ಸಂತಪ್ತನಾಗಿ “ ಮಾತೇ ಕೈಕೇಯಿ, ನೀನೆಂಥ ಕೆಲಸವನ್ನು ಮಾಡಿದೆ. ಶ್ರೀರಾಮಚಂದ್ರನು ನಿನ್ನನ್ನು ಕೌಸಲ್ಯಾಮಾತೆಯಂತೆಯೇ ಪ್ರೀತಿಸುತ್ತಿ ದ್ದನಲ್ಲ; ಮತ್ತು ಕೌಸಲ್ಯಾಮಾತೆಯಾದರೂ ನಿನ್ನನ್ನು ಬೆನ್ನಿಂದ ಬಿದ್ದ ತಂಗಿಯಂತೆ ನೋಡುತ್ತಿದ್ದಳಲ್ಲ; ಅಂಥವಳ ಮಗನನ್ನು ನೀನು ನಾರು ಬಟ್ಟೆಯನ್ನುಡಿಸಿ ವನಕ್ಕೆ ತೆರಳಿಸಲು ನಿನಗೆ ನಾಚಿಕೆ ಬರಲಿಲ್ಲವೇ; ಪರಾಕ್ರಮಿಗಳಾದ ರಾಮ—ಲಕ್ಷ್ಮಣರು ಇಲ್ಲಿರುವದಿಲ್ಲ, ಅಂದಮೇಲೆ ನಾನು ಯಾವ ಧೈರ್ಯದಿಂದ ರಾಜ್ಯವಾಳಬೇಕು ? ನಾನು ವನಕ್ಕೆ ಹೋಗಿ ರಾಮಚಂದ್ರನನ್ನು ಮರಳಿ ಅಯೋಧ್ಯೆಗೆ ಕರೆದುಕೊಂಡು ಬಂದು ಆತನಿಗೆ ರಾಜ್ಯವನ್ನರ್ಪಿಸಿ ಆತನ ಸೇವೆಯಲ್ಲಿ ಸುಖವಾಗಿ ಕಾಲವನ್ನು ಕಳೆಯುವೆನು. ದುಷ್ಟಳಾದ ಕೈಕೇಯಿಯೇ ನಿನ್ನ ಈ

ಕೃತ್ಯದಿಂದಲೇ ನನ್ನ ತಾತನು ಮರಣಹೊಂದಿದನು; ನೀನು ನನ್ನ ತಾಯಿಯಲ್ಲ, ವೈರಿ ಆಗಿರುವಿ. ನಾನು ನಿನ್ನನ್ನು ಯಾವ ಮುಖದಿಂದ ಮಾತೆ ಎಂದು ಕರೆಯಲಿ''? ಈ ಪ್ರಕಾರವಾಗಿ ಆಕೆಯನ್ನು ನಿಂದಿಸುತ್ತ ಬಹು ಪರಿಪರಿಯಿಂದ ಶೋಕಿಸುತ್ತ ಕೌಸಲ್ಯೆಯ ಮಂದಿರಕ್ಕೆ ಬಂದನು.

ಒಂದೇಸವನೆ ಅಳುತ್ತ ಭೂಮಿಯಮೇಲೆ ಬಿದ್ದಿರುವ ಕೌಸಲ್ಯಾ ಮಾತೆಯನ್ನು ಕಂಡು ಭರತನ ದುಃಖವು ಇಮ್ಮಡಿಯಾಯಿತು. ಆಗ ಕೌಸಲ್ಯೆಯು ಅತಿ ಶೋಕದಿಂದ "ಭರತಾ, ನಿನಗೆ ರಾಜ್ಯ ಬೇಕಾಗಿತ್ತಲ್ಲವೇ? ತೆಗೆದುಕೋ. ನಿನ್ನ ಸಲುವಾಗಿ ನಿನ್ನ ಮಾತೆಯು ನಿಂದ್ಯ ಕರ್ಮವನ್ನು ಮಾಡಿ ರಾಜ್ಯವನ್ನು ಗಳಿಸಿಟ್ಟಿರುವಳು. ಅದನ್ನು ನೀನು ನಿಷ್ಕಂಟಕವಾಗಿ ಆಳು; ಆದರೆ ನನ್ನ ಮಕ್ಕಳನ್ನು ನಾರು ಬಟ್ಟೆಗಳನ್ನುಡಿಸಿ ವನಕ್ಕೆ ತೆರಳಿಸಿದಳು. ಕಾರಣ ನನ್ನನ್ನು ನೀನು ನನ್ನ ಮಗನಿದ್ದಲ್ಲಿಗೆ ಕಳಿಸು" ಎಂದು ಅನ್ನುತ್ತ ಒಂದೇಸವನೆ ಕಣ್ಣೀರು ಸುರಿಸತೊಡಗಿದಳು. ಅವಳ ಮಾತನ್ನು ಕೇಳಿ ಭರತನಿಗೆ ಹುಣ್ಣಿನ ಮೇಲೆ ಬರೆಕೊಟ್ಟಂತಾಗಿ "ಮಾತೇ, ನಾನು ನಿಷ್ಪಾಪನಿರುವೆನು; ನನಗೆ ಯಾವ ಸಂಗತಿಯೂ ಗೊತ್ತಿಲ್ಲ. ಕಾರಣ ನೀನು ನನ್ನನ್ನು ಜರೆಯಬೇಡ. ಆರ್ಯ ರಾಮಚಂದ್ರನನ್ನು ನಾನು ವನಕ್ಕೆ ಕಳಿಸಿದ್ದರೆ ಸೂರ್ಯನಮೇಲೆ ಉಗುಳಿದ ಪಾಪವು ನನಗೆ ತಟ್ಟಲಿ; ಮಲಗಿರುವ ಆಕಳನ್ನು ಒದೆದ ಪಾತಕವು ನನಗೆ ಬರಲಿ; ಸಂಗ್ರಾಮದಲ್ಲಿ ಜನರು ನನ್ನನ್ನು ಕೊಲ್ಲಲಿ; ಇಲ್ಲವೆ ಜೋಳಿಗೆ ಹಾಕಿಕೊಂಡು ಪೃಥ್ವಿಯ ತುಂಬೆಲ್ಲ ನಾನು ಭಿಕ್ಷೆಯನ್ನು ಬೇಡುವಂತಾಗಲಿ; ಈ ಪ್ರಕಾರವಾಗಿ ಭರತನು ಭಯಂಕರವಾದ ಆಣೆಯನ್ನು ಹಾಕಿಕೊಂಡನು. ಆ ಭರತನ ಮಾತುಗಳನ್ನು ಕೇಳಿ ಕೌಸಲ್ಯೆಯ ದುಃಖವು ಹೆಚ್ಚಿತು. ಮತ್ತು

ಭರತನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಆತನಿಗೆ ತೆಕ್ಕೆ ಬಿದ್ದು ಇಬ್ಬರೂ ಕೂಡಿಯೇ ಮತ್ತಿಷ್ಟು ದುಃಖಿಸಹತ್ತಿದರು. ಈ ಪ್ರಕಾರ ವಾಗಿ ಅಂದಿನ ಇಡೀ ರಾತ್ರಿಯೆಲ್ಲ ದುಃಖಸಾಗರದಲ್ಲಿ ಕಳೆದರು.

ಮರುದಿವಸ ಬೆಳಗಾದನಂತರ ವಶಿಷ್ಠಗುರುಗಳು ಭರತನ ಭೆಟ್ಟಿಯನ್ನು ತೆಗೆದುಕೊಂಡು ಆತನನ್ನು ಸಮಾಧಾನಗೊಳಿಸಿ ತಂದೆಯ ಉತ್ತರ ಕ್ರಿಯೆಯನ್ನು ಮಾಡಲು ಹೇಳಿದರು. ಆಗ ಭರ ತನು ಎದ್ದು ಕುಳಿತು ವಶಿಷ್ಠರ ಅನುಮತಿಯಂತೆ ದಶರಥನ ಪ್ರೇತ ವನ್ನು ಎಣ್ಣೆಯೊಳಗಿಂದ ಹೊರಗೆ ತೆಗೆದು ಭೂಮಿಯಮೇಲಿಟ್ಟನು. ಆ ವೇಳೆಯಲ್ಲಿ ನೋಡಿದರೆ ದಶರಥನು ಮಲಗಿದಂತೆ ಕಾಣುತ್ತಿದ್ದನು. ಮೋರೆಯು ಸ್ವಲ್ಪ ಹಳದೀವರ್ಣವಾಗಿತ್ತು.

ನಂತರ ಯಥಾವಿಧಿಯುಕ್ತ ಶವಕ್ಕೆ ಸ್ನಾನವನ್ನು ಮಾಡಿಸಿ ಸುವರ್ಣಯುಕ್ತ ಸಿದಿಗೆಯಲ್ಲಿ ತಂದಿಟ್ಟರು, ಮುಂದೆ ಚತುರಂಗದಲ ಸೈನ್ಯದೊಂದಿಗೆ ಸ್ಮಶಾನಯಾತ್ರೆಯು ಬಹಳ ವಿಜೃಂಭಣೆಯಿಂದ ಹೊರಟಿತು. ಈ ರೀತಿಯಾಗಿ ಅವರು ಚಂದನಕಾಷ್ಠದಿಂದ ತಯಾ ರಿಸಿದ ಚಿತೆಯಲ್ಲಿ ದಶರಥನ ಶವವನ್ನು ತಂದಿಟ್ಟರು. ಆನಂತರ ಎಲ್ಲರೂ ಚಿತೆಗೆ ಪ್ರದಕ್ಷಿಣೆಯನ್ನು ಹಾಕಿ ಯಥಾವಿಧಿಯಾಗಿ ಮಂತ್ರಾ ಗ್ನಿಯನ್ನು ಕೊಟ್ಟರು; ಸಾಮಗಾನದವರು ಅತಿ ದುಃಖದಿಂದ ಸಾಮ ಗಾನವನ್ನು ಹಾಡಿದರು. ಬಳಿಕ ಎಲ್ಲರೂ ದುಃಖಿಸುತ್ತ ಶರಯೂ ನದಿಯ ದಡಕ್ಕೆ ಬಂದು ಅಲ್ಲಿ ಸ್ನಾನವನ್ನು ಮುಗಿಸಿ ದಶರಥ ಮಹಾರಾಜನ ಹೆಸರಿನಿಂದ ಉದಕವನ್ನು ಬಿಟ್ಟು ಆತನ ಗುಣಗಳನ್ನು ಕೊಂಡಾಡುತ್ತ ಎಲ್ಲರೂ ಅರಮನೆಗೆ ಬಂದರು.

ಮುಂದೆ ಭರತನು ಹತ್ತುದಿವಸಗಳು ಮುಗಿದನಂತರ ಎಲ್ಲ ಬ್ರಾಹ್ಮಣರಿಗೆ ವಿಪುಲ ಧನವನ್ನೂ, ಆಕಳಗಳನ್ನೂ, ಸುವರ್ಣಪಾತ್ರೆ

ಗಳನ್ನೂ, ವಸ್ತ್ರಾಲಂಕಾರಗಳನ್ನೂ, ದಾನಮಾಡಿದನು. ಈ ರೀತಿಯಾಗಿ ದಶರಥನ ಉತ್ತರ ಕ್ರಿಯೆಯು ಯಥಾಸಾಂಗವಾಗಿ ಆಯಿತು. ಮುಂದೆ ಎಲ್ಲ ನಗರವಾಸಿಗಳು ಭರತನ ಸುತ್ತುಮುತ್ತಲೂ ನೆರೆದು "ಭರತಾ, ಅರಸನು ನಮ್ಮನ್ನಗಲಿ ಹೋದನು; ರಾಮಚಂದ್ರನು ವನಕ್ಕೆ ತೆರಳಿದನು. ಕಾರಣ ನೀನು ರಾಜನಾಗಿ ನಮ್ಮನ್ನು ಪಾಲಿಸಬೇಕು" ಎಂದು ಪರಿಪರಿಯಾಗಿ ಹೇಳಿದರು. ಅವರ ಈ ಮಾತನ್ನು ಕೇಳಿ ಭರತನ ದುಃಖವು ಹೆಚ್ಚಿತು. ಮತ್ತು ಅವನು "ರಾಮನು ನಮ್ಮಲ್ಲಿ ಹಿರಿಯನು, ಆತನೇ ನಿಮ್ಮ ಅರಸನಾಗಲು ಯೋಗ್ಯನು; ನನ್ನ ಮಾತೆಯು ಪಾಪದಿಂದ ದೊರಕಿಸಿರುವ ಈ ರಾಜ್ಯವು ನನಗೆ ಬೇಡ" ಎಂದು ಹೇಳಿ ಶ್ರೀರಾಮಚಂದ್ರನನ್ನು ಕರೆತರಲು ಹೊರಡುವ ಸಿದ್ಧತೆ ಮಾಡಿದನು. ಕೂಡಲೆ ಅವರೆಲ್ಲರೂ ಆತನ ಸಂಗಡ ಹೊರಟರು, ಅಹಹಾ! ನೋಡಿದಿರಾ ಭರತನ ಬಂಧು ಪ್ರೇಮವನ್ನು. ಅನಾಯಾಸವಾಗಿ ರಾಜ್ಯೈಶ್ವರ್ಯವು ತನ್ನ ಪಾಲಿಗೆ ಬಂದಿರಲು ಅದನ್ನು ಯಾವನು ತ್ಯಜಿಸಿ ಅನ್ಯರಿಗೆ ಕೊಡುವನು? "ಧನ್ಯ ಧನ್ಯ ಭರತಾ ನೀನು ಧನ್ಯನು; ಇದ್ದರೆ ಇರಬೇಕು ನಿಮ್ಮಂಥ ಅಣ್ಣ-ತಮ್ಮಂದಿರು" ಎಂದು ಜನರು ಕೊಂಡಾಡಹತ್ತಿದರು. ಆಗ ಭರತನು ಸುಮಂತನನ್ನು ಕರೆಕಳಿಸಿ ಚತುರಂಗಸೇನೆಯನ್ನು ಸಂಗಡ ಕರೆದುಕೊಂಡು ಅವರೆಲ್ಲರು ಶ್ರೀರಾಮಚಂದ್ರನನ್ನು ಕರೆತರಲು ಹೊರಟರು. ಕೂಡಲೆ ಶಿಲ್ಪಕಾರರು ಬಂದು ಸುತ್ತುಮುತ್ತಲಿನ ವನವನ್ನು ಕಿತ್ತಿಹಾಕಿ ಉತ್ತಮವಾದ ದಾರಿಯನ್ನು ಮಾಡಿದರು. ಅಲ್ಲಲ್ಲಿ ಅಂದವಾಗಿ ಕಾಣಿಸುವಂತೆ ಗಿಡಗಳನ್ನು ಹಚ್ಚಿದರು. ಈ ಪ್ರಕಾರವಾಗಿ ಗಂಗಾನದಿಯ ದಡದವರೆಗೆ ವ್ಯವಸ್ಥೆಯನ್ನು ಮಾಡಿದರು. ಭರತನ ಸಂಗಡ ಮಂತ್ರಿ, ಪುರೋಹಿತರು, ಅಮಾತ್ಯರು, ದುಃಖಿತರಾದ

ಮಾತೆಯರು ಇವರೆಲ್ಲರೂ ತಮ್ಮ ತಮ್ಮ ರಥದಲ್ಲಿ ಕುಳಿತುಕೊಂಡು ಹೊರಟು ಶೃಂಗವೇರಕ್ಕೆ ಬಂದರು.

ಆಗ ಈ ಅಪಾರ ಸೈನ್ಯವನ್ನು ಕಂಡು ಗೂಹಕನು ಬೆದರಿದನು. ಮುಂದೆ ಗೂಹಕನು ತನ್ನ ಜನರನ್ನು ಕರೆಕಳುಹಿ ಶಸ್ತ್ರಾಸ್ತ್ರಸಹಿತವಾಗಿ ಗುಪ್ತರೀತಿಯಿಂದ ಸುತ್ತುಮುತ್ತಲಿನ ಪ್ರದೇಶದಲ್ಲಿ ಕೂಡ್ರಲು ಅಪ್ಪಣೆಕೊಟ್ಟ ತಾನು ಭರತನಿಗೆ ಇದಿರ್ಗೊಳ್ಳಲು ಬಂದನು. ಆಗ ಸುಮಂತನು ಮುಂದೆ ಬಂದು ಗೂಹಕನಿಗೆ ಭೆಟ್ಟಿಯಾಗಿ ಭರತನ ಬಗ್ಗೆ ನಿಜ ಸಂಗತಿಯನ್ನು ಹೇಳಿದನು. ಆ ಮಾತನ್ನು ಕೇಳಿ ಗೂಹಕನು ಬಹಳ ಆನಂದದಿಂದ ಭರತನನ್ನು ಇದಿರ್ಗೊಂಡು ತನ್ನ ಆಶ್ರಮಕ್ಕೆ ಕರೆತಂದನು ಮತ್ತು ಭರತನನ್ನು ಕಂದಮೂಲಾದಿಗಳಿಂದ ಉಪಚರಿಸಿದನು. ಆಗ ಭರತನು ಅತಿ ದುಃಖದಿಂದ "ಗೂಹಕಾ, ರಾಮಚಂದ್ರನು ರಾತ್ರಿಯಲ್ಲಿ ಎಲ್ಲಿ ಮಲಗಿದ್ದನು? ಏನು ತಿನ್ನುತ್ತಿದ್ದನು? ಇದೆಲ್ಲವನ್ನು ನನಗೆ ಹೇಳು" ಎಂದು ಕೇಳಿದನು- ಮುಂದೆ ಗೂಹಕನು ಭರತನನ್ನೂ ಅಮಾತ್ಯರನ್ನೂ ಶೋಕಿಸುತ್ತಿರುವ ರಾಜಮಾತೆಯರನ್ನೂ ಕರೆದುಕೊಂಡು ಒಂದು ಗಿಡದಡಿಯಲ್ಲಿ ಬಂದು ರಾಮ—ಸೀತೆಯರು ಮಲಗಿದ್ದ ಸ್ಥಾನವನ್ನು ತೋರಿಸಿ "ನಾನು ಎಷ್ಟೋ ಹಣ್ಣು—ಹಂಪಲಗಳನ್ನು ಅವರಮುಂದೆ ತಂದಿಟ್ಟರೂ ಸಹ ಅದನ್ನು ತಿನ್ನದೆ ಭಾಗೀರಥಿಯ ಜಲವನ್ನು ಪ್ರಾಶನಮಾಡಿ ಅಂದಿನ ರಾತ್ರಿಯನ್ನು ಕಳೆದರು; ಮರುದಿವಸ ಆಲದಮರದ ಹಾಲನ್ನು ತರಿಸಿ ಕೂದಲುಗಳಿಗೆ ಪೂಸಿ ಜಡೆಯನ್ನು ಕಟ್ಟಿಕೊಂಡು ಗಂಗೆಯನ್ನು ದಾಟಿ ಹೋದರು" ಎಂದು ಹೇಳಿದನು. ಈ ಸಂಗತಿಯನ್ನು ಕೇಳಿ ಭರತನ ದುಃಖವು ಮತ್ತಿಷ್ಟು ಹೆಚ್ಚಿ "ನನಗೆ ಧಿಕ್ಕಾರವಿರಲಿ! ತ್ರೈಲೋಕ್ಯಾಧಿಪತಿಯಾದ ಶ್ರೀರಾಮಚಂದ್ರನೂ, ಜನಕಕುಮಾರಿಯಾದ ಸೀತೆಯೂ, ಭೂಮಿಯಮೇಲೆ ಶಯನವನ್ನು

ಮಾಡಿದಾಗ ನಾನು ಉತ್ತಮವಾದ ವಸ್ತ್ರಾಲಂಕಾರಗಳನ್ನು ಧರಿಸಿ ಸ ವರ್ಣಯುಕ್ತವಾದ ಮಂಚದಮೇಲೆ ಮಲಗಬೇಕೆ! ಛೇ, ನಾನೆಂದಿಗೂ ಹಾಗೆ ಮಾಡಲಾರೆ.

"ಗುಹಾ, ಈಗಲೇ ನಾನು ಜಡೆಯನ್ನು ಕಟ್ಟಿ ನಾರುಬಟ್ಟೆಗಳನ್ನುಟ್ಟು ಭೂಮಿಯಮೇಲೆ ಶಯನಿಸುವೆನು ರಾಮಚಂದ್ರನನ್ನು ಮರಳಿ ಅಯೋಧ್ಯೆಗೆ ಕರೆತಂದು ಆತನ ಹದಿನಾಲ್ಕು ವರ್ಷಗಳನ್ನು ನಾನು ವನವಲ್ಲಿ ಕಳೆಯುವೆನು" ಎಂದು ಹೇಳಿ ತನ್ನ ವಸ್ತ್ರಾಭರಣಗಳನ್ನು ತ್ಯಜಿಸಿ ಕೂದಲವನ್ನು ಜಡೆಕಟ್ಟಿ ನಾರು ಬಟ್ಟೆಗಳನ್ನು ಧರಿಸಿದನು. ಮರುದಿವಸ ಅವರೆಲ್ಲರೂ ಗಂಗೆಯನ್ನು ದಾಟಿ ಭಾರದ್ವಾಜರ ಆಶ್ರಮಕ್ಕೆ ಬಂದರು. ಆಗ ಭಾರದ್ವಾಜರು ವಶಿಷ್ಠರನ್ನು ಕಂಡು ಅರ್ಘ್ಯವನ್ನು ಶಿಷ್ಯರಕಡೆಯಿಂದ ತರಿಸಿ ತಾವು ವಶಿಷ್ಠರನ್ನೂ, ಭರತನನ್ನೂ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಉತ್ತಮವಾದ ಆಸನದಲ್ಲಿ ಕುಳ್ಳಿರಿಸಿದರು. "ಅಯೋಧ್ಯೆಯಲ್ಲಿ ಎಲ್ಲವೂ ಕುಶಲವೇ?" ಎಂದು ಕೇಳಿದರು. ಆಗ ಭರತನು ಅತಿ ದುಃಖದಿಂದ "ನಾನೆಂಥ ಹತಭಾಗಿಯು, ಇವರೂಸಹ ನನ್ನನ್ನು ಶಂಕಿಸುತ್ತಿರುವರಲ್ಲ!" ಎಂದು ಶೋಕಿಸುತ್ತ "ನಾನು ಶ್ರೀರಾಮಚಂದ್ರನನ್ನು ಮರಳಿ ಅಯೋಧ್ಯೆಗೆ ಕರೆತರಲು ಹೊರಟಿರುವೆನು" ಎಂದು ಹೇಳಿದನು. ಆಗ ಭಾರದ್ವಾಜರು "ಸೂರ್ಯವಂಶದಲ್ಲಿ ನಿಮ್ಮಂಥ ಪುರುಷರು ಜನ್ಮವೆತ್ತಿರುವದರಿಂದಲೇ ಅದು ಧನ್ಯವಾಗಿರುವದು; ನಿನ್ನ ವಿಷಯವಾಗಿ ನನಗೆ ಸ್ವಲ್ಪವೂ ಸಹ ಸಂಶಯವಿಲ್ಲ" ಎಂದು ಹೇಳಿ ಅವರನ್ನು ಯಥಾಯೋಗ್ಯವಾಗಿ ಸತ್ಕರಿಸಿ "ನೀವು ನಾಳಿನದಿವಸ ಇಲ್ಲಿಂದ ಹೊರಡಿರಿ. ಶ್ರೀರಾಮಚಂದ್ರನು ಚಿತ್ರಕೂಟದಲ್ಲಿರುವನು" ಎಂದು ಹೇಳಿದರು. ಮರುದಿವಸ ಅವರೆಲ್ಲರೂ ಭಾರದ್ವಾಜರಿಗೆ ನಮಿಸಿ

ಹೊರಡಲು ಸಿದ್ಧರಾದರು; ಆಗ ಭಾರದ್ವಾಜರು ಮುಂದೆ ಬಂದು "ಭರತಾ, ನೀನು ನಿನ್ನ ಮಾತೆಯನ್ನು ನಿಂದಿಸಬೇಡ. ಅವಳು ರಾಮಚಂದ್ರನನ್ನು ವನಕ್ಕೆ ತೆರಳಿಸಿ ಜಗತ್ತಿಗೊಂದು ಉಪಕಾರ ಮಾಡಿ ದಳು. ರಾಮನ ವನವಾಸದಿಂದ ಎಲ್ಲ ಸೃಷ್ಟಿಯ ಕಲ್ಯಾಣವಾಗು ವದು" ಎಂದು ಹೇಳಿ ಭರತನಿಗೆ ಮತ್ತು ಆತನ ಪರಿವಾರಕ್ಕೆ ಚಿತ್ರಕೂಟದ ದಾರಿಯನ್ನು ತೋರಿಸಿ ತಾವು ತಮ್ಮ ಆಶ್ರಮಕ್ಕೆ ಬಂದರು.

ಭಾರದ್ವಾಜರು ತೋರಿಸಿದ ದಾರಿಯಿಂದಲೇ ಭರತನು ಎಲ್ಲ ಸೈನ್ಯಸಮೇತನಾಗಿ ಚಿತ್ರಕೂಟಕ್ಕೆ ಬಂದು ತಲುಪಿದನು. ಅಲ್ಲಿಯ ಸುಂದರವಾದ ವನಶ್ರೀಯ ಶೋಭೆಯನ್ನು ಕಂಡು, ಹರಿಯುತ್ತಿರುವ ಮಂದಾಕಿನಿಯನ್ನು ನೋಡಿ ಇದೇ ಚಿತ್ರಕೂಟಪರ್ವತವೆಂದು ತಿಳಿದು ಎಲ್ಲ ಸೇನೆಯನ್ನು ದೂರ ಇರಿಸಿ ಶತ್ರುಘ್ನಸಮೇತನಾಗಿ ತಾನೊ ಬ್ಬನೇ ಮುಂದೆ ಹೊರಟನು. ಆಗ ಅಲ್ಲಿಯೇ ದೂರದಲ್ಲಿ ಕಾಣುತ್ತಿ ರುವ ಒಂದು ಗುಡಿಸಲವನ್ನು ನೋಡಿ ಇದೇ ರಾಮನ ಪರ್ಣಕುಟೀರ ವಿರಬೇಕೆಂದು ತಿಳಿದನು. "ಶತ್ರುಘ್ನಾ, ಇಲ್ಲಿಯೇ ರಾಮಚಂದ್ರ ನಿರಬಹುದು" ಎಂದು ಹೇಳಿದನು. ಇತ್ತ ಶ್ರೀರಾಮಚಂದ್ರನು ನಿತ್ಯದಂತೆ ಆಶ್ರಮ ಸಮೀಪದಲ್ಲಿರುವ ಎತ್ತರವಾದ ದಿನ್ನೆಯಮೇಲೆ ಕುಳಿತು "ಸೀತೇ, ನೋಡಿದಿಯಾ ಈ ವನಶ್ರೀಯ ಶೋಭೆಯನ್ನು. ಈ ವನಶ್ರೀಯನ್ನು ಕಂಡರೆ ನನಗೆ ವನವಾಸದಲ್ಲಿ ಸ್ವಲ್ಪವೂ ದುಃಖ ವೆನಿಸಲಾರದು; ಈ ಎತ್ತರವಾಗಿರುವ ಪರ್ವತಗಳು ತಮ್ಮ ಗರ್ಭ ದಲ್ಲಿ ನಾನಾತರಹದ ಧಾತುಗಳನ್ನು ತುಂಬಿಕೊಂಡಿರುತ್ತವೆ. ಮೇಲ್ಭಾ ಗವು ಬೇರೆ ಬೇರೆ ಜಾತಿಯ ಫಲ—ಪುಷ್ಪಗಳಿಂದ ಶೋಭಿಸುತ್ತವೆ. ಇಂಥ ಈ ರಮ್ಯವಾದ ವನದಲ್ಲಿ ಮಂಜುಳ ಸ್ವರವನ್ನು ಮಾಡುತ್ತ

ಹರಿಯುತ್ತಿರುವ ಮಂದಾಕಿನಿಯನ್ನು ನೋಡು; ಇದೆಲ್ಲವನ್ನು ನೋಡಿದರೆ ನನಗೆ ಅಯೋಧ್ಯೆಯ ನೆನಪುಸಹ ಆಗುವದಿಲ್ಲ” ಎಂದು ಹೇಳಿದನು. ಅಷ್ಟರಲ್ಲಿ ತನ್ನ ದಲಸಮೇತನಾಗಿ ಬರುತ್ತಿರುವ ಭರತನನ್ನು ರಾಮನು ಕಂಡನು. ಆಗ ಆಶ್ಚರ್ಯದಿಂದ “ಲಕ್ಷ್ಮಣಾ ನೋಡು, ಸೈನ್ಯ ಸಮೇತನಾಗಿ ಭರತನು ನನ್ನ ಭೆಟ್ಟಿಗಾಗಿ ಬರುತ್ತಿರುವನು” ಎಂದನು. ಇವನ್ನು ಕಂಡು ಲಕ್ಷ್ಮಣನು ಬಹು ಕೋಪದಿಂದ “ ರಾಮಾ, ಇವನು ನಮ್ಮನ್ನು ಕೊಲ್ಲುವದರಸಲುವಾಗಿಯೇ ಸೈನ್ಯ ಸಮೇತನಾಗಿ ಇಲ್ಲಿಗೆ ಬಂದಿರುವನು. ಈತನು ನಮ್ಮ ಶತ್ರು ಆಗಿರುವನು; ಅದಕ್ಕಾಗಿಯೇ ನಾವು ಅವನ ಶಿರಚ್ಛೇದ ಮಾಡುವದೇ ಉಚಿತವು ” ಎಂದು ನುಡಿದನು. ಆಗ ರಾಮಚಂದ್ರನು “ ತಮ್ಮಾ, ಭರತನನ್ನು ಕೊಂದು ನಾವು ರಾಜ್ಯ ಲಕ್ಷ್ಮಿಯನ್ನು ಗಳಿಸಿದರೆ ನಾವು ನಮ್ಮ ವಚನವನ್ನು ಹೇಗೆ ಪಾಲಿಸಿದಂತಾಗುವದು ? ಮತ್ತು ಭರತನನ್ನು ನಿನ್ನನ್ನು ಇಬ್ಬರನ್ನಗಲಿ ನಾನು ಎಂದಿಗೂ ಇರಲಾರೆನು; ಈರೀತಿಯಾಗಿ ಗಳಿಸಿದ ರಾಜ್ಯವು ನನಗೆ ಬೇಡ. ನಾನು ಆ ಜನ್ಮಪರ್ಯಂತವಾಗಿ ವನದಲ್ಲಿಯೇ ಕಾಲ ಕಳೆಯುವೆನು. ಭರತನು ನಿಷ್ಪಾಪನಿರುವನು, ಭ್ರಾತೃವತ್ಸಲನಿರುವನು, ತನ್ನ ಕುಲ–ಧರ್ಮವನ್ನು ಎಂದಿಗೂ ಬಿಡಲಾರನು. ಅದಕ್ಕಾಗಿಯೇ ಅವನು ನನ್ನ ಪ್ರಾಣಕ್ಕಿಂತಲೂ ಹೆಚ್ಚಿಗೆ ಇರುವನು; ಕಾರಣ ನೀನು ಆತನನ್ನು ಹಳಿಯಬೇಡ ” ಎಂದು ಆತನನ್ನು ಸಮಾಧಾನಗೊಳಿಸಿದನು.

ಈ ರೀತಿಯಾಗಿ ಅವರು ಮಾತನಾಡುತ್ತಿರುವಾಗ ಓಡುತ್ತ ಬಂದು ಭರತನು ಶ್ರೀರಾಮಚಂದ್ರನ ಚರಣಗಳನ್ನು ಹಿಡಿದು ಬಹು ಪರಿಪರಿಯಾಗಿ ಶೋಕಿಸಿದನು. ಕೂಡಲೆ ಶ್ರೀರಾಮಚಂದ್ರನು ಭರತನನ್ನೆಬ್ಬಿಸಿ ಪ್ರೀತಿಯಿಂದ ಆಲಿಂಗಿಸಿ “ ತಮ್ಮಾ ಭರತಾ, ಶೋಕಿಸ

ಬೇಡ; ಅಯೋಧ್ಯಾವಾಸಿ ಜನರೆಲ್ಲ ಕ್ಷೇಮವೇ ? ಮಾತೆ ಕೈಕೇಯಿ ಸುಮಿತ್ರೆ, ಕೌಸಲ್ಯೆಯರು ಕ್ಷೇಮದಿಂದಿರುವರೇ? ತಾತನು ಕ್ಷೇಮ ದಿಂದಿರುವನೇ ? ಆತನ ಸೇವೆಯನ್ನು ನೀನು ಚನ್ನಾಗಿ ಮಾಡುತ್ತಿರುವೆ ಯಲ್ಲವೇ? ಅವರನ್ನು ಬಿಟ್ಟು ನೀನು ಏಕೆ ಬಂದೆ?" ಎಂದು ಕೇಳಿ ದನು. ಆಗ ಭರತನ ದುಃಖವು ಹೆಚ್ಚಿ ರಾಮಾ, ತಾತನು ನಿನ್ನ ವಿಯೋಗ ದುಃಖದಿಂದ ಮರಣ ಹೊಂದಿದನು !" ಎಂದು ಹೇಳಿದನು.

ಈ ದುಃಖದ ವಾರ್ತೆಯನ್ನು ಕೇಳಿ "ಹಾ! ತಾತನೇ," ಎಂದು ಶೋಕಿಸುತ್ತ "ಭರತಾ, ನೀನು ಬಹು ಪುಣ್ಯವಂತನು; ಮರಣಕಾಲದಲ್ಲಿ ತಾತನ ಸೇವೆಯನ್ನು ಮಾಡಿದೆ" ಈ ರೀತಿಯಾಗಿ ಅವರಿಬ್ಬರೂ ಬಹು ಪರಿಯಿಂದ ಶೋಕಿಸಿದರು. ಅಷ್ಟರಲ್ಲಿ ವಶಿಷ್ಠರ ಸಮೇತವಾಗಿ ಎಲ್ಲರೂ ಅಲ್ಲಿಗೆ ಬಂದರು. ಆಗ ಭರತನು ಶ್ರೀರಾಮಚಂದ್ರನ ಪಾದವನ್ನು ಗಟ್ಟಿಯಾಗಿ ಹಿಡಿದು "ರಾಮಾ, ಈ ಎಲ್ಲ ಜನರನ್ನು ನೀನೇ ಸಂರಕ್ಷಿಸಬೇಕು" ಎಂದು ಹೇಳಿದನು. ಕೂಡಲೆ ಶ್ರೀರಾಮಚಂದ್ರನು "ತಮ್ಮಾ ಭರತಾ, ನಾನು ಪಿತೃವಚನ ಪಾಲಿಸುವದಕ್ಕಾಗಿ ವನಕ್ಕೆ ಬಂದಿರುವೆನು. ಅದಕ್ಕಾಗಿ ನೀನು ಪಿತೃ ವಚನವನ್ನು ಪಾಲಿಸಿ ರಾಜ್ಯವನ್ನಾಳಿ ಕರ್ತವ್ಯನಿಷ್ಠನಾಗು. ಭಾವನಾ ವಶನಾಗಬೇಡ. ನಾನು ಹದಿನಾಲ್ಕುವರ್ಷ ತೀರಿದನಂತರ ಮರಳಿ ಅಯೋಧ್ಯೆಗೆ ಬಂದು ರಾಜ್ಯವಾಳುವೆ" ಎಂದು ಹೇಳಿದನು. ಮುಂದೆ ಶ್ರೀರಾಮಚಂದ್ರನು ಸೀತೆಯನ್ನು ಕಂಡು "ಹಾ! ಸೀತೇ, ನಿನ್ನ ಮಾವನಾದ ದಶರಥನು ನಿನ್ನನ್ನಗಲಿ ಪರಲೋಕಕ್ಕೆ ತೆರಳಿದನು; ಲಕ್ಷ್ಮಣಾ, ಕೇಳು ನಮ್ಮ ಪೂಜ್ಯತಂದೆಯು ನಮ್ಮಿಂದ ಕಣ್ಮರೆಯಾ ದನು !. ಈ ಹೊತ್ತು ನಾನೆಂಥ ದುಃಖದವಾರ್ತೆಯನ್ನು ಕೇಳಿದೆನು. ನಾನೆಂಥ ಪಾಪಿಯು; ಪೂಜ್ಯ ತಂದೆಯನ್ನು ಕಳೆದುಕೊಂಡು ೧೪

ವರ್ಷದನಂತರ ಮರಳಿ ಅಯೋಧ್ಯೆ ಹೋಗಲು ಕಾರಣವೇನು?" ಎಂದು ಬಹು ಪರಿಯಾಗಿ ಶೋಕಿಸಿದನು. "ಸೀತೇ, ಮುಂದೆ ನಡೆ, ಲಕ್ಷ್ಮಣಾ, ನೀನೂ ನಡೆ, ನಾನು ನಿಮ್ಮ ಹಿಂದಿನಿಂದ ಬರುವೆನು. ಎಲ್ಲರೂ ಕೂಡಿ ತಾತನ ಹೆಸರಿನಿಂದ ಉದಕವನ್ನು ಬಿಡೋಣ" ಎಂದು ನುಡಿದನು. ಆ ತ್ರಿವರ್ಗರು ಮಂದಾಕಿನಿಯ ತೀರಕ್ಕೆ ಬಂದು ಅಲ್ಲಿ ಯಥಾಯುಕ್ತವಾಗಿ ಸ್ನಾನವನ್ನು ಮಾಡಿ ತಂದೆಯ ಹೆಸರಿನಿಂದ ನೀರನ್ನು ಬಿಟ್ಟು "ತಾತನೇ, ಮನುಷ್ಯನು ಯಾವ ಅನ್ನವನ್ನು ಸೇವಿಸುವನೋ ಅದೇ ಅನ್ನವನ್ನು ದೇವತೆಗಳಿಗೆ ಅರ್ಪಿಸುವೆನು; ಕಾರಣ ನಾನು ಸೇವಿಸುತ್ತಿರುವ ಅನ್ನವನ್ನು ನಿನಗೆ ಅರ್ಪಿಸುವೆನು" ಎಂದು ನುಡಿದು ಉದಕವನ್ನು ಬಿಟ್ಟು ಮರಳಿ ಆಶ್ರಮಕ್ಕೆ ಬಂದನು. ಮತ್ತು ಭರತ, ಲಕ್ಷ್ಮಣ, ಶತ್ರುಘ್ನರನ್ನು ತಬ್ಬಿಕೊಂಡು ದೊಡ್ಡ ಧ್ವನಿತೆಗೆದು ಬಹು ಪರಿಯಾಗಿ ದುಃಖಿಸಹತ್ತಿದನು. ಆಗ ಆ ಚಿತ್ರಕೂಟ ಪರ್ವತವೆಲ್ಲವೂ ಆರ್ತಸ್ವರದಿಂದ ತುಂಬಿಹೋಯಿತು. ಆ ಧ್ವನಿಯನ್ನು ಕೇಳಿ ಸುಮಂತನೂ, ಅಮಾತ್ಯರೂ, ನಗರವಾಸಿಗಳೂ, ರಾಜಮಾತೆಯರೂ, ರಾಮನನ್ನು ತಬ್ಬಿಕೊಂಡು ಪರಿಪರಿಯಾಗಿ ದುಃಖಿಸಿದರು. ಮುಂದೆ ರಾಮನು ಅವರೆಲ್ಲರನ್ನೂ ಶಾಂತಗೊಳಿಸಿದನು. ಅಂದಿನ ರಾತ್ರಿಯನ್ನೆಲ್ಲ ಎಲ್ಲರೂ ದುಃಖದಲ್ಲಿ ಕಳೆದರು. ಮರುದಿವಸ ಬೆಳಗಿನಲ್ಲೆದ್ದು ಸ್ನಾನ, ಸಂಧ್ಯಾದಿ-ಕರ್ಮಗಳನ್ನು ತೀರಿಸಿ ರಾಮನ ಸುತ್ತುಮುತ್ತಲೂ ಬಂದು ಕುಳಿತರು. ಒಬ್ಬರೂ ಮಾತನಾಡಲಿಲ್ಲ. ಎಲ್ಲರೂ ತಮ್ಮತಮ್ಮೊಳಗೆ ದುಃಖಿಸುತ್ತ ಮನದಲ್ಲಿ ವಿಚಾರಿಸಹತ್ತಿದರು. ಆಗ ಭರತನು ಮುಂದೆಬಂದು "ಅಣ್ಣಾ, ರಾಮಚಂದ್ರಾ, ಅರಸನು ನನ್ನ ತಾಯಿಯ ಸಮಾಧಾನದ ಸಲುವಾಗಿ ನನಗೆ ರಾಜ್ಯವನ್ನು ಕೊಟ್ಟಿರುವನು; ಅದನ್ನು ನಾನು ನಿಮಗೆ ಅರ್ಪಿಸುವೆನು. ನೀವು ನಿಷ್ಕಂಟಕವಾಗಿ ರಾಜ್ಯವನ್ನಾಳಿದರೆ ಈ ಎಲ್ಲ ಪ್ರಜೆ

ಗಳು ದೈದೀಪ್ಯವಾದ ಸೂರ್ಯನನ್ನು ಕಂಡರೆ ಎಷ್ಟು ಸಂತೋಷ ವಾಗುವದೋ ಅಷ್ಟೇ ಸಂತೋಷವು ಈಗ್ಗೆ ಆಗುವದು" ಎಂದು ಹೇಳಿದನು. ಆಗ ಪ್ರಜರೆಲ್ಲರೂ "ಸಾಧು—ಸಾಧೂ" ಎಂದು ಭರ ತನನ್ನು ಹೊಗಳಿದರು. ಆಗ ಶ್ರೀರಾಮಚಂದ್ರನು ಶಾಂತರೀತಿಯಿಂದ "ತಮ್ಮಾ ಭರತಾ, ಕೇಳು "ಮನುಷ್ಯನು ಸ್ವೇಚ್ಛಾನುಸಾರವಾಗಿ ನಡೆ ಯಲು ಇಚ್ಛಿಸುವನು.ಆದರೆ ದೈವವು ಆತನನ್ನು ಹಿಂದೆ ಜಗ್ಗುತ್ತಿರು ವದರಿಂದಲೇ ಎಲ್ಲವೂ ನಾಶವಾಗುತ್ತದೆ; ಯಾವನು ಎತ್ತರದಮೇಲೆ ಹತ್ತಿರುವನೋ ಅವನು ಕೆಳಗಿಳಿಯಲೇಬೇಕು. ಸಂಯೋಗದ ಹಿಂದೆ ವಿಯೋಗವೂ ಇದ್ದೇಇರುವದು. ಅದರಂತೆ ಇಂದಿನ ರಾತ್ರಿಯು ನಾಳೆಗೆ ಇರಲಾರದು. ಸಮುದ್ರದಲ್ಲಿ ಎಷ್ಟೇ ಉದಕವಿ ದ್ದರುಕೂಡ ಗಂಗೆಯ ನೀರು ಮರಳಿ ಬರಲಾರದು. ಅದರಂತೆ ಮನುಷ್ಯನ ಆಯುಷ್ಯಕ್ರಮವೂ ಹೀಗೆಯೇ ಸಾಗಿರುವದು; ಕಾರಣ ಮನುಷ್ಯನು ಇದ್ದ ಸ್ಥಿತಿಯಲ್ಲಿಯೇ ಸಮಾಧಾನವನ್ನು ಹೊಂದಬೇಕು. ಅದಕ್ಕಾಗಿಯೇ ನೀನು ನಿನ್ನ ಆತ್ಮವನ್ನು ವಶಕ್ಕಿಟ್ಟುಕೊಂಡು ತಾತನು ಹೇಳಿದ ಆಜ್ಞೆಯಂತೆ ಮರಳಿ ಅಯೋಧ್ಯೆಗೆ ಹೋಗಿ ರಾಜ್ಯವ ನ್ನಾಳು; ನಾನು ತಾತನ ಆಜ್ಞೆಯನ್ನು ಪಾಲಿಸಲೇಬೇಕು" ಎಂದು ಹೇಳಿದನು.

ಆಗ ಜಾಬಾಲಿಯೆಂಬ ಋಷಿಯು ಮುಂದೆ ಬಂದು "ಸತ್ಯವೆಲ್ಲಿ ಯದು? ಅಸತ್ಯವೆಲ್ಲಿಯದು? ತಂದೆಯಾರು? ಮಕ್ಕಳಾರು? ಇವೆ ಲ್ಲವೂ ತಾತ್ಪೂರ್ತಿಕವಾದ ಋಣಸಂಬಂಧವು. ಇವು ನಿಜವಿದ್ದರೆ ಈ ಲೋಕದಲ್ಲಿ ಶ್ರಾದ್ಧಾದಿಕರ್ಮಗಳನ್ನು ಮಾಡಿ ಪಿಂಡವನ್ನು ಕೊಟ್ಟರೆ ಪರಲೋಕಕ್ಕೆ ಹೇಗೆ ಮುಟ್ಟುತ್ತದೆ? ಮನುಷ್ಯನು ಮರಣ ಹೊಂದಿದ ನೆಂದರೆ ಆತನು ಪಂಚಭೂತಗಳಲ್ಲಿ ಲೀನವಾಗುವನು. ಆದರೆ ಇದೇ ಲೋಕದಲ್ಲಿದ್ದು ಪರಲೋಕಕ್ಕೆ ಹೋಗಿರುವ ಮನುಷ್ಯನಿಗೆ

ನಾವು ಅನ್ನವನ್ನು ಕೊಟ್ಟರೆ ಅದು ಏಕೆ ಮುಟ್ಟುವದಿಲ್ಲ? ಕಾರಣ ರಾಮಾ, ಭರತನು ನಿನಗೆ ಅನಾಯಾಸವಾಗಿ ರಾಜ್ಯವನ್ನು ಬಿಟ್ಟು ಕೊಡುತ್ತಿರುವನು; ಅದನ್ನು ನೀನು ಸುಖವಾಗಿ ಆಳು'' ಎಂದು ಹೇಳಿದನು. ಜಾಬಾಲಿಯು ಈ ನಾಸ್ತಿಕವಾದ ಭಾಷಣವನ್ನು ಕೇಳಿ ಶ್ರೀರಾಮಚಂದ್ರನು ಕೋಪದಿಂದ "ಜಾಬಾಲೀ, ಸತ್ಯವು ನನಗೆ ಎಲ್ಲಕ್ಕೂ ಪ್ರಿಯವಾಗಿರುವದು; ಸತ್ಯಕ್ಕೆ ಸರಿಯಾದುದು ಯಾವದೂ ಇಲ್ಲ. ವಿಶೇಷತಃ ಅರಸನು ಸತ್ಯದಿಂದಲೇ ರಾಜ್ಯವಾಳಬೇಕು. ರಾಜ್ಯವೆಂಬ ಕಟ್ಟಡವು ಸ್ಥಿರವಾಗಿ ನಿಲ್ಲಬೇಕಾದರೆ ಸತ್ಯವೆಂಬ ತಳಹದಿಯು ಚನ್ನಾಗಿರಬೇಕು. "ಯಥಾ ರಾಜಾ ತಥಾ ಪ್ರಜಾಃ" ಎಂಬಂತೆ ಅರಸನೇ ಸತ್ಯವನ್ನು ಬಿಟ್ಟರೆ ಪ್ರಜೆಗಳೂ ಅದರಂತೆ ಆಗುವರು. ಕಾರಣ ನಾನು ಸತ್ಯವನ್ನು ಎಂದಿಗೂ ಬಿಡಲಾರೆನು. ಸತ್ಯದಿಂದ ಕೀರ್ತಿ, ಸಂಪತ್ತಿ, ಭೂಮಿ ಇವೆಲ್ಲವೂ ತಾನಾಗಿಯೇ ದೊರೆಯುತ್ತವೆ. ಕಾರಣ ನಾನೂ ಸತ್ಯದಿಂದಲೇ ನಡೆಯುವೆನು. ಭರತನು ಕ್ಷಮಾಶೀಲನೂ, ಗುರುಜನರಪ್ರಿಯನೂ, ಇರುವನು; ಅದ್ದರಿಂದ ಅವನು ತಾತನ ವಚನವನ್ನು ಸರಿಯಾಗಿ ಪಾಲಿಸುವನು'' ಎಂದು ಹೇಳಿದನು.

ಆಗ ಆ ಇಬ್ಬರೂ ರಾಜಪುತ್ರರ ಉದಾರವಾದ ಮಾತುಗಳನ್ನು ಕೇಳಿ "ಧನ್ಯ ರಾಮಚಂದ್ರಾ, ಧನ್ಯ ಭರತಾ'' ಎಂದು ಪ್ರಜೆಗಳು ಕೊಂಡಾಡಿದರು. ರಾಮಚಂದ್ರನ ಈ ನಿರ್ಧಾರದ ಮಾತುಗಳನ್ನು ಕೇಳಿ ಭರತನು "ನಾನೊಬ್ಬನೇ, ಈ ರಾಜ್ಯವನ್ನು ಹೇಗೆ ಆಳಲಿ? ತಾವು ಹಿರಿಯರು. ಕಾರಣ ತಾವೇ ಈ ರಾಜ್ಯವನ್ನಾಳಬೇಕು" ಎಂದು ಗಟ್ಟಿಯಾಗಿ ಪಾದಗಳನ್ನು ಹಿಡಿದನು. ಆಗ ರಾಮಚಂದ್ರನು ಆತನನ್ನು ಆಲಿಂಗಿಸಿ ಸಮಾಧಾನಗೊಳಿಸಿ "ಭರತಾ, ಕೇಳು. ಚಂದ್ರನಿಂದಿರುವ ಶೋಭೆಯು ಇಲ್ಲದಂತಾದೀತು. ಹಿಮಾಲಯದಲ್ಲಿ ಹಿಮವಿಲ್ಲದಂತಾದೀತು; ಸಮುದ್ರವು ತನ್ನ ಮರ್ಯಾದೆಯನ್ನು ಬಿಟ್ಟು

ಮುಂದೆ ಬರಬಹುದು, ಆದರೆ ನಾನು ನನ್ನ ವಚನವನ್ನು ಎಂದಿಗೂ ಬಿಡಲಾರೆನು" ಎಂದು ಹೇಳಿದನು. ಆಗ ಭರತನು ನಿರುತ್ತರನಾಗಿ



ಭರತ ಭೆಟ್ಟಿ

"ಅಣ್ಣಾ ರಾಮಚಂದ್ರಾ, ನಾನು ನಿಮ್ಮ ಹೆಸರಿನಿಂದಲೇ ಹದಿನಾಲ್ಕು ವರ್ಷ ರಾಜ್ಯವನ್ನಾಳುವೆನು. ಆದರೆ ತಾವು ತಮ್ಮ ಪಾದುಕೆಗಳನ್ನು

ನನಗೆ ಕೊಡಬೇಕು. ಈ ಪಾದುಕೆಗಳು ಎಲ್ಲ ಜನರಿಗೆ ಹಿತವನ್ನುಂಟು ಮಾಡುವವು " ಎಂದು ಹೇಳಿದನು. ಆಗ ರಾಮನು ತನ್ನ ಪಾದುಕೆಗಳನ್ನು ಭರತನಿಗೆ ಕೊಟ್ಟನು. ಕೂಡಲೆ ಭರತನು " ಈ ಪಾದುಕೆಗಳ ಹೆಸರಿನಿಂದ ನಾನು ರಾಜ್ಯವನ್ನಾಳುವೆನು; ನಾನು ಅಯೋಧ್ಯೆಯ ಊರಹೊರಗಿರುವ ನಂದಿಗ್ರಾಮದಲ್ಲಿ ನಿಂತು ಜಡೆಕಟ್ಟಿ, ನಾರುಬಟ್ಟೆಗಳನ್ನು ಧರಿಸಿ ನೀವು ಬರುವವರೆಗೆ ನಾನು ನಿಮ್ಮ ದಾರಿಯನ್ನು ನೋಡುತ್ತ ಅಲ್ಲಿಯೇ ಇರುವೆನು. ಹದಿನಾಲ್ಕು ವರ್ಷವಾದನಂತರ ನೀವು ಮರಳಿ ಅಯೋಧ್ಯೆಗೆ ಬಾರದಿದ್ದರೆ ಚಿತೆಯಲ್ಲಿ ಹಾರಿಕೊಂಡು ಪ್ರಾಣಕೊಡುವೆನು " ಎಂದು ಹೇಳಿದನು. ಆಗ ಭರತನನ್ನು ಆಲಿಂಗಿಸಿ " ಭರತಾ, ನೀನು ಚಿಂತಿಸಬೇಡ, ಹದಿನಾಲ್ಕು ವರ್ಷಗಳಾದನಂತರ ನಾನು ಖಂಡಿತವಾಗಿಯೇ ಬರುವೆನು; ಮತ್ತು ನೀನು ನಿನ್ನ ಮಾತೆಯಾದ ಕೈಕೇಯಿಯನ್ನು ಯೋಗ್ಯರೀತಿಯಿಂದ ಪರಿಪಾಲಿಸು; ಅವಳ ಮೇಲೆ ಕೋಪಿಸಬೇಡ " ಎಂದು ಹೇಳಿ ಎಲ್ಲ ಗುರುಹಿರಿಯರಿಗೆ ನಮಿಸಿ ಹೋಗಲು ಅನುಮತಿಯನ್ನು ಕೊಟ್ಟನು. ಕೂಡಲೆ ಭರತನು ಆ ಪಾದುಕೆಗಳನ್ನು ತಲೆಯಮೇಲಿಟ್ಟುಕೊಂಡು ರಾಮನಿಗೆ ತ್ರಿವಾರ ಪ್ರದಕ್ಷಿಣೆಯನ್ನು ಹಾಕಿ ಎಲ್ಲ ಸೈನ್ಯಸಮೇತವಾಗಿ ಮರಳಿ ಭಾರದ್ವಾಜರಆಶ್ರಮಕ್ಕೆ ಬಂದನು. ಹಾಗೂ ಎಲ್ಲ ಸಂಗತಿಯನ್ನು ಭಾರದ್ವಾಜಮುನಿಗಳಿಗೆ ಅರುಹಿ, ಗಂಗೆಯನ್ನು ದಾಟಿ ಶೃಂಗವೇರಕ್ಕೆ ಬಂದನು. ಮತ್ತು ಗೂಹಕನ ಕಡೆಯಿಂದ ಅಪ್ಪಣೆ ಪಡೆದು ಅಯೋಧ್ಯೆಗೆ ಬಂದು ಪಾದುಕೆಗಳಿಗೆ ಯಥಾ ಯೋಗ್ಯರೀತಿಯಿಂದ ಪಟ್ಟಾಭಿಷೇಕವನ್ನು ಮಾಡಿ, ಶತ್ರುಘ್ನನಿಗೆ ರಾಜ್ಯಕಾರಭಾರವನ್ನೊಪ್ಪಿಸಿ ತಾನು ನಂದಿಗ್ರಾಮಕ್ಕೆ ಬಂದು ನಿಂತನು. ಈ ಪ್ರಕಾರವಾಗಿ ಭರತನಿಗೆ ರಾಮಚಂದ್ರನ ಭೆಟ್ಟಿಯಾಯಿತು.

## ೧೨. ಪಂಚವಟಿ ಗಮನ

ಇತ್ತ ರಾಮಚಂದ್ರನು ಲಕ್ಷ್ಮಣನನ್ನು ಕರೆದು " ಲಕ್ಷ್ಮಣಾ, ಇನ್ನು ನನಗೆ ಈ ಚಿತ್ರಕೂಟದಲ್ಲಿರಲು ಮನಸ್ಸಿಲ್ಲದಂತಾಗಿದೆ. ಭರತನು ನನಗೆ ಇಲ್ಲಿಯೇ ಭೆಟ್ಟಿಯಾದನು, ಮಾತೆಯೂ ಭೆಟ್ಟಿಯಾದಳು, ಎಲ್ಲ ನಗರವಾಸಿಗಳೂ ಭೆಟ್ಟಿಯಾದರು; ಅದೆಲ್ಲವೂ ನೆನಪಾಗಿ ನನ್ನ ಮನಸ್ಸಿಗೆ ಬಹಳ ದುಃಖವನ್ನುಂಟು ಮಾಡುತ್ತದೆ. ಆನೆ—ಕುದುರೆಗಳ ತುಳಿತದಿಂದ ಈ ವನವು ಕೆಟ್ಟುಹೋಗಿದೆ. ಅದಕ್ಕಾಗಿ ನಾವು ಇಲ್ಲಿಂದ ಹೊರಟು ದಕ್ಷಿಣದಿಕ್ಕಿಗಿರುವ ದಂಡಕಾರಣ್ಯಕ್ಕೆ ಹೋಗುವಾ" ಎಂದು ಹೇಳಿ ಎಲ್ಲರೂ ಅಲ್ಲಿಂದ ಹೊರಟು ಅತ್ರಿಮಹರ್ಷಿಗಳ ಆಶ್ರಮಕ್ಕೆಬಂದರು. ಆಗ ಅತ್ರಿಮಹರ್ಷಿಗಳೂ,ಮತ್ತು ಅವರ ಪತ್ನಿಯಾದ ಅನುಸೂಯೆಯೂ, ಈ ಈರ್ವರು ರಾಮ—ಲಕ್ಷ್ಮಣ—ಸೀತೆಯರನ್ನು ಇದಿರ್ಗೊಂಡು ತಮ್ಮ ಆಶ್ರಮಕ್ಕೆ ಕರೆತಂದು ಆದರದಿಂದ ಸತ್ಕರಿಸಿದರು, ಆಗ ಸೀತೆಯು ಅನುಸೂಯಾಮಾತೆಗೆ ನಮಿಸಿ " ನಾನು ಜನಕಕುಮಾರಿ ಸೀತೆಯು " ಎಂದು ಹೇಳಿದಳು. ಆಗ ಅನುಸೂಯೆಯು ಸೀತೆಯನ್ನು ಆಲಿಂಗಿಸಿ " ಮಗಳೇ, ನೀನು ನಿನ್ನ ಧರ್ಮವನ್ನು ಬಿಡದೆ ವನಕ್ಕೆ ಬಂದುದಕ್ಕಾಗಿ ನನಗೆ ಬಹಳೇ ಆನಂದವಾಗಿದೆ. ನೀನು ಕ್ಷಾತ್ರ ಧರ್ಮವನ್ನು ಪೂರ್ಣವಾಗಿ ಬಲ್ಲವಳು. ತನ್ನ ಪತಿಯು ವನದಲ್ಲಿ ಇರಲಿ, ಇಲ್ಲವೆ ನಗರದಲ್ಲಿ ಇರಲಿ, ಉತ್ತಮ ಸ್ಥಿತಿಯಲ್ಲಿರಲಿ, ಇಲ್ಲವೆ ಕೆಟ್ಟ ಸ್ಥಿತಿಯಲ್ಲಿರಲಿ ಆದರೂ ಸತಿಗೆ ಅವನು ಪ್ರಿಯನೇ ಇರುವನು. ಅಂಥ ಸತಿಯು ಉತ್ತಮ ಲೋಕವನ್ನು ಹೊಂದುವಳು; ಪತಿಯು ಧನವಿಹೀನನೇ ಇರಲಿ, ಅತಿ ಕಾಮಿಯೂ, ದುಃಶೀಲನೂ, ಇದ್ದರೂ ಕೂಡ, ಸತಿಗೆ ಪತಿಯೇ ದೇವರು. ಸೀತೆಯೇ ನನಗೆ ನಿನ್ನಮೇಲೆ ಬಹು ಪ್ರೀತಿಯು ಉಂಟಾ

ಗಿದೆ. ಕಾರಣ ನಾನು ನಿನಗೆ ನನ್ನ ತಪಃಪ್ರಭಾವದಿಂದ ದೊರಕಿಸಿರುವ ಕೆಲವು ವಸ್ತ್ರ—ಒಡವೆಗಳನ್ನು ಕೊಡುವೆನು" ಎಂದು ಹೇಳಿ ದಿವ್ಯವಾದ ವಸ್ತ್ರಾಲಂಕಾರಗಳನ್ನು ಕೊಟ್ಟಳು.

ಆಗ ಸೀತೆಯು ಅವನ್ನು ಮೈಮೇಲೆ ಧರಿಸಿ, ಅನಸೂಯೆಗೆ ವಂದಿಸಿ ಶ್ರೀರಾಮನ ಬಳಿಗೆ ಬಂದಳು. ಆಗ ಆಕೆಯ ಮನೋಹರವಾದ ರೂಪವನ್ನು ಕಂಡು ರಾಮನಿಗೆ ಬಹಳ ಸಂತೋಷವಾಯಿತು. ಆ ರಾತ್ರಿ ಅಲ್ಲಿಯೇ ಕಳೆದು ಮರುದಿವಸ ತಮ್ಮ ನಿತ್ಯ—ನೈಮಿತ್ತಿಕ ಕರ್ಮಗಳನ್ನು ತೀರಿಸಿಕೊಂಡು ತಪಸ್ವೀಜನರ ನಿರೋಪವನ್ನು ತೆಗೆದು ಕೊಂಡು ಹೋಗಲು ಉದ್ಯುಕ್ತರಾದರು. ಆಗ ಆ ತಪಸ್ವಿಗಳು "ರಾಮಚಂದ್ರಾ, ನೀನು ಅಡವಿಯಲ್ಲಿ ಬಹಳ ಜಪ್ಪಿಸಿಕೊಂಡು ಹೋಗಬೇಕು. ರಾಕ್ಷಸರೂ, ಹಿಂಸ್ರಪಶುಗಳೂ ಬಹಳ ಇರುವವು. ಅದಕ್ಕಾಗಿ ಬಹಳ ಎಚ್ಚರದಿಂದಿರಬೇಕು" ಎಂದು ಹೇಳಿ ಅವರನ್ನು ಕಳುಹಿದರು.

ಮುಂದೆ ಅವರು ಒಂದು ಘೋರಾರಣ್ಯವನ್ನು ಹೊಕ್ಕರು. ಆ ಅರಣ್ಯದಲ್ಲಿರುವ ಋಷಿಗಳು ಶ್ರೀರಾಮನ ಸುಕುಮಾರವಾದ ರೂಪವನ್ನು ಕಂಡು ಬೆರಗಾದರು. ಈ ಪ್ರಕಾರ ರಾಮಚಂದ್ರನು ಎಲ್ಲರ ಮನಸ್ಸನ್ನು ಸೆಳೆಯುತ್ತ ಮುಂದೆ ಸಾಗಿದನು. ತುಸು ಮುಂದೆ ಹೋಗುವಷ್ಟರಲ್ಲಿ ಒಂದು ಅಕ್ರಾಳ—ವಿಕ್ರಾಳವಾದ ರಾಕ್ಷಸವನ್ನು ಕಂಡರು. ಅದರ ದೇಹವು ಪರ್ವತದಷ್ಟು ಎತ್ತರವಿದ್ದು ಅದು ತನ್ನ ದೊಡ್ಡ ಬಾಯನ್ನು ತೆಗೆದಿತ್ತು, ಕೈಯಲ್ಲಿ ತ್ರಿಶೂಲವನ್ನು ಹಿಡಿದು ಅದರ ತುದಿಗೆ ಸಿಂಹ ಮತ್ತು ಆನೆಗಳ ರುಂಡವನ್ನು ಚುಚ್ಚಿತ್ತು. ಈ ಪ್ರಕಾರವಾಗಿ ಅದು ರಾಮಚಂದ್ರನು ಹೋಗುತ್ತಿರುವ ದಾರಿಯಲ್ಲಿ ಕುಳಿತುಕೊಂಡಿತ್ತು. ಅದು ಇವರನ್ನು ಕಂಡು ದೊಡ್ಡ ಧ್ವನಿ

ಯಿಂದ ನಕ್ಕು " ಮೂರ್ಖರೇ, ನೀವು ಈ ನನ್ನ ಅಡವಿಯಲ್ಲಿ ಹೇಗೆ ಬಂದಿರಿ? ನೀವು ಯಾರು? ಈ ಸುಂದರವಾದ ಸ್ತ್ರೀಯಂತೂ ನನಗೆ ಯೋಗ್ಯಳು. ನಿಮಗೆ ನಿಮ್ಮ ಜೀವವು ಉಳಿಯಬೇಕಾಗಿದ್ದರೆ ಇವಳನ್ನು ಬಿಟ್ಟು ಹೊರಟುಹೋಗಿರಿ" ಎಂದು ಹೇಳಿತು. ಅದರ ಈ ಮಾತನ್ನು ಕೇಳಿ ಸೀತೆಯು ಬಹಳ ಗಾಬರಿಯಾದಳು. ಆಕೆಯ ಮೋರೆಯನ್ನು ನೋಡಿ ರಾಮನು ಅತಿ ದುಃಖದಿಂದ " ಕೈಕೇಯಿಯೇ, ನೀನು ವನಕ್ಕೆ ಕಳುಹಿದ್ದು ಈಹೊತ್ತಿಗೆ ಸಾರ್ಥಕವಾಯಿತು; ನಿರುಪದ್ರವಿಯಾದ ಈ ಜನಕಕುಮಾರಿಯು ನನ್ನ ಬೆನ್ನು ಹತ್ತಿ ದುಃಖಸಾಗರದಲ್ಲಿ ಮುಳುಗಿದಳು" ಎಂದು ನುಡಿದು ಬಹಳ ಕೋಪದಿಂದ " ಎಲೈ ರಾಕ್ಷಸನೇ, ನೀನು ಇವಳ ಗೋಜಿಗೆ ಹೋಗಬೇಡ. ಇಲ್ಲವಾದರೆ ವ್ಯರ್ಥವಾಗಿ ಪ್ರಾಣವನ್ನು ಕಳೆದುಕೊಳ್ಳುವಿ. ನಾನು ದಶರಥ ಪುತ್ರ ರಾಮನು. ತಂದೆಯ ವಚನಕ್ಕಾಗಿ ವನಕ್ಕೆ ಬಂದಿರುವೆನು; ನಾನು ನಿನಗೆ ಅಂಜುವವನಲ್ಲ. ಸುಮ್ಮನೇ ನನ್ನ ಪತ್ನಿಯನ್ನು ಬಿಡು" ಎಂದು ಹೇಳಿದನು. ಆಗ ಆ ರಾಕ್ಷಸವು " ಎಲೈ ಮೂರ್ಖರಿರಾ, ನಾನು ವಿರಾಧನೆಂಬ ರಾಕ್ಷಸನು. ನನಗೆ ಬ್ರಹ್ಮದೇವನ ವರದಿಂದ ಯಾವ ಶಸ್ತ್ರಾಸ್ತ್ರಗಳಿಂದಲೂ ಮರಣವಿಲ್ಲ. ಸುಮ್ಮನೇ ಗರ್ವವನ್ನು ತೋರಿಸಬೇಡಿರಿ. ನಾನು ಮೊದಲು ನಿಮ್ಮ ರಕ್ತವನ್ನು ಕುಡಿದು ಅನಂತರ ಈಕೆಯನ್ನು ಹೆಂಡತಿಯನ್ನಾಗಿ ಮಾಡಿಕೊಳ್ಳುವೆನು" ಹೀಗೆ ಅಂದು ಸೀತೆಯನ್ನು ಬಿಟ್ಟು ತ್ರಿಶೂಲವನ್ನು ಕೈಯ್ಯಲ್ಲಿ ತೆಗೆದುಕೊಂಡು ರಾಮ-ಲಕ್ಷ್ಮಣರಮೇಲೆ ಹಾರಿತು. ಆಗ ರಾಮ-ಲಕ್ಷ್ಮಣರು ತಮ್ಮ ಬಾಣಗಳಿಂದ ಆತನ ತ್ರಿಶೂಲವನ್ನು ಮುರಿದು ಒಗೆದರು. ಮತ್ತು ಆತನ ಮೈಮೇಲೆ ಅಸಂಖ್ಯವಾದ ಬಾಣಗಳನ್ನು ಬಿಟ್ಟರು; ಅವೆಲ್ಲವೂ ವ್ಯರ್ಥವಾದವು. ಆಗ ವಿರಾಧನು ಮುಂದೆ ಬಂದು ರಾಮ-ಲಕ್ಷ್ಮಣರನ್ನು ತನ್ನ ಕೈಯಲ್ಲಿ

ಹಿಡಿದುಕೊಂಡು ಓಡಹತ್ತಿದನು. ಕೂಡಲೆ ಸೀತೆಯು "ಎಲೈ ರಾಕ್ಷಸನೇ, ನನ್ನನ್ನು ಮುರಿದು ತಿನ್ನು; ಆದರೆ ಅವರನ್ನು ಬಿಟ್ಟುಬಿಡು" ಎಂದು ಒದರುತ್ತ ಆತನ ಬೆನ್ನ ಹಿಂದೆ ಓಡಹತ್ತಿದಳು. ಸೀತೆಯ ಈ ಅವಸ್ಥೆಯನ್ನು ಕಂಡು ರಾಮ—ಲಕ್ಷ್ಮಣರು ಖಡ್ಗದಿಂದ ಆ ರಾಕ್ಷಸನ ಕೈಕಾಲುಗಳನ್ನು ಕಡಿದು ಚಲ್ಲಿದರು. ಕೂಡಲೆ ಅದು ಕಟ್ಟಿಧ್ವನಿಯಿಂದ ಚೀರುತ್ತ ಧೊಪ್ಪನೇ ನೆಲಕ್ಕೆ ಬಿದ್ದಿತು. ಆದರೂ ಅದು ಸಾಯಲಿಲ್ಲ. ಆಗ ರಾಮನು "ಈತನು ಹೀಗಾದರೆ ಸಾಯುವ ದಿಲ್ಲ. ಲಕ್ಷ್ಮಣಾ ನಾನು ಈತನನ್ನು ಹೀಗೆಯೇ ಗಟ್ಟಿಯಾಗಿ ಹಿಡಿ ದಿರುತ್ತೇನೆ; ಕೂಡಲೆ ನೀನು ಒಂದು ದೊಡ್ಡ ತೆಗ್ಗನ್ನು ತೆಗೆ" ಎಂದು ಹೇಳಿ ಆ ತೆಗ್ಗಿನಲ್ಲಿ ರಾಕ್ಷಸನನ್ನು ನುಗಿಸಿ ಮೇಲೆ ಮಣ್ಣನ್ನು ಮುಚ್ಚಿದರು. ಈ ಪ್ರಕಾರವಾಗಿ ಆ ಭಯಂಕರನಾದ ರಾಕ್ಷಸನನ್ನು ಸಂಹರಿಸಿ ಮುಂದೆ ಹೊರಟು; ಶರಭಂಗಋಷಿಯ ಆಶ್ರಮದ ಸಮೀಪಕ್ಕೆ ಬಂದರು. ಆ ಆಶ್ರಮದ ಬಳಿಯಲ್ಲಿ ನಡೆದಿರುವ ಚಮತ್ಕಾರವನ್ನು ಕಂಡು ರಾಮನು "ಈ ದಿವ್ಯವಾದ ರಥವು ಪೃಥ್ವಿಯನ್ನು ಬಿಟ್ಟು ನಡಂತರದಲ್ಲಿ ನಿಂತಿರುವದು. ಇದರ ತೇಜವು ಎಲ್ಲಿಕಡೆಯಲ್ಲಿಯೂ ಹಬ್ಬಿರುತ್ತದೆ; ಇದರ ಅಶ್ವಗಳು ಎಷ್ಟು ಸುಂದರವಾಗಿರುತ್ತವೆ! ಇದು ಇಂದ್ರನ ರಥವಾಗಿರಬಹುದು. ಸಿದ್ಧ—ಗಂಧರ್ವರು ತಮ್ಮತಮ್ಮ ವಿಮಾನಗಳಲ್ಲಿ ಕುಳಿತು ಇಂದ್ರನನ್ನು ಸ್ತುತಿಸುತ್ತಿರುವರು. ಇವರೆಲ್ಲರೂ ಸ್ವರ್ಗಲೋಕದಿಂದ ಬಂದಿರಬಹುದು" ಎಂದು ಲಕ್ಷ್ಮಣನಿಗೆ ಹೇಳಿ ತಾನು ಆ ಚಮತ್ಕಾರವನ್ನು ನೋಡುವ ಸಲುವಾಗಿ ಮುಂದೆ ಹೋದನು. ಅಷ್ಟರಲ್ಲಿ ಇಂದ್ರನು ಶರಭಂಗರ ಅಪ್ಪಣೆಯನ್ನು ಪಡೆದು ಅದೃಶ್ಯನಾದನು. ಕೂಡಲೆ ರಾಮನು ಶರಭಂಗರಿಗೆ ಸಾಷ್ಟಾಂಗವೆರಗಿದನು. ಆಗ ಶರಭಂಗರು ರಾಮನನ್ನು ಪ್ರೀತಿಯಿಂದ ಸ್ವಾಗತಿಸಿ "ರಾಮನೇ, ಈಗಲೇ ನೀನು ಒಂದು ಚಮತ್ಕಾರವನ್ನು ಕಂಡಿರ

ಬಹುದು. ಇಂದ್ರನು ನನ್ನ ತಪಸ್ಸಿಗೆ ಮೆಚ್ಚಿ, ನನ್ನನ್ನು ಸ್ವರ್ಗಕ್ಕೆ ಒಯ್ಯಲು ತಾನು ಸ್ವತಃ ಬಂದಿದ್ದನು; ಆದರೆ ನೀನು ಬರುವದನ್ನು ಕಂಡು ನಿನ್ನನ್ನು ಸತ್ಕರಿಸಿದಮೇಲೆ ನಾನು ಬರುವೆನೆಂದು ಇಂದ್ರನಿಗೆ ಹೇಳಿದೆನು. ನೀನು ಪ್ರತ್ಯಕ್ಷ ವಿಷ್ಣುವಿನ ಅವತಾರನಿರುವಿ. ನಿನ್ನ ಆದರಾತಿಥ್ಯ ಮಾಡುವ ಸುಸಂಧಿಯು ನನಗೆ ಮಹದ್ಭಾಗ್ಯದಿಂದ ದೊರಕಿದೆ. ಇಂದು ನನ್ನ ಜನ್ಮವು ಸಾರ್ಥಕವಾಯಿತು. ನೀನು ಇಲ್ಲಿಯೇ ಸಮೀಪದಲ್ಲಿರುವ ಸುತೀಕ್ಷ್ಣರ ಆಶ್ರಮಕ್ಕೆ ಹೋಗು. ನಾನು ನನ್ನ ದೇಹವನ್ನು ಚಿತೆಯಮೇಲಿಡುವವರೆಗೆ ನನ್ನಕಡೆಗೆ ಕೃಪಾದೃಷ್ಟಿಯಿಂದ ನೋಡು. ಅನಂತರ ಮುಂದೆ ಹೋಗು" ಎಂದು ಹೇಳಿ ಅವರು ತಮ್ಮ ದೇಹವನ್ನು ಅಗ್ನಿನಾರಾಯಣನಿಗೆ ಅರ್ಪಿಸಿದರು. ಕೂಡಲೆ ಅವರ ದೇಹದಿಂದ ದಿವ್ಯ ಶರೀರವನ್ನು ಧರಿಸಿರುವ ಶರಭಂಗರು ಬ್ರಹ್ಮಲೋಕಕ್ಕೆ ಹೋದರು. ಮುಂದೆ ರಾಮನು ಅವರ ಆಜ್ಞೆಯಂತೆ ಸುತೀಕ್ಷ್ಣರ ಆಶ್ರಮಕ್ಕೆ ಹೊರಟನು. ಶರಭಂಗರ ಆಶ್ರಮದಲ್ಲಿರುವ ವಾಲಖಿಲ್ಯಮುನಿಗಳು ಶ್ರೀರಾಮನಿಗೆ ಭೆಟ್ಟಿಯಾಗಿ ದಂಡಕಾರಣ್ಯದಲ್ಲಿ ಮುನಿಗಳಆಶ್ರಮಗಳು ಬಹಳವಾಗಿರುತ್ತವೆ. ಅವರೆಲ್ಲರಿಗೂ ರಾಕ್ಷಸರಿಂದ ಬಹಳ ತೊಂದರೆಯಾಗಹತ್ತಿದೆ. ನೀನು ಅನಾಥರ ನಾಥನು; ದುಷ್ಟರನ್ನು ಶಿಕ್ಷಿಸುವವನು; ಅದಕ್ಕಾಗಿ ನೀನು ನಮ್ಮನ್ನು ರಕ್ಷಿಸಬೇಕು" ಎಂದು ಬೇಡಿಕೊಂಡರು. ಆಗ ರಾಮನು- "ತಪೋನಿಷ್ಠರಾದ ಬ್ರಾಹ್ಮಣರೇ, ನೀವು ನನಗೆ ಶರಣು ಬಂದಿರುವೆವೆಂದು ಅನ್ನಬೇಡಿರಿ. ನಿಮ್ಮನ್ನು ರಕ್ಷಿಸುವದು ನನ್ನ ಕರ್ತವ್ಯವಾಗಿದೆ; ಅದಕ್ಕಾಗಿಯೇ ನಾನು ಇಲ್ಲಿಯವರೆಗೆ ಬಂದಿರುವೆನು. ಪಿತೃವಚನವನ್ನು ಪರಿಪಾಲಿಸಿ, ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಸಂರಕ್ಷಿಸುವದಕ್ಕೆ ನಾನು ವನಕ್ಕೆ ಹೊರಟಿರುವೆನು" ಎಂದು ಹೇಳಿದನು. ರಾಮನ ಈ ಸೌಜನ್ಯವಾದ ಮಾತನ್ನು ಕೇಳಿ ಆ ಮುನಿಗಳು ಬಹಳ

ಸಂತುಷ್ಟರಾದರು. ಕೂಡಲೆ ಅವರು ರಾಮ-ಲಕ್ಷ್ಮಣ—ಸೀತೆ ಇವರ ಸಹಿತವಾಗಿ ಸುತೀಕ್ಷ್ಣರನ್ನು ಕಂಡು ರಾಮಚಂದ್ರನು ಅವರ ಚರಣಕ್ಕೆರಗಿ "ಶರಭಂಗರು ನನ್ನನ್ನು ತಮ್ಮ ಕಡೆಗೆ ಕಳಿಸಿರುವರು" ಎಂದು ಹೇಳಿದನು. ಆಗ ಸುತೀಕ್ಷ್ಣರು ರಾಮ-ಲಕ್ಷ್ಮಣ ಸೀತೆ-ಯರನ್ನು ಅತ್ಯಾದರದಿಂದ ಸತ್ಕರಿಸಿ ಉತ್ತಮೋತ್ತಮವಾದ ಹಣ್ಣು-ಹಂಪಲಗಳನ್ನು ಕೊಟ್ಟರು. ಮತ್ತು "ನೀವು ಇಲ್ಲಿಯೇ ಇರಬೇಕು" ಎಂದು ಬೇಡಿಕೊಂಡರು. ಆಗ ರಾಮನು "ನಾನು ಎಲ್ಲ ಆಶ್ರಮವಾಸಿ ಜನರಿಗೆ "ನಿಮ್ಮನ್ನು ರಾಕ್ಷಸರಿಂದ ರಕ್ಷಿಸುವೆ" ಎಂದು ಹೇಳಿರುವೆನು. ಕಾರಣ ನಾನು ಹೋಗಲೇಬೇಕು" ಎಂದು ಹೇಳಿದನು. ಆಗ ಸುತೀಕ್ಷ್ಣರು ರಾಮನಿಗೆ ಹೊರಡಲು ಅಜ್ಞೆ ಕೊಟ್ಟು "ನೀವು ಎಲ್ಲ ಆಶ್ರಮಗಳನ್ನು ಕಂಡು ಮರಳಿ ಇಲ್ಲಿಗೇ ಬರಬೇಕು" ಎಂದು ಹೇಳಿದರು. ಆಗ ರಾಮನು ಅವರ ಮಾತಿಗೆ ಒಪ್ಪಿಗೆ ಇತ್ತು, ಲಕ್ಷ್ಮಣ—ಸೀತೆಯರ ಸಹಿತವಾಗಿ ಅಲ್ಲಿಂದ ಹೊರಟನು. ಮುಂದೆ ಅವರು ಎಲ್ಲ ಋಷಿಗಳ ಆಶ್ರಮಗಳಲ್ಲಿ ನಾಲ್ಕು-ತಿಂಗಳು-ಆರು ತಿಂಗಳು-ವರ್ಷ ಹೀಗೆ ಕಾಲವನ್ನು ಕಳೆಯುತ್ತ ರಾಕ್ಷಸರನು ಸಂಹರಿಸುತ್ತ ಹತ್ತು ವರ್ಷ ಕ್ರಮಿಸಿದನು. ಅಗಸ್ತ್ಯಋಷಿಗಳ ಆಶ್ರಮವನ್ನು ವಿಚಾರಿಸಲು ಮರಳಿ ಸುತೀಕ್ಷ್ಣರ ಆಶ್ರಮಕ್ಕೆ ಬಂದನು.

ಆಗ ಸುತೀಕ್ಷ್ಣರು "ಅಗಸ್ತ್ಯಋಷಿಯ ತಮ್ಮ ಇಧ್ಮವಾಹನನ ಆಶ್ರಮವು ಇಲ್ಲಿಂದ ನಾಲ್ಕು ಯೋಜನ ದೂರದಲ್ಲಿ ಇರುವದು. ಮೊದಲು ಅಲ್ಲಿ ಹೋಗಿ ಆನಂತರ ಅಗಸ್ತ್ಯಋಷಿಗಳ ಆಶ್ರಮಕ್ಕೆ ಹೋಗಬೇಕು" ಎಂದು ಹೇಳಿ ಹೊರಡಲು ಅಜ್ಞೆ ಇತ್ತರು. ಮುಂದೆ ಅವರ ಹೇಳಿಕೆಯಂತೆ ಸೂರ್ಯಾಸ್ತದ ಸಮಯಕ್ಕೆ ಅಗಸ್ತ್ಯಋಷಿಗಳ ತಮ್ಮನ ಆಶ್ರಮಕ್ಕೆ ಬಂದರು. ಆಗ ಆ ಋಷಿಗಳು ಶ್ರೀರಾಮಚಂದ್ರನ ದರ್ಶನ

ತೆಗೆದುಕೊಂಡು ಅವನನ್ನು ಉತ್ತಮರೀತಿಯಿಂದ ಸತ್ಕರಿಸಿದರು. ಮರುದಿವಸ ರಾಮ–ಲಕ್ಷ್ಮಣರು ಅಲ್ಲಿಂದ ಹೊರಟರು. ಹೋಗುತ್ತ ದಾರಿಯಲ್ಲಿ ಶ್ರೀರಾಮನು ಲಕ್ಷ್ಮಣನಿಗೆ ಅಗಸ್ತ್ಯಋಷಿಗಳ ಮಹಿಮೆಯನ್ನು ಹೇಳಿದನು. "ಹಿಂದಕ್ಕೆ ಅಗಸ್ತ್ಯಋಷಿಗಳು ದಕ್ಷಿಣ ದಿಕ್ಕನ್ನು ಮನುಷ್ಯರಸಲುವಾಗಿ ಮೃತ್ಯುವಿನಿಂದ ಬಿಡಿಸಿದರು. ಆ ಸ್ಥಾನದಲ್ಲಿ ವಾತಾಪಿ ಮತ್ತು ಇಲ್ವಲ ಎಂಬ ಮಹಾ ಭಯಂಕರವಾದ ಇಬ್ಬರು ರಾಕ್ಷಸರಿದ್ದರು. ಇಲ್ವಲನು ಬ್ರಾಹ್ಮಣ್ಯರೂಪವನ್ನು ಧರಿಸಿ ಸಂಸ್ಕೃತ ಭಾಷೆಯನ್ನು ಮಾತನಾಡಿ ಬ್ರಾಹ್ಮಣನನ್ನು ಶ್ರಾದ್ಧಕ್ಕೆ ಕರೆಯುತ್ತಿದ್ದನು. ಕೂಡಲೆ ವಾತಾಪಿಯು ಮೇಷ (ಕುರಿ) ರೂಪವನ್ನು ಧರಿಸುತ್ತಿದ್ದನು. ಆಗ ಇಲ್ವಲನು ಆ ಮೇಷನನ್ನು ಕೊಂದು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುತ್ತಿದ್ದನು. ಬ್ರಾಹ್ಮಣರ ಭೋಜನವಾದನಂತರ "ವಾತಾಪೀ, ಬೇಗ ಬಾ" ಎಂದು ಕರೆಯುತ್ತಿದ್ದನು. ಕೂಡಲೆ ವಾತಾಪಿಯು ಬ್ರಾಹ್ಮಣರ ಹೊಟ್ಟೆಯನ್ನು ಹರಿದು ಹೊರಗೆ ಬರುತ್ತಿದ್ದನು. ಈ ರೀತಿಯಿಂದ ಅವರು ಬ್ರಾಹ್ಮಣರನ್ನು ಮುರಿದು ತಿನ್ನುತ್ತಿದ್ದರು. ಆಗ ಎಲ್ಲ ಬ್ರಾಹ್ಮಣರು ಅಗಸ್ತ್ಯಮುನಿಗಳಿಗೆ ಶರಣು ಬಂದು "ನೀವು ನಮ್ಮನ್ನು ರಕ್ಷಿಸಬೇಕು" ಎಂದು ಬೇಡಿಕೊಂಡರು. ಮುಂದೆ ಇದೇ ರೀತಿಯಾಗಿ ಅಗಸ್ತ್ಯಮುನಿಗಳು ಇಲ್ವಲನ ಮನೆಯ ಶ್ರಾದ್ಧದ ಆಮಂತ್ರಣವನ್ನು ಸ್ವೀಕರಿಸಿ ಭೋಜನಕ್ಕೆಕುಳಿತರು. ಭೋಜನವಾದನಂತರ ಇಲ್ವಲನು "ವಾತಾಪಿ ಹೊರಗೆ ಬಾ" ಎಂದು ಕೂಗಿದನು. ಆಗ ಅಗಸ್ತ್ಯಮುನಿಗಳು ನಗುತ್ತ ಶಾಂತರೀತಿಯಿಂದ "ಅಪ್ಪಾ, ವಾತಾಪಿಯು ಇನ್ನೆಂತು ಹೊರಗೆ ಬರುವನು? ನಾನು ಆತನನ್ನು ಜೀರ್ಣಿಸಿರುವೆನು" ಎಂದು ಹೇಳಿ ಹೊಟ್ಟೆಯಮೇಲೆ ಕೈಯಾಡಿಸಿ ತೇಗಿದರು. ವಾತಾಪಿಯು ಹೊರಗೆ ಬಾರದಿದ್ದನ್ನು ಕಂಡು ಇಲ್ವನು ತನ್ನ ರಾಕ್ಷಸೀಯ ರೂಪ

ವನ್ನು ಪ್ರಕಟಿಸಿ, ಅಗಸ್ತ್ಯಮುನಿಗಳಮೇಲೆ ಅತಿ ಕ್ರೋಧದಿಂದ ಧಾವಿಸಿದನು. ಆಗ ಅಗಸ್ತ್ಯಮುನಿಗಳು ತಮ್ಮ ನೇತ್ರಾಗ್ನಿಯ ಜ್ವಾಲೆಯಿಂದ ಇಲ್ವನನ್ನು ಸುಟ್ಟು ಭಸ್ಮಮಾಡಿದರು. ಈ ರೀತಿ ಅಗಸ್ತ್ಯಮುನಿಗಳು ಬ್ರಾಹ್ಮಣರಮೇಲೆ ದಯೆದೋರಿ ಇಂಥ ಅಘಟಿತ ಕಾರ್ಯವನ್ನು ಮಾಡಿದರು. ಅಂದಿನಿಂದ ರಾಕ್ಷಸರು ಅಗಸ್ತ್ಯರಿಗೆ ಅಂಜುತ್ತಿದ್ದರು. ಅದಕ್ಕಾಗಿಯೇ ದಕ್ಷಿಣ ದಿಕ್ಕಿಗೆ ಅಗಸ್ತ್ಯಮುನಿಗಳ ಹೆಸರು ಬಿದ್ದಿರುತ್ತದೆ.

ಒಂದುದಿನ ವಿಂಧ್ಯಪರ್ವತನು ಅತಿ ಗರ್ವದಿಂದ ಬಹಳ ಎತ್ತರವಾಗಿ ಬೆಳೆದನು. ಬೆಳೆಯುತ್ತ ಬೆಳೆಯುತ್ತ ಆತನು ಸೂರ್ಯನನ್ನು ಅಡ್ಡಗಟ್ಟುವಂತೆ ಬೆಳೆದನು. ಆಗ ಎಲ್ಲ ದ್ವಿಜರಿಗೂ ಅಂಜಿಕೆಯುಂಟಾಯಿತು. ಅವರು ಅಗಸ್ತ್ಯಮುನಿಗಳ ಬಳಿಗೆ ಹೋಗಿ ವಿಂಧ್ಯಪರ್ವತನು ಬಹಳ ಗರ್ವದಿಂದ ಬೆಳೆಯುತ್ತಿರುವನು; ಅದಕ್ಕಾಗಿ ನೀವು ಆತನ ಗರ್ವವನ್ನಿಳಿಸಬೇಕು" ಎಂದು ಹೇಳಿದರು. ಕೂಡಲೆ ಅಗಸ್ತ್ಯರು ದಕ್ಷಿಣದಿಕ್ಕಿಗೆ ಹೊರಟರು. ಆಗ ವಿಂಧ್ಯಪರ್ವತವು ಅವರನ್ನು ಕಂಡು ಸಾಷ್ಟಾಂಗವೆರಗಿತು. ಕೂಡಲೆ ಅಗಸ್ತ್ಯಮುನಿಗಳು "ವಿಂಧ್ಯಾದ್ರಿ, ನಾನು ಬರುವವರೆಗೆ ನೀನು ಹೀಗೆಯೇ ಅಡ್ಡ ಬಿದ್ದಿರು" ಎಂದು ಹೇಳಿದರು. ಅಂದಿನಿಂದ ಇಂದಿನವರೆಗೆ ವಿಂಧ್ಯಪರ್ವತವು ಹಾಗೆಯೇ ಇರುತ್ತದೆ. ಮತ್ತು ಅಗಸ್ತ್ಯರು ದಕ್ಷಿಣದಲ್ಲಿಯೇ ಇರುತ್ತಾರೆ. ಅಂತಹ ಮಹಾ ಪರಾಕ್ರಮ ಶಾಲಿಗಳಾದ ಆ ಮಹರ್ಷಿಗಳ ಆಶ್ರಮಕ್ಕೆ ನಾವು ಹೊರಟಿದ್ದೇವೆ" ಎಂದು ಲಕ್ಷ್ಮಣನಿಗೆ ರಾಮನು ಹೇಳಿದನು. "ಲಕ್ಷ್ಮಣಾ, ಇಂಥ ಸಾಧುಜನರು ಯಾವಾಗಲೂ ಸಜ್ಜನರ ಹಿತವನ್ನೇ ಮಾಡುತ್ತಿರುತ್ತಾರೆ. ಕಾರಣ ನಾವು ನಮ್ಮ ವನವಾಸದ ಕೊನೆಯ ದಿವಸಗಳನ್ನು ಇವರ ಆಶ್ರಮದಲ್ಲಿಯೇ ಕಳೆಯೋಣ. ಅಗಸ್ತ್ಯಮಹರ್ಷಿಗಳ ದರ್ಶನಕ್ಕಾಗಿ ಸಿದ್ಧ–ಗಂಧರ್ವ–ದೇವತೆಗಳು

ದಿನಾಲು ಬರುತ್ತಿರುವರು ಇಲ್ಲಿ ಸುಳ್ಳು ಮಾತಾಡುವದು, ನಿರ್ದಯ ರೀತಿಯಿಂದ ನಡೆಯುವದು ಅಥವಾ ಪಾಪಿಯಾದ ಮನುಷ್ಯನು ನಿಲ್ಲುವದು ಎಂದಿಗೂ ಸಾಧ್ಯವಿಲ್ಲ. ಯಾಕಂದರೆ ಆ ಮಹರ್ಷಿಗಳ ತಪಃ ಪ್ರಭಾವವೇ ಅಂತಹದಿರುವದು" ಈ ಪ್ರಕಾರವಾಗಿ ಮಾತನಾಡುತ್ತ ಅಗಸ್ತ್ಯಮುನಿಗಳ ಆಶ್ರಮದ ಸಮೀಪಕ್ಕೆ ಬಂದರು. ಮತ್ತು ಅಗಸ್ತ್ಯ ಮುನಿಗಳ ಶಿಷ್ಯರ ಮುಖಾಂತರ ತಾವು ಬಂದಿರುವ ವಾರ್ತೆಯನ್ನು ಹೇಳಿ ಕಳುಹಿದರು. "ನಾನು ದಶರಥ ಪುತ್ರನಾದ ರಾಮಚಂದ್ರನು; ಸೀತಾ, ಲಕ್ಷ್ಮಣ ಸಮೇತವಾಗಿ ತಂದೆಯ ವಚನವನ್ನು ಪಾಲಿಸುವದರ ಸಲುವಾಗಿ ದಂಡಕಾರಣ್ಯಕ್ಕೆ ಬಂದಿರುವೆನು" ಎಂದು ಶಿಷ್ಯನು ಶ್ರೀರಾಮಚಂದ್ರನ ಸಮಾಚಾರವನ್ನು ಅಗಸ್ತ್ಯಮಹರ್ಷಿಗಳಿಗೆ ತಿಳಿಸಿದನು. ಆಗ ಅವರು ಅತ್ಯಾನಂದದಿಂದ ಅವರನ್ನು ಬೇಗನೆ ಕರೆದುಕೊಂಡು ಬರಲು ಶಿಷ್ಯನಿಗೆ ಅಪ್ಪಣೆ ಇತ್ತರು. ಕೂಡಲೆ ಶಿಷ್ಯನು ರಾಮ—ಲಕ್ಷ್ಮಣ—ಸೀತೆಯರನ್ನು ಕರೆದುಕೊಂಡು ಆಶ್ರಮದೊಳಕ್ಕೆ ಬಂದನು. ಆಶ್ರಮದಲ್ಲಿಯ ಶಾಂತವಾದ ಮತ್ತು ಮನೋಹರವಾದ ವಾತಾವರಣದಿಂದ ರಾಮಚಂದ್ರನಿಗೆ ಬಹಳ ಆನಂದವಾಯಿತು. ಮತ್ತು ಶಾಂತರೀತಿಯಿಂದ ಮೇಯುತ್ತಿರುವ ಚಿಗರೆಗಳನ್ನು ಕಂಡು ಬಹಳ ಸೋಜಿಗವಾಯಿತು. ಆನಂತರ ಸ್ವಲ್ಪ ಮುಂದಕ್ಕೆ ಬರುವಷ್ಟರಲ್ಲಿ ಅಲ್ಲಿರುವ ಬ್ರಹ್ಮ, ವಿಷ್ಣು, ಇಂದ್ರ, ಸೂರ್ಯ, ಭವ, ಕುಬೇರ, ವಾಯು, ವರುಣ, ಗಾಯಿತ್ರಿ, ವಸುಗಳು, ನಾಗರಾಜ, ಗರುಡ, ಕಾರ್ತಿಕೇಯ ಮತ್ತು ಯಮ ಇವೆಲ್ಲ ದೇವತೆಗಳ ಗುಡಿಗಳನ್ನು ಕಂಡು ಆ ಆ ದೇವತೆಗಳ ದರ್ಶನವನ್ನು ತೆಗೆದುಕೊಂಡು ಶ್ರೀರಾಮಚಂದ್ರನು ಅಗಸ್ತ್ಯಮುನಿಗಳು ಕುಳಿತಿರುವ ಸ್ಥಾನಕ್ಕೆ ಬಂದು ಮುಟ್ಟಿದನು. ಆಗ ಅಗಸ್ತ್ಯಮುನಿಗಳು ಅಗ್ನಿನಾರಾಯಣನಿಗೆ ಹೋಮ--ಹವನಾದಿಗಳನ್ನು ಕೊಟ್ಟು ಋಷಿ ಸಮೇತವಾಗಿ ಹೊರಗೆ

ಬಂದರು. ಕೂಡಲೆ ರಾಮಚಂದ್ರನು ಸೀತಾ—ಲಕ್ಷ್ಮಣರ ಸಮೇತ ವಾಗಿ ಮುನಿಗಳ ಚರಣಕ್ಕೆ ಶಿರಬಾಗಿ ನಮಿಸಿ, ಕೈಜೋಡಿಸಿಕೊಂಡು ಅವರಮುಂದೆ ನಿಂತನು. ಆಗ ಅಗಸ್ತ್ಯಮುನಿಗಳು ತಾವು ತಮ್ಮ ಆಸನದಲ್ಲಿ ಕುಳಿತು ಎಲ್ಲ ಜನರಿಗೆ ಕುಳಿತುಕೊಳ್ಳಲಿಕ್ಕೆ ಅಪ್ಪಣೆಯನ್ನಿತ್ತರು. ಅನಂತರ ಫಲ—ಪುಷ್ಪಾದಿಗಳನ್ನು ತರಿಸಿ ಶ್ರೀರಾಮಚಂದ್ರನನ್ನು ಆದರದಿಂದ ಸತ್ಕರಿಸಿ "ಎಲೈ ರಾಮಚಂದ್ರನೇ, ಯಾವ ಮನುಷ್ಯನು ಅತಿಥಿ ಸತ್ಕಾರವನ್ನು ಮಾಡುವದಿಲ್ಲವೋ ಅವನು ಖೊಟ್ಟಿ ಸಾಕ್ಷಿಯನ್ನು ಹೇಳುತ್ತಿರುವ ಮನುಷ್ಯನಂತೆ ಯಮಲೋಕದಲ್ಲಿ ತನ್ನ ಮಾಂಸವನ್ನು ತಾನೇ ತಿಂದು ಜೀವಿಸಿರಬೇಕಾಗುತ್ತದೆ. ಕಾರಣ ಮನುಷ್ಯನು ಅತಿಥಿಸತ್ಕಾರವನ್ನು ಮಾಡಬೇಕು. ನೀನಂತೂ ನಮ್ಮ ಅರಸನು; ಮತ್ತು ಸತ್ಯಧರ್ಮಪ್ರಿಯನು, ಮೇಲಾಗಿ ಮಹಾ ಪರಾಕ್ರಮಿಯು" ಎಂದು ಅವನನ್ನು ಬಹು ಪರಿಯಾಗಿ ಸತ್ಕರಿಸಿದರು. ಮತ್ತು ವಿಶ್ವಕರ್ಮನಿಂದ ನಿರ್ಮಿತವಾದ ಸುವರ್ಣ ರತ್ನಾದಿಗಳಿಂದ ಸುಶೋಭಿತವಾದ ವೈಷ್ಣವ ಮಹಾಧನುಷ್ಯವನ್ನೂ, ಕೆಲವುಅಮೋಘ ಅಸ್ತ್ರಗಳನ್ನೂ, ಅಕ್ಷಯ ಬಾಣ-ಬತ್ತಳಿಕೆಗಳನ್ನೂ, ಸುವರ್ಣ ಮಂಡಿತ ವಾದ ಖಡ್ಗವನ್ನೂ ಕೊಟ್ಟು—"ಹಿಂದಕ್ಕೆ ಈ ಶಸ್ತ್ರಾಸ್ತ್ರಗಳಿಂದಲೇ ಭಗವಾನ್ ವಿಷ್ಣುವು ದೈತ್ಯರನ್ನು ಗೆದ್ದು ಜಯಲಕ್ಷ್ಮಿಯನ್ನು ದೇವತೆಗಳಿಗೆ ಕೊಟ್ಟನು. ಕಾರಣ ನೀನು ಈ ಅಕ್ಷಯವಾದ ಬಾಣ-ಬತ್ತಳಿಕೆಗಳಿಂದ ದೈತ್ಯರನ್ನು ಸಂಹರಿಸಿ ವಿಜಯ ಹೊಂದು" ಎಂದು ಮುನಿಗಳು ಶ್ರೀರಾಮಚಂದ್ರನನ್ನು ಆಶೀರ್ವದಿಸಿದರು. ಆಗ ರಾಮಚಂದ್ರನಿಗೆ ಪರಮಾನಂದವಾಯಿತು. ಮುಂದೆ ರಾಮಚಂದ್ರನು ತಮಗೆ ಇರುವದಕ್ಕೋಸ್ಕರ ಒಂದು ರಮಣೀಯವಾದ ಸ್ಥಾನವನ್ನು ಹೇಳಬೇಕೆಂದು ಬೇಡಿಕೊಂಡನು. ಕೂಡಲೆ ಅವರು "ಇಲ್ಲಿಂದ ಎರಡು ಯೋಜನ ದೂರದಲ್ಲಿರುವ ಗೋದಾವರಿ ನದಿಯ ದಂಡೆಯ

ಮೇಲಿನ "ಪಂಚವಟಿ" ಎಂಬ ಸ್ಥಳವು ಬಹಳ ಸುಂದರವಾಗಿರುವದು. ಅಲ್ಲಿ ನೀವು ನಿಮ್ಮ ಪರ್ಣಕುಟಿಯನ್ನು ಕಟ್ಟಿ ಇರಬಹುದು" ಎಂದು ಹೇಳಿದರು. ಕೂಡಲೆ ಅವರು ಅಗಸ್ತ್ಯಮುನಿಗಳಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಪಂಚವಟಿಗೆ ಬಂದರು.

## ೧೩. ಸೀತಾಹರಣ

ಇತ್ತ ಶ್ರೀರಾಮಚಂದ್ರನು ಪಂಚವಟಿಯಲ್ಲಿ ಕಾಲಕಳೆಯುತ್ತಿರುವಾಗ ಒಂದುದಿನ ಆಲದ ಮರದಲ್ಲಿ ರಾಕ್ಷಸನಂತೆ ದೊಡ್ಡ ದೇಹವುಳ್ಳ ಒಂದುಪಕ್ಷಿಯು ಆತನಿಗೆ ಕಾಣಿಸಿತು. ಕೂಡಲೆ ರಾಮಚಂದ್ರನು ಧನುಷ್ಯ—ಬಾಣವನ್ನು ಸಜ್ಜುಗೊಳಿಸಿದನು. ಆಗ ಆ ಪಕ್ಷಿಯು "ಏನೂ ಕಾರಣವಿಲ್ಲದೆ ನನ್ನನ್ನು ಕೊಲ್ಲುವವನು ನೀನಾರು?" ಎಂದು ಕೇಳಿತು. ಆಗ ರಾಮಚಂದ್ರನು "ನಾನು ದಶರಥಪುತ್ರನಾದ ರಾಮನು; ತಂದೆಯ ವಚನಕ್ಕಾಗಿ ದಂಡಕಾರಣ್ಯಕ್ಕೆ ಬಂದಿರುವೆನು" ಎಂದು ಹೇಳಿದನು. ಆ ಮಾತು ಕೇಳಿದಕೂಡಲೆ ಆ ಪಕ್ಷಿಯು ಕೆಳಗಿಳಿದು ಬಂದು "ನನ್ನ ಹೆಸರು ಜಟಾಯು; ನಾನು ದಶರಥನ ಪರಮಮಿತ್ರನು" ಎಂದು ಹೇಳಿತು. "ದಶರಥರಾಜನು ನನ್ನನ್ನು ತನ್ನ ಬೆನ್ನಿಲೆ ಬಿದ್ದ ತಮ್ಮನಂತೆ ನೋಡಿಕೊಳ್ಳುತ್ತಿದ್ದನು. ಶುಕ್ರಾಚಾರ್ಯರಸಂಗಡ ಯುದ್ಧವಾದಾಗ್ಗೆ ನಾನು ದಶರಥನಿಗೆ ಬಹಳೇ ಸಹಾಯ ಮಾಡಿರುವೆನು" ಎಂದು ಹೇಳಿತು. ಆ ಮಾತು ಕೇಳಿದಕೂಡಲೆ ಶ್ರೀರಾಮಚಂದ್ರನು ಜಟಾಯುವಿಗೆ ಆಲಿಂಗಿಸಿ ನಮಸ್ಕರಿಸಿದನು. ಮತ್ತು ಲಕ್ಷ್ಮಣ—ಸೀತೆಯರು ಸಹ ನಮಸ್ಕರಿಸಿದರು. ಮುಂದೆ ಜಟಾಯುವಿನ ಸಮ್ಮತಿಯಂತೆ ಲಕ್ಷ್ಮಣನು ಒಂದು ಅಂದವಾದ ಪರ್ಣಕುಟೀರವನ್ನು ಕಟ್ಟಿದನು. ಆ ಸುಂದರವಾದ

ಪರ್ಣಕುಟೀರವನ್ನು ಕಂಡು ಶ್ರೀರಾಮಚಂದ್ರನಿಗೆ ಬಹಳ ಆನಂದ ವಾಯಿತು. ಮತ್ತು "ಲಕ್ಷ್ಮಣಾ, ನಿನ್ನ ಈ ಕೈಗಾರಿಕೆಯನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ಆದರೆ ನಿನಗೆ ಪ್ರತಿ ಫಲವಾಗಿ ಕೊಡಲು ನನ್ನಹತ್ತಿರ ಏನೂ ಇರುವದಿಲ್ಲ" ಎಂದು ಹೇಳಿ ಲಕ್ಷ್ಮಣನನ್ನು ಪ್ರೇಮಾತಿಶಯದಿಂದ ಆಲಿಂಗಿಸಿದನು. ಮುಂದೆ ಅವರೆಲ್ಲರೂ ಆ ಗುಡಿಸಲಲ್ಲಿ ಆನಂದದಿಂದ ಕಾಲಕಳೆಯಹತ್ತಿದರು. ಹೀಗೆ ಇರುತ್ತಿರುವಾಗ ಆ ಅಡವಿಯಲ್ಲಿ ರಾವಣನ ತಂಗಿಯ ಮಗ ನಾದ ಶಂಭರನೆಂಬ ದೈತ್ಯನು ಕಾಲಖಡ್ಗ ಎಂಬ ಶಸ್ತ್ರದ ಸಲುವಾಗಿ ಒಂದು ಗಿಡದ ಹೊದರಿನಲ್ಲಿ ಕುಳಿತು ಅರವತ್ತುಸಾವಿರ ವರ್ಷ ಪರ್ಯಂತ ಶಂಕರನನ್ನು ಆರಾಧಿಸಿದನು. ಆಗ ಶಂಕರನು ಪ್ರಸನ್ನ ಚಿತ್ತನಾಗಿ ಕಾಲಖಡ್ಗವನ್ನು ಶಂಭರಾಸುರನಕಡೆಗೆ ಕಳುಹಿಸಿದನು. ಅಂದು ಲಕ್ಷ್ಮಣನು ಹಣ್ಣು—ಹಂಪಲಗಳನ್ನು ತರುವದರ ಸಲುವಾಗಿ ಅಲ್ಲಿಗೆ ಬಂದಿದ್ದನು. ಆತನನ್ನು ಕಂಡು ಆ ಶಸ್ತ್ರದೇವತೆಯು ಮನ ದಲ್ಲಿ ಯೋಚಿಸಿ "ನಾನು ಆ ದುಷ್ಟನಾದ ಶಂಭರಾಸುರನ ಕೈಯಲ್ಲಿ ಸೇರುವದರಬದಲು ಈ ಸುಮಿತ್ರೇಯನ ಕೈಯಲ್ಲಿರುವದು ಲೇಸು" ಹೀಗೆನ್ನುತ್ತ ಅದು ಆಕಾಶದಿಂದ ಕೆಳಗಿಳಿಯುತ್ತಿರುವಾಗ ಲಕ್ಷ್ಮಣನ ದೃಷ್ಟಿಯು ಆ ಶಸ್ತ್ರದಮೇಲೆ ಬಿದ್ದಿತು. ಕೂಡಲೆ ಆತನು ಮುಂದೆ ಬಂದು ತನ್ನ ಕೈಯ್ಯಲ್ಲಿ ಆ ಶಸ್ತ್ರವನ್ನು ತೆಗೆದುಕೊಂಡನು. ಮತ್ತು ಇದು ಚನ್ನಾಗಿ ನಡೆಯುವದೋ ಇಲ್ಲವೋ ಎಂದು ನೋಡುವದರ ಸಲುವಾಗಿ ಆ ಖಡ್ಗದಿಂದ ಅಲ್ಲಿರುವ ಗಿಡಕ್ಕೆ ಹೊಡೆದನು. ಕೂಡಲೆ ಆ ಗಿಡದ ಹೊದರಿನಲ್ಲಿ ಕುಳಿತಿರುವ ಶಂಭರಾಸುರನು ಮರಣ ಹೊಂದಿದನು. ಆ ಗಿಡದ ಹೊದರಿನಿಂದ ಒಂದೇಸವನೆ ರಕ್ತಪ್ರವಾ ಹವು ಹರಿಯಹತ್ತಿತು. ಅದನ್ನು ಕಂಡು ಲಕ್ಷ್ಮಣನು ಗಾಬರಿಗೊಂಡು "ನಾನು ಯಾವದೋ ತಪಸ್ವಿಯನ್ನು ವಧಿಸಿದೆನು" ಎಂದು ತಿಳಿದು

ದುಃಖಿಸುತ್ತ ರಾಮನಹತ್ತಿರ ಬಂದು ಅಲ್ಲಿ ನಡೆದ ಸಂಗತಿಯನ್ನು ಆತನಮುಂದೆ ಅರುಹಿದನು. ಕೂಡಲೆ ಆ ತ್ರಿಕಾಲಜ್ಞಾನಿಯಾದ ಶ್ರೀರಾಮಚಂದ್ರನು ನಿಜ ಸಂಗತಿಯನ್ನು ತಿಳಿದು ಲಕ್ಷ್ಮಣನಿಗೆ ಅಭಯ ವಚನವನ್ನಿತ್ತು "ಲಕ್ಷ್ಮಣಾ, ಶೂರ್ಪನಖಿಯ ಮಗನಾದ ಶಂಭರಾಸುರನು ಈ ಖಡ್ಗದಸಲುವಾಗಿ ಅರವತ್ತುಸಾವಿರವರ್ಷ ಪರ್ಯಂತ ತಪಸ್ಸನ್ನಾಚರಿಸಿದನು. ಆತನನ್ನು ನೀನು ಕೊಂದದ್ದು ಬಹಳ ಹಿತವಾಯಿತು; ಆದಕಾರಣ ಇನ್ನು ಮುಂದೆ ನಾವು ನಮ್ಮ ಸೀತೆಯನ್ನು ಬಹಳ ಚನ್ನಾಗಿ ರಕ್ಷಿಸಬೇಕು" ಎಂದು ಹೇಳಿದನು.

ಇಂತು ಶ್ರೀರಾಮಚಂದ್ರನು ಸೀತಾ-ಲಕ್ಷ್ಮಣರೊಡನೆ ಪಂಚವಟಿಯಲ್ಲಿ ಆನಂದದಿಂದ ಕಾಲಕಳೆಯುತ್ತಿರಲು ಚಳಿಗಾಲವು ಪ್ರಾಪ್ತವಾಯಿತು; ಎಲ್ಲಕಡೆಯಲ್ಲಿಯೂ ಚಳಿಯು ಬಹಳವಾಯಿತು. ಆಕಾಶವು ಯಾವಾಗಲೂ ಮಂಜಿನಿಂದ ಮುಸುಕಿಹೋಯಿತು. ಒಕ್ಕಲಿಗರು ಬೆಳೆಯನ್ನು ಕೊಯ್ಯಲುದ್ಯುಕ್ತರಾದರು. ಜನರಿಗೆ ಚಳಿಯಲ್ಲಿ ತಣ್ಣೀರು ಮುಟ್ಟುವದು ಅಸಾಧ್ಯವಾಗಿತ್ತು, ಜನರಿಗೆ ಬೆಂಕಿಯನ್ನು ಕಾಸಬೇಕೆನ್ನಿಸಹತ್ತಿತು. ಸರೋವರದಲ್ಲಿಯ ಹಂಸ, ನೀರಗೋಳಿ ಮೊದಲಾದ ಪಕ್ಷಿಗಳು ನೀರಲ್ಲಿ ಈಜುವದನ್ನು ಬಿಟ್ಟು ದಂಡೆಯಮೇಲೆ ಕೂಡ್ರಹತ್ತಿದವು. ನೀರು ಕುಡಿಯಲು ಬರುತ್ತಿರುವ ಮದ್ದಾನೆಗಳು ಚಳಿಯಿಂದ ನೀರು ಕುಡಿಯುವದನ್ನೇ ಬಿಟ್ಟು ಹಿಂತಿರುಗಹತ್ತಿದವು. ಇಂಥ ಚಳಿಗಾಲದಲ್ಲಿ ಸಹ ರಾಮ—ಲಕ್ಷ್ಮಣ—ಸೀತೆಯರು ಪ್ರತಿದಿನವು ಗೋದಾವರಿತೀರಕ್ಕೆ ಹೋಗಿ ಸ್ನಾನಾದಿ ನಿತ್ಯಕರ್ಮಗಳನ್ನು ಮಾಡುತ್ತಿದ್ದರು. "ಲಕ್ಷ್ಮಣಾ, ಭರತನೂಸಹ ಈ ಚಳಿಗಾಲದಲ್ಲಿ ಸರಯೂತೀರದಲ್ಲಿ ಸ್ನಾನವನ್ನು ಮಾಡುತ್ತಿರಬಹುದಲ್ಲವೇ?" ಎಂದು ಶ್ರೀರಾಮನಿಗೆ ಅಯೋಧ್ಯೆಯ ನೆನಪಾಯಿತು. ಮುಂದೆ ಅವರೀರ್ವರು ಪ್ರತಿದಿನವೂ ದೇವತೆಗಳಿಗೂ, ಪಿತೃಗಳಿಗೂ, ತರ್ಪಣವನ್ನು

ಕೊಟ್ಟು ಮರಳಿ ತಮ್ಮ ಆಶ್ರಮಕ್ಕೆ ಬರುತ್ತಿದ್ದರು. ಹೀಗಿರುತ್ತಿರಲು ಒಂದುದಿನ ಕರ್ಮ—ಧರ್ಮಸಂಯೋಗದಿಂದ ಶೂರ್ಪನಖಿಯೆಂಬ ರಾಕ್ಷಸಿಯು ಅಲ್ಲಿ ಪ್ರಾಪ್ತವಾದಳು. ಅವಳು ಶ್ರೀರಾಮಚಂದ್ರನ ವಿಲಕ್ಷಣವಾದ ತೇಜವನ್ನೂ ಆತನ ಮನ್ಮಥನಂತೆ ಶೋಭಿಸುತ್ತಿರುವ ಸುಂದರವಾದ ರೂಪವನ್ನೂ ಕಂಡು ಮೋಹಿಸಿದಳು. ಮುಂದೆ ಅವಳು ತನ್ನ ರಾಕ್ಷಸೀಯ ಮಾಯೆಯಿಂದ ತಾನು ಒಬ್ಬ ಸುಂದರಳಾದ ಯುವತಿಯಾದಳು, ಮತ್ತು ಶ್ರೀರಾಮಚಂದ್ರನ ಬಳಿಯಲ್ಲಿ ಬಂದು, "ಎಲೈ ಮುನಿಕುಮಾರರೇ, ತಾವು ಯಾರು? ಇಲ್ಲಿ ಬಂದಿರುವ ಕಾರಣವೇನು? ಈ ಸ್ತ್ರೀಯು ಯಾರು ?" ಎಂದು ಕೇಳಿದಳು. ಆಗ ರಾಮಚಂದ್ರನು "ನಾವು ಅಯೋಧ್ಯಾಪತಿಯಾದ ದಶರಥಮಹಾರಾಜನ ಮಕ್ಕಳು. ನಮ್ಮ ಹೆಸರು ರಾಮ—ಲಕ್ಷ್ಮಣರು; ತಂದೆಯ ವಚನಕ್ಕಾಗಿ ವನವಾಸವನ್ನು ಕೈಕೊಂಡಿರುವೆವು. ಈ ಸ್ತ್ರೀಯು ನನ್ನ ಧರ್ಮಪತ್ನಿಯು" ಎಂದು ಹೇಳಿದನು. ಮತ್ತು "ನೀನಾರು ? ಎಲ್ಲಿಂದ ಬಂದೆ ?" ಎಂದು ಕೇಳಿದನು. ಆಗ ಅವಳು "ನಾನು ಲಂಕಾಧಿಪತಿಯಾದ ರಾವಣನತಂಗಿಯು ನನ್ನ ಹೆಸರು ಶೂರ್ಪನಖಿಯು" ಎಂದು ಹೇಳಿದಳಲ್ಲದೆ. "ರಾಮಚಂದ್ರನೇ, ನಾನು ನಿನ್ನ ರೂಪಕ್ಕೆ ಮರುಳಾಗಿರುವೆನು. ಅದಕ್ಕಾಗಿ ನೀನು ನನ್ನನ್ನು ಮದುವೆಯಾಗಿ ಸುಖದಿಂದ ಬಾಳಬೇಕು" ಎಂದು ಹೇಳಿದಳು. ಕೂಡಲೆ ರಾಮಚಂದ್ರನು ಆಕೆಯ ಮನೋಭಾವವನ್ನು ತಿಳಿದು, "ಎಲೈ ಶೂರ್ಪನಖಿಯೇ, ನಾನು ಏಕಪತ್ನಿಯ ವ್ರತದವನು. ಕಾರಣ ನಿನ್ನನ್ನು ವರಿಸಲಾರೆ; ನೀನು ನನ್ನ ತಮ್ಮನಾದ ಲಕ್ಷ್ಮಣನನ್ನು ವರಿಸು" ಎಂದು ಹೇಳಿದನು. ಮುಂದೆ ಅವಳು ಲಕ್ಷ್ಮಣನಬಳಿಯಲ್ಲಿ ಬಂದು "ಎಲೈ ರಾಜಕುಮಾರನೇ, ನಿನ್ನನ್ನು ಲಗ್ನವಾಗುವ ಇಚ್ಛೆ ನನಗಿದೆ ಅದಕ್ಕಾಗಿ ನೀನು ನನ್ನನ್ನು ಮದುವೆಯಾಗಬೇಕು" ಎಂದು

ಹೇಳಿದಳು. ಆಕೆಯ ಆ ಮಾತುಗಳನ್ನು ಕೇಳಿ ಲಕ್ಷ್ಮಣನು "ನಮ್ಮ ಅಣ್ಣನನ್ನು ಕೇಳದೆ ನಾನು ನಿನ್ನನ್ನು ಮದುವೆಯಾಗಲಾರೆ. ನೀನು ನಮ್ಮ ಅಣ್ಣನಬಳಿಯಲ್ಲಿ ಹೋಗಿ ಆತನಿಂದ ಏನಾದರೊಂದು ಗುರುತನ್ನು ತೆಗೆದುಕೊಂಡು ಬಂದರೆ ನಾನು ನಿನ್ನನ್ನು ಮದುವೆಯಾಗುವೆನು" ಎಂದು ಹೇಳಿದನು. ಆಗ ಅವಳು ಶ್ರೀರಾಮಚಂದ್ರನ ಬಳಿಯಲ್ಲಿ ಬಂದು "ತಾವು ನನಗೆ ಏನಾದರೊಂದು ಗುರುತನ್ನು ಕೊಟ್ಟರೆ ನಿಮ್ಮ ತಮ್ಮನು ನನ್ನಸಂಗಡ ಲಗ್ನವಾಗುವೆನೆಂದು ಹೇಳಿರುವನು. ಅದಕ್ಕಾಗಿ ಏನಾದರೂ ಗುರುತನ್ನು ಕೊಡಬೇಕು" ಎಂದು ಹೇಳಿದಳು. ಕೂಡಲೆ ಶ್ರೀರಾಮಚಂದ್ರನು "ನಿನಗೆ ಗುರುತನ್ನು ಕೊಡಲು ನನ್ನಕಡೆಗೆ ಏನೂ ಇರುವದಿಲ್ಲ. ಅದಕ್ಕಾಗಿ ನಾನು ನಿನ್ನ ಬೆನ್ನಮೇಲೆ ಗುರುತಿಸುವಂತೆ ಬರೆಯುವೆನು" ಎಂದು ಹೇಳಿ ತಾನು ಆಕೆಯ ಬೆನ್ನಮೇಲೆ "ಇವಳು ರಾಕ್ಷಸಿಯು. ಕಾರಣ ಈಕೆಯನ್ನು ಕೊಲ್ಲಬೇಡ; ಕೇವಲ ಈಕೆಯ ಕಿವಿ-ಮೂಗುಗಳನ್ನು ಛೇದಿಸಿ ಬಿಟ್ಟುಬಿಡು" ಎಂದು ಬರೆದು ಅವಳನ್ನು ಲಕ್ಷ್ಮಣನಬಳಿಗೆ ಕಳಿಸಿದನು.

ಆಗ ಅವಳು ಲಕ್ಷ್ಮಣನಬಳಿಗೆ ಬಂದು "ನಿಮ್ಮ ಅಣ್ಣನು ನನ್ನ ಬೆನ್ನಮೇಲೆ ಗುರುತನ್ನು ಹಾಕಿರುವನು" ಎಂದು ಹೇಳಿ ಆತನ ಕಡೆಗೆ ಬೆನ್ನನ್ನು ತಿರುವಿಕೊಂಡು ನಿಂತಳು. ಅದನ್ನು ಓದಿ ಲಕ್ಷ್ಮಣನು ಆಕೆಯ ಕೂದಲನ್ನು ಹಿಡಿದು ಜಗ್ಗಿ, ನೆಲಕ್ಕೆ ಕೆಡವಿ ಅವಳ ಮೂಗು, ಕಿವಿಗಳನ್ನು ಕತ್ತರಿಸಿದನು. ಕೂಡಲೆ ಅವಳು ಕೆಟ್ಟ ದನಿಯಿಂದ ಚೀರುತ್ತ ಅಲ್ಲಿಂದ ಓಡುತ್ತ ಹೋಗಿ ಜನಸ್ಥಾನದಲ್ಲಿರುವ ತನ್ನ ತಮ್ಮಂದಿರಾದ ಖರ-ದೂಷಣರಬಳಿಗೆ ಬಂದಳು. ಮತ್ತು "ನಾನು ಒಬ್ಬ ಮಾನವನಕೈಯಿಂದ ಅಪಮಾನಹೊಂದಿ ಬಂದಿರುವೆ; ನೀವು ಕಣ್ಮುಟ್ಟ ನೋಡುತ್ತಿದ್ದರೂ ನಿಮಗೆ ನಾಚಿಕೆ ಬರುವದಿಲ್ಲವೇ? ಇಂದಿಗೆ ನಿಮ್ಮ ಶೂರತ್ವವು ಹಾಳಾಯಿತು. ಪಂಚವಟಿಯಲ್ಲಿರುವ

ರಾಮ–ಲಕ್ಷ್ಮಣರನ್ನು ಕೊಲ್ಲದೆ ಇದ್ದರೆ ನಿಮ್ಮಂಥ ಬಲಾಢ್ಯ ರಾಕ್ಷಸರಿದ್ದೇನು ಫಲವು?" ಎಂದು ಪರಿಪರಿಯಾಗಿ ಹೀಯಾಳಿಸಿ ಹೇಳಹತ್ತಿದಳು. ಕೂಡಲೆ ಅವರು ಸಿಟ್ಟಾಗಿ ಮಹಾಬಲಶಾಲಿಗಳಾದ ಹದಿನಾಲ್ಕುಸಾವಿರ ರಾಕ್ಷಸರನ್ನು ಕರೆದುಕೊಂಡು ಪಂಚವಟಿಗೆ ಬಂದು ತಲುಪಿದರು. ಆಗ ಶ್ರೀರಾಮಚಂದ್ರನು ಮುಂದಾಗುವ ಭವಿಷ್ಯವನ್ನು ಅರಿತು ಸೀತೆಯನ್ನು ರಕ್ಷಿಸಲು ಲಕ್ಷ್ಮಣನಿಗೆ ಹೇಳಿ, ತಾನು ದಿವ್ಯಕವಚವನ್ನು ಮೈಮೇಲೆ ಧರಿಸಿ, ದಿವ್ಯವಾದ ಶಸ್ತ್ರವನ್ನು ಕೈಯಲ್ಲಿ ತೆಗೆದುಕೊಂಡು, ಆ ಹದಿನಾಲ್ಕುಸಾವಿರ ರಾಕ್ಷಸರಿಗೆ ಎದುರಾಗಿ ಅವರನ್ನೆಲ್ಲ ಸಂಹರಿಸಿದನು. ಆಗ ದೇವತೆಗಳು ಶ್ರೀರಾಮಚಂದ್ರನಮೇಲೆ ಹೂಮಳೆಗರೆದರು. ಮತ್ತು ಅಗಸ್ತ್ಯಾದಿಋಷಿಗಳು ಶ್ರೀರಾಮಚಂದ್ರನನ್ನು ಅಭಿವಂದಿಸಿದರು. ಎಲ್ಲರೂ ರಾಮಚಂದ್ರನಮೇಲಿನ ಅರಿಷ್ಟವು ದೂರವಾದುದಕ್ಕಾಗಿ ಪರಮೇಶ್ವರನನ್ನು ಕೊಂಡಾಡಿದರು.

ರಾಮಚಂದ್ರನೊಬ್ಬನೇ ಹದಿನಾಲ್ಕುಸಾವಿರ ರಾಕ್ಷಸರನ್ನು ಕೊಂದದ್ದನ್ನು ಕಂಡು ಶೂರ್ಪನಖಿಯು ಭಯಭೀತಳಾಗಿ ಲಂಕೆಯಲ್ಲಿರುವ ರಾವಣನಕಡೆಗೆ ಬಂದಳು. ಆಗ ರಾವಣನು ರಾಜಸಭೆಯಲ್ಲಿ ಸಿಂಹಾಸನಾರೂಢನಾಗಿ ಕುಳಿತಿದ್ದನು. ಹತ್ತು ತಲೆ ಹಾಗು ಇಪ್ಪತ್ತು ಭುಜಗಳುಳ್ಳ ಆತನ ಶರೀರವು ಬಹಳವಿಲಕ್ಷಣವಾಗಿ ಶೋಭಿಸುತ್ತಿತ್ತು. ನಾಲ್ಕೂಕಡೆಗೆ ಸಚಿವರು ಕೈಯನ್ನು ಜೋಡಿಸಿಕೊಂಡು ನಿಂತಿದ್ದರು.' ದಾಸಿಯರು ಚಾಮರವನ್ನು ಬೀಸುತ್ತಿದ್ದರು. ಆತನು ತನ್ನ ಭವ್ಯವಾದ ಎದೆಯಮೇಲೆ ರಾಜಚಿಹ್ನವನ್ನು ಧರಿಸಿದ್ದನು. ಅವನು ಕೈಲಾಸಪರ್ವತದಲ್ಲಿರುವ ಕುಬೇರನನ್ನು ಗೆದ್ದು ಪುಷ್ಪಕವಿಮಾನವನ್ನು ತಂದಿದ್ದನು. ಸಿಟ್ಟಿನಿಂದ ಇಂದ್ರನ ಉಪವನವನ್ನು ಕಿತ್ತಿ ಒಗೆದಿದ್ದನು. ಚಂದ್ರ–ಸೂರ್ಯರು ಮೂಡುತ್ತಿರುವಾಗಲೆ ಅವರನ್ನು ಅಡ್ಡಗಟ್ಟಿದ್ದನು. ಇವನು ಹತ್ತುಸಾವಿರವರ್ಷ ಉಗ್ರವಾದ

ತಪಸ್ಸನ್ನಾಚರಿಸಿ ಬ್ರಹ್ಮದೇವನಿಗೆ ತನ್ನ ಹತ್ತೂ ಶಿರಸ್ಸುಗಳನ್ನರ್ಪಿಸಿ ಆತನನ್ನು ಮೆಚ್ಚಿಸಿ ತನಗೆ ಯಾರಿಂದಲೂ ಮೃತ್ಯು ಬರಬಾರದೆಂದು ವರವನ್ನು ಪಡೆದಿದ್ದನು; ಅಂಥ ಬಲಾಢ್ಯನಾದ ರಾಕ್ಷಸರಾಜನಮುಂದೆ ಭಯಗ್ರಸ್ತಳಾದ ಶೂರ್ಪನಖಿಯು ಬಂದು ನಿಂತು "ಎಲೈ ರಾವಣಾಸುರನೇ, ನಿನ್ನಮೇಲೆ ಬಂದೊದಗಿರುವ ಸಂಕಟವನ್ನು ಮರೆತು ಕಾಮೋಪಭೋಗದಲ್ಲಿ ಮಗ್ನನಾಗಿರುವಿ. ಅರಸನಿಗೆ ಸುದ್ದಿಗಾರರಿಂದ ಎಲ್ಲಸಂಗತಿಯು ತಿಳಿಯುತ್ತದೆ; ಆತನಿಗೆ ದೀರ್ಘವಾದ ದೃಷ್ಟಿ ಇರುತ್ತದೆ ಎಂದು ಅನ್ನುತ್ತಾರೆ. ಆದರೆ ನಿನಗೆ ನಿದ್ದೆಹತ್ತಿದಂತೆ ನನಗೆ ತೋರುತ್ತದೆ. ಈಗ ಜನಸ್ಥಾನದಲ್ಲಿ ಖರ—ದೂಷಣ—ತ್ರಿಶಿರ ಇಂಥ ಬಲಾಢ್ಯರಾದ ಹದಿನಾಲ್ಕುಸಾವಿರ ರಾಕ್ಷಸರನ್ನು ಪಂಚವಟಿಯಲ್ಲಿರುವ ಮಾನವನಾದ ರಾಮಚಂದ್ರನೊಬ್ಬನೇ ಕೊಂದಿರುವದು ನಿನಗೆ ತಿಳಿದಿಲ್ಲವೇ? ಆ ದಂಡಕಾರಣ್ಯದಲ್ಲಿರುವ ಋಷಿಜನರಿಗೆ ಯಾರ ಅಂಜಿಕೆಯೂ ಇಲ್ಲದಂತಾಗಿದೆ. ಶ್ರೀರಾಮಚಂದ್ರನು ಅವರನ್ನು ರಕ್ಷಿಸಲು ಅಭಯವನ್ನಿತ್ತಿರುವನು. ಆ ಮಾನವನಾದ ರಾಮನಿಂದ ನಿನ್ನ ರಾಜ್ಯಕ್ಕೆ ಭಯ ಉತ್ಪನ್ನವಾಗಿರುತ್ತದೆ, ಆದರರಿವು ನಿನಗಿರುವದಿಲ್ಲ. ನೀನು ಸುಖಲೋಲುಪನಾಗಿ ಕುಳಿತಿರುವೆ" ಎಂದು ಆತನನ್ನು ನಿಷ್ಠುರತೆಯಿಂದ ಹೀಯಾಳಿಸಿ ಮಾತನಾಡಿದಳು. ಆಕೆಯ ಮಾತನ್ನು ಕೇಳಿ ರಾವಣನು "ಎಲೈ ಶೂರ್ಪನಖಿಯೇ, ನಿನಗೆ ಈ ದುರವಸ್ಥೆಯನ್ನು ಯಾರು ಮಾಡಿರುವರು? ಆ ರಾಮನು ಯಾರು? ಅವನ ಸಾಮರ್ಥ್ಯವು ಯಾವದು? ಅವನು ಯಾವ ಆಯುಧದಿಂದ ಯುದ್ಧ ಮಾಡುವನು? ಈ ಎಲ್ಲ ನಿಜಸಂಗತಿಯನ್ನು ನನ್ನಮುಂದೆ ಹೇಳು" ಎಂದು ಕೇಳಿದನು. ಆಗ ಶೂರ್ಪನಖಿಯು "ಆ ರಾಮ—ಲಕ್ಷ್ಮಣರು ಅಯೋಧ್ಯೆಯ ಅರಸರಾದ ದಶರಥಮಹಾರಾಜರ ಪುತ್ರರು. ತಂದೆಯ ವಚನವನ್ನು ಪಾಲಿಸುವದಕ್ಕಾಗಿ ಹದಿನಾಲ್ಕುವರ್ಷ ವನ

ವಾಸವನ್ನು ಕೈಕೊಂಡಿರುವರಂತೆ ರಾಮಚಂದ್ರನು ಮದನನಂತೆ ಸುಂದರನೂ, ವಿಶಾಲಾಕ್ಷನೂ, ಮಹಾ ಪರಾಕ್ರಮಿಯೂ, ಧನುಷ್ಯ—ಬಾಣಗಳಿಂದ ಯುದ್ಧಮಾಡುವವನೂ, ಜಟಾ-ವಲ್ಕಲವನ್ನು ಧರಿಸಿದವನೂ ಇರುತ್ತಾನೆ. ಅವನಂತೆಯೇ ಆತನ ತಮ್ಮನಾದ ಲಕ್ಷ್ಮಣನೂಸಹ ಇರುತ್ತಾನೆ. ರಾಮಚಂದ್ರನ ಪತ್ನಿಯು ಬಹಳ ಸುಂದರಳಾಗಿರುವಳು. ಅಂಥ ಸ್ತ್ರೀಯನ್ನುನಾನು ದೇವ-ಗಂಧರ್ವ-ದೈತ್ಯ ಲೋಕಗಳಲ್ಲೆಲ್ಲಿಯೂ ಕಾಣಲಿಲ್ಲ. ಆಕೆಯ ಹೆಸರು ಸೀತೆ, ನಾನು ನಿನ್ನಸಲುವಾಗಿ ಅವಳನ್ನು ಅಪಹರಿಸಿ ತರಬೇಕೆಂದು ಅಲ್ಲಿಗೆ ಹೋಗಿದ್ದೆ; ಆಗ ಲಕ್ಷ್ಮಣನು ಈ ವಿದ್ರೂಪಕ್ಕೆ ನನ್ನನ್ನು ಈಡು ಮಾಡಿದನು. ಎಲೈ ರಾವಣನೇ, ನೀನು ಆ ರಾಮ—ಲಕ್ಷ್ಮಣರನ್ನು ಕೊಲ್ಲದಿದ್ದರೆ ನಿನ್ನ ಪರಾಕ್ರಮವೆಲ್ಲವೂ ವ್ಯರ್ಥವೆಂದು ನಾನು ತಿಳಿಯುತ್ತೇನೆ" ಎಂದು ಬಹು ಪರಿಯಾಗಿ ಶೋಕಿಸುತ್ತ ಹೇಳಿದಳು. ಆಗ ರಾವಣನು ಆಕೆಯನ್ನು ಸಮಾಧಾನಗೊಳಿಸಿ ಕಳುಹಿದನು.

ರಾವಣನಿಗೆ ಹಗಲಿರಳು ನಿದ್ದೆ ಬಾರದಂತಾಯಿತು, ಎಲ್ಲಿ ನೋಡಿದರೂ ಅವನ ಕನಸು-ಮನಸಿನಲ್ಲಿ ರಾಮ—ಲಕ್ಷ್ಮಣರೇ ಕಾಣಹತ್ತಿದರು. ಮುಂದೆ ಅವರನ್ನು ಕೊಲ್ಲುವ ಬಗೆ ಹೇಗೆ? ಎಂದು ಆಲೋಚಿಸಹತ್ತಿದನು. ಕೂಡಲೆ ಅವನು ರಥಶಾಲೆಗೆ ಹೋಗಿ ರಥಿಕನಿಗೆ "ವಾಯುವೇಗದಿಂದ ಹೋಗುತ್ತಿರುವಂತಹ ಅಶ್ವಗಳನ್ನು ರಥಕ್ಕೆ ಜೋಡಿಸಿ ಬೇಗನೆ ಸಿದ್ಧಗೊಳಿಸಿಕೊಂಡು ಬರಬೇಕು" ಎಂದು ಹೇಳಿ ತಾನು ತನ್ನ ಸಿದ್ಧತೆಯಲ್ಲಿ ತೊಡಗಿದನು. ತುಸು ಹೊತ್ತಿನಲ್ಲಿಯೇ ರಥಿಕನು ಅಲ್ಲಿಗೆ ಬಂದು "ಮಹಾರಾಜಾ, ರಥವು ಸಿದ್ಧವಾಗಿರುತ್ತದೆ. ಬೇಗನೆ ಹೊರಡಬೇಕು" ಎಂದು ವಿನಯದಿಂದ ಹೇಳಿದನು. ಆಗ ಅವನು ಬಂದು ರಥದಲ್ಲಿ ಕುಳಿತನು. ಕೂಡಲೆ ಆ ರಥವು ವಾಯುವೇಗದಿಂದ ಮಾರೀಚನ ಆಶ್ರಮಕ್ಕೆ ಬಂದು ತಲ್ಪಿತು. ಆ

ಆಶ್ರಮವು ಸಮುದ್ರದ ದಂಡೆಯಮೇಲಿತ್ತು. ಆಶ್ರಮದ ಸುತ್ತುಮುತ್ತು ಜಾಜಿ, ಮಲ್ಲಿಗೆ, ಸಂಪಿಗೆ, ಗುಲಾಬಿ, ಅಗರು, ಚಂದನ, ಇತ್ಯಾದಿ ಸುಗಂಧಿತವಾದ ಹೂಗಳ ತೋಟಗಳು ಶೋಭಿಸುತ್ತಿದ್ದವು; ಆ ಸುಂದರವಾದ ಆ ಆಶ್ರಮದಬಳಿಗೆ ರಾವಣಾಸುರನು ಬಂದು ತಲ್ಪಿದನು. ಆಗ ಮಾರೀಚನು ಕೃಷ್ಣಾಜಿನವನ್ನು ಹಾಸಿ ಅದರಮೇಲೆ ತಪಸ್ಸಿಗೆ ಕುಳಿತಿದ್ದನು. ಅವನು ರಾವಣಾಸುರನನ್ನು ಕಂಡಕೂಡಲೆ ಎದ್ದು ಮುಂದೆಬಂದು ಆತನನ್ನು ಯಥಾಯೋಗ್ಯ ರೀತಿಯಿಂದ ಸತ್ಕರಿಸಿದನು. ಮುಂದೆ ರಾವಣನು ಮಾತನಾಡುತ್ತ "ಎಲೈ ಮಾರೀಚನೇ, ನನ್ನ ಆಜ್ಞೆಯಿಂದ ನನ್ನ ಕಕ್ಕನ ಮಕ್ಕಳಾದ ಖರ—ದೂಷಣರೆಂಬವರು ಜನಸ್ಥಾನದಲ್ಲಿ ಇರುತ್ತಿರುವುದು ನಿನಗೆ ಗೊತ್ತಿರಬಹುದು. ಅವರ ಸೇವೆಗೆ ಹದಿನಾಲ್ಕುಸಾವಿರ ರಾಕ್ಷಸರಿರುತ್ತಿದ್ದರು. ಅಂಥ ಖರ-ದೂಷಣರನ್ನೂ, ಆ ಹದಿನಾಲ್ಕುಸಾವಿರ ರಾಕ್ಷಸರನ್ನೂ ಒಬ್ಬ ಮಾನವನಾದ ರಾಮನು ಕೊಂದದ್ದನ್ನು ನೀನು ಕೇಳಿರಬಹುದು. ಆ ರಾಮನೇ ನನ್ನ ತಂಗಿಯಾದ ಶೂರ್ಪನಖಿಯನ್ನು ವಿದ್ರೂಪಗೊಳಿಸಿರುತ್ತಾನೆ. ಕಾರಣ ದೇವಕನ್ಯೆಯಂತೆ ಶೋಭಿಸುತ್ತಿರುವ ರಾಮನ ಪತ್ನಿಯಾದ ಸೀತೆಯನ್ನು ನಾನು ಅಪಹರಿಸಬೇಕೆಂದು ಆಲೋಚಿಸಿರುತ್ತೇನೆ, ಅದಕ್ಕಾಗಿ ನೀನು ನನಗೆ ಸಹಾಯ ಮಾಡಬೇಕು. ಸೀತಾಹರಣಕ್ಕಾಗಿ ನಾನು ಒಂದು ಯುಕ್ತಿಯನ್ನು ಹುಡುಕಿರುತ್ತೇನೆ; ಅದೇನೆಂದರೆ, ನೀನು ಸುವರ್ಣ ಮೃಗದ ರೂಪವನ್ನು ಧರಿಸಿ ಸೀತೆಯ ಕಣ್ಣೆದುರಿಗೆ ಅಡ್ಡಾಡಬೇಕು. ಆಗ ಅವಳು ನಿನ್ನನ್ನು ಕಂಡು ರಾಮಚಂದ್ರನಿಗೆ "ಆ ಮೃಗವನ್ನು ತನಗೆ ತಂದು ಕೊಡಿರಿ" ಎಂದು ಹಟ ಹಿಡಿಯುವಳು. ಆಗ ರಾಮ—ಲಕ್ಷ್ಮಣರು ನಿನ್ನನ್ನು ಹಿಡಿಯಲು ಬೆನ್ನಹತ್ತುವರು. ಕೂಡಲೆ ನೀನು ಓಡುತ್ತ ಓಡುತ್ತ ಅವರನ್ನು ಆಶ್ರಮದಿಂದ ಬಹಳ ದೂರ ಕರೆದುಕೊಂಡು

ಹೋಗಬೇಕು. ನಾನು ಒಬ್ಬ ಸನ್ಯಾಸಿಯ ವೇಷವನ್ನು ಧರಿಸಿ ಅಲ್ಲಿಗೆ ಬಂದು ಸೀತೆಯನ್ನು ಅಪಹರಿಸಿಕೊಂಡು ಹೋಗುವೆನು. ಮುಂದೆ ಸೀತಾವಿರಹದಿಂದ ಕೃಶನಾದ ರಾಮನನ್ನು ಕೊಲ್ಲಲು ತಡವಾಗಲಾರದು" ಎಂದು ಹೇಳಿದನು. ಶ್ರೀರಾಮಚಂದ್ರನ ಹೆಸರನ್ನು ಕೇಳಿದೊಡನೆ ಮಾರೀಚನ ಎದೆಯೊಡೆದು ನೀರಾಯಿತು. ಆದರೂ ಶಾಂತರೀತಿಯಿಂದ ಆತನು "ಎಲೈ ರಾವಣನೇ, ಸತ್ಯವನ್ನು ಮಾತನಾಡುವವರೂ ಮತ್ತು ಹಿತವನ್ನು ಕೇಳುವವರೂ ಬಹಳ ಕಡಿಮೆ. ನಾನು ನಿನಗೆ ಅಪ್ರಿಯವಾದ ಮಾತನ್ನೇ ಹೇಳುತ್ತಿರುವೆನು; ಅದಕ್ಕಾಗಿ ನೀನು ನನ್ನನ್ನು ಕ್ಷಮಿಸಬೇಕು" ಎಂದು ಹೇಳಿದನು. "ನೀನು ರಾಮನ ಪರಾಕ್ರಮವನ್ನು ಇನ್ನೂ ತಿಳಿದಿರುವದಿಲ್ಲ. ಆತನು ಮಹಾ ಶೂರನು, ಇಂದ್ರನಂತೆ ವೀರ್ಯವಾನನು; ಅವನು ಸಿಟ್ಟಿಗೆದ್ದರೆ ಪೃಥ್ವಿಯ ಮೇಲಿರುವ ಎಲ್ಲ ರಾಕ್ಷಸರೆಲ್ಲರು ನಾಶಹೊಂದುವರು. ನಿನ್ನ ರಾಜ್ಯವನ್ನೂ, ಆಯುಷ್ಯವನ್ನೂ, ನಾಶ ಮಾಡುವದರಸಲುವಾಗಿಯೇ ಸೀತೆಯು ಹುಟ್ಟಿರುತ್ತಾಳೆ. ಎಂದು ತೋರುತ್ತದೆ. ಸೀತೆಯ ರೂಪದಿಂದ ರಾಕ್ಷಸರಿಗೆ ದೊಡ್ಡ ಅಂಜಿಕೆಯೇ ಪ್ರಾಪ್ತವಾಗಿರುತ್ತದೆ. ಕಾರಣ ನಿನ್ನಂಥ ಪಾಪವಿಚಾರಿಯೂ, ದುಃಶೀಲನೂ, ಕಾಮಪ್ರವರ್ತನೂ, ಆದ ಅರಸನು ತನ್ನ ಹಿತವನ್ನೂ ಮತ್ತು ಪ್ರಜೆಗಳ ಹಿತವನ್ನೂ ಎಂದಿಗೂ ಮಾಡಲಾರನು. ಆ ತೇಜಸ್ವಿಯಾದ ರಾಮಚಂದ್ರನ ಪತ್ನಿಯನ್ನು ಅಪಹರಿಸಿದರೆ ತಿಳಿಯದೆ ಬೂದಿಮುಚ್ಚಿದ ಕೆಂಡವನ್ನು ಕೈಯಲ್ಲಿ ಹಿಡಿದರೂಕೂಡ ಅದು ಹೇಗೆ ಸುಡದೆ ಬಿಡುವದಿಲ್ಲವೋ ಹಾಗೆ ನಿನ್ನ ಗತಿಯಾಗುವದು. ಅದಕ್ಕಾಗಿ ನೀನು ಅವನ ಗೊಡವೆಗೆ ಹೋಗಬೇಡ, ಹಿಂದಕ್ಕೆ ನಾನು ನಿನ್ನಂತೆಯೇ ತಿಳಿದುಕೊಂಡು ವಿಶ್ವಾಮಿತ್ರನ ಯಜ್ಞದಮೇಲೆ ಏರಿ ಹೋಗಿದ್ದೆನು. ಆಗ ಯಜ್ಞರಕ್ಷಣೆಗಾಗಿ ಬಂದಿದ್ದ ರಾಮನು ತನ್ನ ಒಂದೇ ಬಾಣದಿಂದ ನನ್ನನ್ನು ನೂರು ಯೋಜನ

ದೂರವಿರುವ ಸಮುದ್ರದಲ್ಲಿ ಚಲ್ಲಿಕೊಟ್ಟೆನು. ಅಂದಿನಿಂದ ನಾನು ರಾಮನ ಹೆಸರು ಕೇಳಿದೊಡನೆಯೇ ಅಂಜಿ ನಡುಗುವೆನು. ಕಾರಣ ರಾವಣಾ, ನೀನು ರಾಮನಸಂಗಡ ದ್ವೇಷವನ್ನು ಬೆಳಿಸಿದರೆ ನಿನ್ನ ಕುಲಸಹಿತವಾಗಿ ನಾಶಹೊಂದುವಿ. ಪರ ಸ್ತ್ರೀ, ಪರಧನಗಳನ್ನು ಅಪಹರಿಸುವಂಥ ಘೋರ ಪಾತಕವು ಬೇರೆಯಾವುದಿಲ್ಲ. ಅದಕ್ಕಾಗಿ ನೀನು ನನ್ನ ಮಾತನ್ನು ನಂಬಿ ನಿನ್ನ ಧರ್ಮಪತ್ನಿಯಮೇಲೆ ಪ್ರೇಮ ವನ್ನಿಟ್ಟು ನಿನ್ನ ಕುಲವನ್ನು ರಕ್ಷಿಸಿ ಸುಖವಾಗಿ ಬಾಳು" ಎಂದು ಪರಿ ಪರಿಯಾಗಿ ಬೋಧಿಸಿದನು. ಮಾರೀಚನ ಈ ಉಪದೇಶವನ್ನು ಕೇಳಿ ರಾವಣನು ಬಹು ಕ್ರೋಧಸಂತಪ್ತನಾದನು. ಮೃತ್ಯುವಿನ ಕೈಯಲ್ಲಿ ಸಿಕ್ಕ ಮನುಷ್ಯನಿಗೆ ಔಷಧವು ಹೇಗೆ ರುಚಿಸುವದಿಲ್ಲವೋ ಅದರಂತೆ ರಾವಣನ ವಿನಾಶಕಾಲವು ಸಮೀಪಿಸಿದ ಮೂಲಕ "ವಿನಾಶಕಾಲೇ ವಿಪರೀತಬುದ್ಧಿಃ" ಎಂಬಂತೆ ಅವನ ಬುದ್ಧಿಯು ಭ್ರಾಂತವಾಯಿತು. ಅವನು ಅತಿ ಕ್ರೋಧದಿಂದ "ಎಲೈ ಮಾರೀಚನೆ, ನೀನು ಬಲು ಜಾಣನೆಂದು ನಾನು ತಿಳಿದಿದ್ದೆ; ಆದರೆ ನೀನು ನನಗೆ ಅನುಕೂಲ ವಾಗುವಂತೆ ಮಾತನ್ನು ಹೇಳಲಿಲ್ಲ. ಖರ-ದೂಷಣರನ್ನು ಕೊಂದ ರಾಮನ ಪತ್ನಿಯನ್ನು ನಾನು ಎಂದಿಗೂ ಬಿಡುವದಿಲ್ಲ. ನೀನು ನನಗೆ ಸಹಾಯ ಮಾಡದಿದ್ದರೆ ನಾನು ಮೊದಲು ನಿನ್ನನ್ನು ಕೊಂದು ನನ್ನ ಇಷ್ಟಕಾರ್ಯವನ್ನು ನೆರವೇರಿಸುವೆನು" ಆಗ ಮಾರೀಚನು ನಿರುಪಾಯದಿಂದ "ನೀವು ಹೇಳಿದ ಕೆಲಸವನ್ನು ನಾನು ಮಾಡು ವೆನು" ಎಂದು ಹೇಳಿದನು. ಮತ್ತು ಮನದಲ್ಲಿ ಯೋಚಿಸಿ "ಇಂಥ ಕ್ರೂರನಾದ ರಾವಣನ ಕೈಯಿಂದ ಸಾಯುವದಕ್ಕಿಂತ ಶ್ರೀರಾಮ ಚಂದ್ರನ ಬಾಣದಿಂದ ಪ್ರಾಣವನ್ನು ತ್ಯಜಿಸುವದು ಲೇಸು" ಎಂದು ತಿಳಿದು ಕೂಡಲೆ ರಾವಣನ ಸಂಗಡ ರಥದಲ್ಲಿ ಕುಳಿತನು. ಆಗ

ಅವರೀರ್ವರು ಅಲ್ಲಿಂದ ಹೊರಟು ಪಂಚವಟಿಯಲ್ಲಿರುವ ರಾಮ ಚಂದ್ರನ ಆಶ್ರಮದಬಳಿಗೆ ಬಂದು ತಲ್ಪಿದರು.

ಮುಂದೆ ಮಾರೀಚನು ಸುವರ್ಣಮೃಗದ ರೂಪವನ್ನು ಧರಿಸಿ ರಾಮ ಚಂದ್ರನ ಆಶ್ರಮದ ಸುತ್ತಮುತ್ತಲಿನ ಹುಲ್ಲನ್ನು ಮೇಯುತ್ತ ತಿರು ಗಾಡಹತ್ತಿದನು. ಇಷ್ಟರಲ್ಲಿ ಸೀತೆಯು ಹೂಗಳನ್ನು ತರುವದರ ಸಲು ವಾಗಿ ಆಶ್ರಮದಿಂದ ಹೊರಗೆ ಬಂದಳು. ಕೂಡಲೆ ಸೀತೆಯ ದೃಷ್ಟಿಯು



ಸೀತೆಯು ರಾಮನಿಗೆ ಮೃಗವನ್ನು ತೋರಿಸಿದುದು

ಅಲ್ಲಿಯೇ ಮೇಯುತ್ತಿರುವ ಸುವರ್ಣಮೃಗದಮೇಲೆ ಬಿದ್ದಿತು. ಅದರ ಸುಂದರವಾದ ರೂಪವನ್ನು ಕಂಡು ಅವಳು ಬೆರಗಾಗಿ “ ಅಹಹ ! ಮೃಗವು ಎಷ್ಟು ಅಂದವಾಗಿದೆ. ಇಂಥ ಮೃಗವು ಆ ನಮ್ಮ ಆಶ್ರಮದಲ್ಲಿ ಇರಬೇಕು ” ಎಂದು ಚಿಂತಿಸಿ ಅದನ್ನು ಹಿಡಿಯುವದರ ಸಲುವಾಗಿ ಮುಂದೆ ಹೋಗಹತ್ತಿದಳು. ಅದು ತನ್ನ ಕೈಗೆ ಸಿಗ

ದಂತೆ ಕಂಡದ್ದರಿಂದ ರಾಮ-ಲಕ್ಷ್ಮಣರನ್ನು ಕರೆದು ಆ ಮೃಗವನ್ನು ಅವರಿಗೆ ತೋರಿಸುತ್ತ "ಆರ್ಯಪುತ್ರ ಆ ಮೃಗವು ನನಗೆ ಬೇಕು. ಅದನ್ನು ನೀವು ಹೇಗಾದರೂ ಮಾಡಿ ತಂದುಕೊಡಬೇಕು. ನಾವು ಮರಳಿ ಅಯೋಧ್ಯೆಗೆ ಹೋಗುವಾಗ ಇದನ್ನು ನಮ್ಮ ಸಂಗಡ ಕರೆದು ಕೊಂಡು ಹೋಗೋಣವಂತೆ; ಅದು ಜೀವದಿಂದ ದೊರೆತರೆ ಬಹಳ ಚನ್ನಾಗಿ ಆಗುತ್ತದೆ. ಇಲ್ಲದಿದ್ದರೆ ಅದನ್ನು ಕೊಂದು ತಂದವಲ್ಲಿ ಅದರ ಚರ್ಮವನ್ನಾದರೂ ಒಯ್ಯಬಹುದು" ಎಂದು ಹೇಳಿ ಬಹು ಪರಿ ಯಾಗಿ ಅದನ್ನು ತಂದೇಕೊಡಬೇಕೆಂದು ಹಟ ಹಿಡಿದಳು. ಆಗ ರಾಮಚಂದ್ರನು "ಲಕ್ಷ್ಮಣಾ, ನನ್ನ ಧನುಷ್ಯ-ಬಾಣಗಳನ್ನು ತೆಗೆದು ಕೊಂಡು ಬಾ" ಎಂದು ಹೇಳಿದನು. "ಲಕ್ಷ್ಮಣಾ, ಆ ಮೃಗವು ಯಾರ ಮನಸ್ಸನ್ನು ಸೆಳೆಯಲಿಕ್ಕಿಲ್ಲ. ಕಾರಣ ನಾನು ಅದನ್ನು ತರು ವದರಸಲುವಾಗಿ ಹೋಗುತ್ತೇನೆ; ನೀನು ಇಲ್ಲಿಯೇ ಉಳಿದು ಜನಕ ಕುಮಾರಿಯನ್ನು ಚನ್ನಾಗಿ ರಕ್ಷಿಸು" ಎಂದು ಹೇಳಿ ತಾನು ಅದನ್ನು ಬೆನ್ನಟ್ಟಿದನು. ಆಗ ಆ ಮಾಯಾವಿಮೃಗವು ಶ್ರೀರಾಮಚಂದ್ರ ನನ್ನು ಬಹಳ ದೂರದವರೆಗೆ ಒಯ್ಯಹತ್ತಿತು. ಕೂಡಲೆ ರಾಮ ಚಂದ್ರನು "ಇದೇನಾದರೂ ರಾಕ್ಷಸರ ಮೋಸಗಾರಿಕೆ ಇರಬ ಹುದೇ?" ಎಂದು ಮನದಲ್ಲಿ ಯೋಚಿಸಿ ತನ್ನ ಧನುಷ್ಯಕ್ಕೆ ಬಾಣ ವನ್ನು ಹೂಡಿ ಬಿಟ್ಟನು, ಆಗ ಆ ರಾಮಬಾಣವು ಮಾಯಾವಿಯಾದ ಮಾರೀಚನ ಎದೆಯಲ್ಲಿ ನಟ್ಟಿತು. ಕೂಡಲೆ ಆತನು ಭೂಮಿಯಮೇಲೆ ಬಿದ್ದು ರಾಮಚಂದ್ರನಂತೆ ಧ್ವನಿತೆಗೆದು "ಹಾ, ಸೀತೆ! ಹಾ ಲಕ್ಷ್ಮಣಾ" ಎಂದು ಆರ್ತಸ್ವರದಿಂದ ಒದರುತ್ತ ತನ್ನ ರಾಕ್ಷಸೀ ರೂಪವನ್ನು ಧರಿಸಿ ಪ್ರಾಣ ತ್ಯಜಿಸಿದನು. ಈ ರಾಕ್ಷಸನ ಮೋಸ ವನ್ನು ಕಂಡು ರಾಮಚಂದ್ರನು ಹಿಂದಿರುಗಿದನು.

ಇತ್ತ ತನ್ನ ಆಶ್ರಮದಲ್ಲಿ ಕುಳಿತಿರುವ ಸೀತೆಯು ರಾಮಚಂದ್ರನ ಆರ್ತಸ್ವರವನ್ನು ಕೇಳಿ ಲಕ್ಷ್ಮಣನನ್ನು ಕರೆದು, "ಲಕ್ಷ್ಮಣಾ, ಬೇಗ ಹೋಗು. ಆರ್ಯಪುತ್ರರು ಬಹಳ ಸಂಕಟದಲ್ಲಿರುವಂತೆ ಕಾಣುತ್ತದೆ. ಅವರ ಆರ್ತಸ್ವರವು ಕೇಳಬರುತ್ತದೆ. ಕಾರಣ ನೀನು ಹೋಗಿ ಅವರನ್ನು ರಕ್ಷಿಸು" ಎಂದು ಹೇಳಿದಳು. ಆದರೆ ಅವನು ಶ್ರೀರಾಮಚಂದ್ರನ ಆಜ್ಞೆಯಂತೆ ಆ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಆಗ ಜಾನಕಿಯು ಬಹಳ ಕ್ರೋಧದಿಂದ "ಲಕ್ಷ್ಮಣಾ, ನಿನ್ನ ಮನಸ್ಸಿನಲ್ಲಿ ನನ್ನಸಲುವಾಗಿ ಪಾಪಬುದ್ಧಿಯು ಹುಟ್ಟಿರುವದೆಂದು ನನಗೆ ಕಂಡುಬರುತ್ತದೆ. ಅಂತೆಯೇ ನೀನು ಆರ್ಯಪುತ್ರರಿಗೆ ಸಂಕಟವು ಪ್ರಾಪ್ತವಾದರೂಕೂಡ ಈ ಸ್ಥಳವನ್ನು ಬಿಟ್ಟು ಕಡಲಲೊಲ್ಲಿ. ನನ್ನ ಪ್ರಾಣನಾಥನು ಸಂಕಟದಲ್ಲಿರುವಾಗ ನಾನು ಜೀವದಿಂದುಳಿದು ಪ್ರಯೋಜನವೇನು?" ಎಂದು ಬಹಳ ನಿಷ್ಠುರತೆಯಿಂದ ಮಾತನಾಡಿದಳು. ಅವಳ ಆ ನಿಷ್ಠುರ ಮಾತನ್ನು ಕೇಳಿ ಲಕ್ಷ್ಮಣನು ಬಹು ದುಃಖದಿಂದ ಕೈ ಜೋಡಿಸಿ, ಮಾತೇ ಜಾನಕಿ! ಶ್ರೀರಾಮಚಂದ್ರನನ್ನು ಗೆಲ್ಲುವ ಸಾಮರ್ಥ್ಯವು ದೇವ—ದೈತ್ಯ—ಗಂಧರ್ವರಲ್ಲಿಯೂ ಕೂಡ ಇರುವದಿಲ್ಲ. ರಾಕ್ಷಸರು ಮಹಾ ಮಾಯಾವಿಗಳು; ಅವರು ನಾನಾರೀತಿಯಾಗಿ ಧ್ವನಿತೆಗೆದು ಮನುಷ್ಯರನ್ನು ಮೋಸಗೊಳಿಸುತ್ತಾರೆ. ಕಾರಣ ನೀನು ಅಂಜಬೇಡ ಎಂದು ಹೇಳಿದನು. ಅವನ ಈ ಮಾತನ್ನು ಕೇಳಿ ಸೀತೆಯು ಕ್ರೋಧವು ಹೆಚ್ಚಿತು; "ದುಷ್ಟಾ ಕುಲಕಂಟಕಾ, ಅನಾರ್ಯಾ, ನಿನ್ನ ಮನಸ್ಸಿನಲ್ಲಿ ನಿಜವಾಗಿಯೂ ಶ್ರೀರಾಮಚಂದ್ರನು ಮರಣಹೊಂದಬೇಕೆಂದಿದೆ. ಅಂತೆಯೇ ನೀನು ಇಂಥ ವಿಚಿತ್ರವಾದ ಮಾತನ್ನು ನನಗೆ ಹೇಳುತ್ತಿರುವೆ. ಮಲತಮ್ಮಂದಿರು ಸವಿಸವಿ ಮಾತುಗಳನ್ನಾಡಿಯೇ ಕೊರಳಲ್ಲಿ ಕತ್ತರಿಯನ್ನು ಹಾಕುತ್ತಾರೆ. ಆದರೆ ನಾನುಮಾತ್ರ ನಿನ್ನ ಇಚ್ಛೆಯನ್ನು ಈಡೇರಿಸಲಾರೆನು; ಈಗಲೇ ಪ್ರಾಣ

ವನ್ನು ಬಿಡುವೆನು" ಎಂದು ಅವಳು ಬಹಳ ಕಠೋರ ನುಡಿಗಳನ್ನಾಡಿದಳು. ಅವಳ ಈ ಮಾತುಗಳನ್ನು ಕೇಳಿ ಲಕ್ಷ್ಮಣನು ಶೋಕಿಸುತ್ತ "ಮಾತೇ, ನಿನ್ನ ಮಾತುಗಳು ಸ್ತ್ರೀ ಸ್ವಭಾವಕ್ಕೆ ಅನುಸರಿಸಿಯೇ ಇರುತ್ತವೆ. ಆದರೆ ಅವು ನನ್ನನ್ನು ಕಾದಿರುವ ಬಾಣದಂತೆ ಸುಡುತ್ತವೆ" ಎಂದು ಬಹಳ ದುಃಖದಿಂದ "ಹೇ ವನದೇವತೆಗಳೇ, ನಾನು ಸೀತಾಮಾತೆಗೆ ಯೋಗ್ಯವಾದ ಮಾತನ್ನು ಅವಳು ಹೇಳುತ್ತಿರಲು ನುಡಿದಿರುವ ನಿಷ್ಠುರವಾದ ನುಡಿಗಳನ್ನು ನೀವು ಕೇಳಿರುವಿರಿ; ಆದರೆ ಉಪಾಯವಿಲ್ಲ. ನಾನು ಶ್ರೀರಾಮಚಂದ್ರನ ಆಜ್ಞೆಯನ್ನು ಮೀರಿ ಇವಳನ್ನು ಇಲ್ಲಿಂದ ಬಿಟ್ಟು ಹೋಗಬೇಕಾಗಿದೆ. ಕಾರಣ ನೀವು ಅವಳನ್ನು ರಕ್ಷಿಸಬೇಕು" ಎಂದು ಹೇಳಿ ತಾನು ಆಶ್ರಮದಬಳಿಯಲ್ಲಿ ತನ್ನ ಬಾಣದಿಂದ ಮೂರು ಗೆರೆಗಳನ್ನು ಎಳೆದು "ಮಾತೇ, ನಾವು ಬರುವವರೆಗೆ ನೀವು ಈ ಮರ್ಯಾದೆಮೀರಿ ಬರಕೂಡದು" ಎಂದು ಹೇಳಿ ತಾನು ರಾಮಚಂದ್ರನ ಸಹಾಯಕ್ಕಾಗಿ ಹೊರಟನು.

ಲಕ್ಷ್ಮಣನು ಅಲ್ಲಿಂದ ಹೋಗಿರುವ ಸಂಧಿಯನ್ನು ಸಾಧಿಸಿ ರಾವಣನು ತ್ರಿದಂಡಿ ಸನ್ಯಾಸಿಯ ರೂಪವನ್ನು ಧರಿಸಿ ಆಶ್ರಮದ ಬಳಿಗೆ ಬಂದು ಚಿಂತಾಕ್ರಾಂತಳಾಗಿ ಕುಳಿತಿರುವ ಸೀತೆಗೆ ಕೇಳಿಸುವಂತೆ "ಓಂಭವತಿ ಭಿಕ್ಷಾಂದೇಹಿ" ಎಂದು ಕೂಗಿದನು. ಹಾಗು "ಮಾತೆ, ಭಿಕ್ಷೆಯನ್ನು ನೀಡು" ಎಂದು ಒದರಿದನು. ಆಗ ಅವಳು ಲಗುಬಗೆಯಿಂದೆದ್ದು ಬಂದು ಆಶ್ರಮದ ಬಾಗಿಲಲ್ಲಿರುವ ಸನ್ಯಾಸಿಯನ್ನು ಕಂಡು "ಅತಿಥಿಗಳೇ, ಸ್ವಲ್ಪ ಕೂಡ್ರಬಹುದು ಆರ್ಯಪುತ್ರರು ಆಶ್ರಮದ ಹೊರಕ್ಕೆ ಹೋಗಿರುವರು. ಕಾರಣ ಅವರು ಬಂದನಂತರ ತಮ್ಮನ್ನು ಸತ್ಕರಿಸಿ ಕಳಿಸುವರು" ಎಂದು ಹೇಳಿದಳು. ಆದರೆ ಆ ಕಪಟ ಸನ್ಯಾಸಿಯು "ನಾನು ಬಹಳ ಹಸಿದಿರುತ್ತೇನೆ, ಬೇಗನೆ ಭಿಕ್ಷೆ ನೀಡು; ಇಲ್ಲವಾದರೆ ನಾನು ಪ್ರಾಣತ್ಯಜಿಸುವೆನು" ಎಂದು ಹೇಳಿ

ಭೂಮಿಯಮೇಲೆ ಬಿದ್ದು ಹೊರಳಾಡಹತ್ತಿದನು. ಆಗ ಸೀತೆಗೆ ಏನೂ ತೋಚದಂತಾಯಿತು. ಅವಳ ಈ ಅವಸ್ಥೆಯನ್ನು ಕಂಡು ದೇವತೆಗಳು ಗುಪ್ತರೀತಿಯಿಂದ ಅವಳನ್ನು ಸ್ತುತಿಸಿ " ಮಾತೇ, ನೀನು ಲಂಕೆಗೆ



ಸೀತೆಯನ್ನು ರಾವಣನು ಎತ್ತಿಕೊಂಡು ಹೋದುದು

ಹೋಗದಿದ್ದರೆ ನಾವು ಕಾರಾಗೃಹದಿಂದ ಮುಕ್ತರಾಗಲಾರೆವು; ರಾವಣನು ನಿನ್ನನ್ನು ಮುಟ್ಟಿದರೆ ಭಸ್ಮವಾಗುವನು; ಕಾರಣ ನೀನು

ನಿನ್ನ ರೂಪವನ್ನು ಅಗ್ನಿಯಲ್ಲಿಟ್ಟು ಛಾಯಾರೂಪವನ್ನು ಧರಿಸಿ ಲಂಕೆಗೆ ಹೋಗು. ಅಂದರೆ ರಾಮಚಂದ್ರನು ನಿನ್ನನ್ನು ಶೋಧಿಸುತ್ತ ಅಲ್ಲಿಗೆ ಬಂದು ರಾವಣನನ್ನು ಕೊಂದು ನಿನ್ನೊಡನೆ ನಮ್ಮನ್ನೂ ಬಂಧ ಮುಕ್ತಮಾಡುವನು" ಎಂದು ಹೇಳಿದರು. ಕೂಡಲೆ ಅವಳು ತನ್ನ ತೇಜ ವನ್ನು ಗುಪ್ತವಾಗಿ ಅಗ್ನಿಯಲ್ಲಿರಿಸಿ ಛಾಯಾರೂಪದಿಂದ ರಾವಣನಿಗೆ ಭಿಕ್ಷೆ ನೀಡಲು ಆಶ್ರಮದ ಬಾಗಿಲಿಗೆ ಬಂದಳು. ಕೂಡಲೆ ರಾವಣನು "ನೀನು ಈ ಗೆರೆಗಳನ್ನು ದಾಟಿ ಬಂದರೆ ನಾನು ಭಿಕ್ಷೆಯನ್ನು ಸ್ವೀಕರಿಸುವೆನು" ಎಂದು ಹೇಳಿದನು. ಆಗ ಅವಳು ನಿರುಪಾಯ ಳಾಗಿ ಗೆರೆಗಳನ್ನು ದಾಟಿ ಬಂದು ಭಿಕ್ಷೆ ನೀಡುವಷ್ಟರಲ್ಲಿ ರಾವಣನು ಆಕೆಯ ಕೈ ಹಿಡಿದೆಳೆದು ಹೆಗಲಮೇಲೆ ಕುಳ್ಳಿರಿಸಿಕೊಂಡು ರಥವನ್ನೇರಿ ಆಕಾಶಮಾರ್ಗವಾಗಿ ಹೊರಟನು. ಆಗ ಅಲ್ಲಿರುವ ಬ್ರಾಹ್ಮಣರೆಲ್ಲರೂ ಅಂಜಿ ದಾರಿ ಸಿಕ್ಕತ್ತ ಓಡಿ ಹೋದರು. ಈ ರೀತಿಯಾಗಿ ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದನು.

## ೧೪. ಜಟಾಯು ಮರಣ

ಈ ಪ್ರಕಾರವಾಗಿ ರಾವಣನು ಸೀತೆಯನ್ನು ರಥದಲ್ಲಿ ಕುಳ್ಳಿರಿಸಿ ಕೊಂಡು ಹೋಗುತ್ತಿರುವಾಗ ಅವಳು ಬಹಳ ಆಕ್ರೋಶದಿಂದ "ಹೇ, ರಾಮಚಂದ್ರಾ, ಹೇ, ಲಕ್ಷ್ಮಣಾ, ಎಲ್ಲಿರುವಿರಿ? ಬೇಗ ಬರ್ರಿ. ಈ ಮಾಯಾವಿಯಾದ ರಾಕ್ಷಸನು ನನ್ನನ್ನು ಒಯ್ಯುತ್ತಿರುವನು; ಇದು ನಿಮಗೆ ಗೊತ್ತಾಗಿರಲಿಲ್ಲವೇ? ಇಲ್ಲ ಇಲ್ಲ! ಇದು ಗೊತ್ತಾಗಿ ದ್ದರೆ ನೀವು ಈತನನ್ನು ಶಿಕ್ಷಿಸದೆ ಬಿಡುತ್ತಿರಲಿಲ್ಲ; ಹಾ! ದೈವವೇ ಇದೇನು ನನ್ನ ಗತಿಯಾಯಿತು? ಇಂಥ ಶೂರರಾದ ರಾಮ—ಲಕ್ಷ್ಮ

ಣರು ಇರುತ್ತಿರುವಾಗ ನನಗೆ ಈ ಸಂಕಟವು ಪ್ರಾಪ್ತವಾಗಬೇಕೇ? ದುಷ್ಟಾ, ರಾಕ್ಷಸಾಧಮಾ, ರಾಮ—ಲಕ್ಷ್ಮಣರು ನನ್ನ ಬಳಿಯಲ್ಲಿರುವಾಗ ನನ್ನನ್ನು ಹರಣಮಾಡಲುದ್ಯುಕ್ತನಾಗಿದ್ದರೆ ಅವರು ನಿನ್ನನ್ನು ಜೀವದಿಂದ ಎಂದಿಗೂ ಬಿಡುತ್ತಿರಲಿಲ್ಲ. ಹಾ ಪಾಪಿ! ಇಂಥ ಹೀನ ಕೃತ್ಯವನ್ನು ಮಾಡಲು ನಿನಗೆ ನಾಚಿಕೆಯಾದರೂ ಬರುವದಿಲ್ಲವೇ?" ಎಂದು ಆತನನ್ನು ನಿಂದಿಸುತ್ತ ರಾಮ—ಲಕ್ಷ್ಮಣರನ್ನು ಸ್ಮರಿಸಿ ಬಹು ಪರಿಯಾಗಿ ಶೋಕಿಸಹತ್ತಿದಳು. ಆದರೂ ರಾವಣನು ಆ ಹೀಯಾಳಿಕೆಯ ಮಾತುಗಳನ್ನು ದುರ್ಲಕ್ಷಿಸಿ ತಾನು ತನ್ನ ರಥಹೊಡೆಯುವ ಕೆಲಸವನ್ನು ಒಂದೇಸವನೆ ಸಾಗಿಸಿದನು. ಇತ್ತ ಸೀತೆಯು ಒಂದೇ ಸವನೆ ಶೋಕದಿಂದ "ತಾಯಿಾ, ಗೋದಾವರೀ, ರಾಮನಿಗೆ ನನ್ನ ಸಂಗತಿಯನ್ನು ತಿಳಿಸು; ಹೇ, ಗಿಡ—ಬಳ್ಳಿಗಳಿರಾ, ಆರ್ಯಪುತ್ರರಿಗೆ ನನ್ನ ವಿಷಯವನ್ನು ಅರುಹಿರಿ; ದುಷ್ಟನಾದ ರಾಕ್ಷಸನು ಸೀತೆಯನ್ನು ತೆಗೆದುಕೊಂಡು ಹೋದನೆಂದು ತಿಳಿಸಿರಿ. ವನದೇವತೆಗಳಿರಾ, ನಾನು ನಿಮ್ಮ ಅನುಜ್ಞೆಯನ್ನು ಪಡೆಯುವೆನು. ಇನ್ನೆಂತು ಈ ಪಂಚವಟಿಯು ನನ್ನ ದೃಷ್ಟಿಗೆ ಬೀಳುವದು? ಹಾಯ್! ನನ್ನ ಮೈದುನನಾದ ಲಕ್ಷ್ಮಣನಿಗೆ ದುರುಕ್ತಿಗಳನ್ನು ಆಡಿದೆನಲ್ಲವೇ? ಅಂತೆಯೇ ನನ್ನಗತಿ ಹೀಗಾಗಿರಬಹುದು" ಈ ಪ್ರಕಾರವಾಗಿ ಅವಳು ಒಂದೇಸವನೆ ದುಃಖಿಸಹತ್ತಿದಳು. ಆ ಆಶ್ರಮದಿಂದ ಸ್ವಲ್ಪ ಮುಂವಕ್ಕೆ ಹೋಗುವಷ್ಟರಲ್ಲಿ ವೃದ್ಧನಾದ ಜಟಾಯುವುವಟವೃಕ್ಷದಮೇಲೆ ತೂಕಡಿಸುತ್ತ ಕುಳಿತಿರುವವನು ಸೀತೆಯ ದೃಷ್ಟಿಗೆ ಬಿದ್ದನು. ಆಗ ಅವಳು ಇವನಾದರೂ ರಾಮಚಂದ್ರನಿಗೆ ನನ್ನ ಸುದ್ದಿಯನ್ನು ತಿಳಿಸುವನೆಂದು ತಿಳಿದು "ಜಟಾಯು ಮಹಾನುಭಾವರೇ, ಇದು ನೋಡಿ ನನ್ನ ದುರವಸ್ಥೆಯನ್ನು. ಈ ದುಷ್ಟನಾದ ರಾಕ್ಷಸನು ಅಬಲೆಯಾದ ನನ್ನನ್ನು ಒಯ್ಯುತ್ತಿರುವನು. ನೀವು ಮುಪ್ಪಿನವರಿರುವಿರಿ. ಕಾರಣ ನಿಮ್ಮ ಕೈಯಿಂದ

ಏನೂ ಇದಕ್ಕೆ ಪ್ರತೀಕಾರ ಆಗಲಾರದು. ಆದರೆ ಈ ಸಂಗತಿಯನ್ನು ಆರ್ಯಪುತ್ರರಿಗೆ ತಿಳಿಸಿದರೆ ಸಾಕು" ಎಂದೊದರಿ ಹೇಳಿದಳು. ಆಗ ವೃದ್ಧನಾದ ಜಟಾಯುವು ಕಣ್ದೆರೆದು ನೋಡಿ "ಹಾ ದುಷ್ಟಾ, ರಾವಣಾ, ತಡೆ. ನಾನು ಜೀವದಿಂದಿರುವವರೆಗೆ ನಿನ್ನನ್ನು ಹಾಗೆಯೇ ಬಿಡಲಾರೆನು. ನೀನು ತರುಣನು; ನಾನು ಮುಪ್ಪಿನವನು, ಆದರೂ ಕೂಡ ನಿನ್ನಸಂಗಡ ಯುದ್ಧ ಮಾಡದೆ ಬಿಡಲಾರೆನು" ಎಂದು ನುಡಿದು ಆ ಜಟಾಯುಪಕ್ಷಿಯು ಆತನಮೇಲೆ ಏರಿಹೋಗಿ, ತನ್ನ ತೀಕ್ಷ್ಣವಾದ ಚುಂಚಿನಿಂದ ರಾವಣನ ಭುಜಗಳನ್ನು ಕಡಿಯ ಹತ್ತಿತು. ಆಗ ರಾವಣನು ಸೀತೆಯನ್ನು ಕೆಳಗಿಳಿಸಿ ಆ ಜಟಾಯುವಿನ ಸಂಗಡ ಯುದ್ಧ ಮಾಡಹತ್ತಿದನು. ಇತ್ತ ಜಟಾಯುವು ಕೂಡ ರಾವಣನ ಸಂಗಡ ಘನಘೋರವಾದ ಯುದ್ಧ ಮಾಡಿ ಆತನ ರಥವನ್ನು ಮುರಿದು ಕುದುರೆಯನ್ನು ಕೊಂದನು. ಈ ಪ್ರಕಾರ ಅವರಿಬ್ಬರೂ ಹೋರಾಡುತ್ತಿರುವಾಗ ರಾವಣನು ತನ್ನ ಖಡ್ಗದಿಂದ ಜಟಾಯುವಿನ ರೆಕ್ಕೆಯನ್ನು ಕತ್ತರಿಸಿದನು.



ರಾವಣನು ಜಟಾಯುನ ರೆಕ್ಕೆ ಹೊಡೆದುದು

ಕೂಡಲೆ ಆ ಪಕ್ಷಿಯು ಮೃತಪ್ರಾಯವಾಗಿ ಭೂಮಿಯಮೇಲೆ ಬಿದ್ದಿತು. ಅದನ್ನು ಕಂಡು ಸೀತೆಯ ಶೋಕವು ಮತ್ತಷ್ಟು ಹೆಚ್ಚಿ ಅವಳು ಆ ಪಕ್ಷಿಯುಸಲುವಾಗಿ ಬಹು ಪರಿಯಾಗಿ ದುಃಖಿಸುತ್ತ “ ಹೇ ಆರ್ಯಪುತ್ರಾ, ಈ ಪಕ್ಷಿಯೂಕೂಡ ನನ್ನಸಲುವಾಗಿ ಯುದ್ಧ ಮಾಡಿ ಮೃತಪಟ್ಟಿತಲ್ಲ! ಹೇ, ಕಾಕುತ್ಥ್ಸನೇ ಹೇ ಲಕ್ಷ್ಮಣನೇ,ಅನಾಥ ಳಾದ ನನ್ನನ್ನು ರಕ್ಷಿಸಿರಿ, ಎಂದು ಅತ್ತಿತ್ತ ಓಡುತ್ತ ಗಿಡ-ಮರಗಳನ್ನು ಅಪ್ಪಿಕೊಳ್ಳುತ್ತ “ ಬಿಡ , ಬಿಡು, ದುಷ್ಟಾ ನನ್ನನ್ನು ಬಿಡು ” ಎಂದು ಒದರಹತ್ತಿದಳು. ಕೂಡಲೆ ರಾವಣನು ಆಕೆಯ ಹೆಳಲನ್ನು ಹಿಡಿದೆಳೆದನು. ಆಗ ಭೂದೇವಿಯು ಗದಗದನೆ ನಡುಗಿದಳು. ಸರ್ವಚರಾಚರ ಸೃಷ್ಟಿಯು ಅಂಧಃಕಾರದಿಂದ ಮುಸುಕಿಹೋಯಿತು. ಸೀತೆಯನ್ನು ರಾವಣನು ಎತ್ತಿಕೊಂಡು ಆಕಾಶಮಾರ್ಗವಾಗಿ ಹೊರಟನು. ಅವನು ಹೋಗುವಕಾಲಕ್ಕೆ ಆತನ ಭವ್ಯವಾದ ನೆರಳು ಭೂಮಿಯ ಮೇಲೆ ಬಿದ್ದು ಅದೂ ಓಡುತ್ತಿರುವಹಾಗೆ ತೋರಿತು. ಅದನ್ನು ಕಂಡು ಅಡವಿಯಲ್ಲಿಯ ಹುಲಿ–ಸಿಂಹಗಳು ರೊಚ್ಚಿನಿಂದ ಆ ನೆರಳನ್ನು ತುಡುರುತ್ತ ಓಡಹತ್ತಿದವು. ಪರ್ವತಗಳು ತಮ್ಮ ಶಿಖರ ಸ್ವರೂಪವಾದ ಕೈಗಳನ್ನು ಮೇಲಕ್ಕೆತ್ತಿ ರಾವಣನನ್ನು ಅಡ್ಡಗಟ್ಟುತ್ತವೆಯೋ ಏನೋ ಎನ್ನುವಂತೆ ತೋರುತ್ತಿದ್ದವು. ಸೂರ್ಯನು ಮಂಜಿನಿಂದ ಮುಸುಕಿದವನಾದಂತೆ ತೋರುತ್ತಿದ್ದನು. ಭೂತಮಾತ್ರಗಳೆಲ್ಲ ದುಃಖಗ್ರಸ್ತವಾಗಿ ಅಳಹತ್ತಿದವು. ಚಿಗರೆ ಮೊದಲಾದ ಮೃಗಗಳು ಒಂದೇಸವನೆ ಒದರುತ್ತ ಓಡಹತ್ತಿದವು. ಆಗ ಸೀತೆಗೆ ಇನ್ನು ತನ್ನನ್ನು ರಕ್ಷಿಸುವವರು ಯಾರೂ ಇಲ್ಲವೆಂದು ಅನ್ನಿಸಹತ್ತಿತು. ಹೀಗೆ ಸ್ವಲ್ಪ ಮುಂದಕ್ಕೆ ಹೋಗುವಷ್ಟರಲ್ಲಿ ಅವಳು ಒಂದು ಗುಡ್ಡದ ಅಣಿಯಲ್ಲಿ ಐದು ಕಪಿಗಳು ಕುಳಿತಿರುವದನ್ನು ಕಂಡಳು. ಈ ಕಪಿಗಳಾದರೂ ತನ್ನ ಸುದ್ದಿಯನ್ನು ರಾಮಚಂದ್ರನಿಗೆ ಮುಟ್ಟಿಸಬಹುದೆಂಬ

ಆಶೆಯಿಂದ ಅವಳು ತನ್ನ ಉತ್ತರೀಯವಸ್ತ್ರದಲ್ಲಿ ತನ್ನ ಕೆಲವು ಆಭರಣಗಳನ್ನು ಕಟ್ಟಿ ಆ ಗಂಟನ್ನು ಅಲ್ಲಿ ಕುಳಿತಿರುವ ಮಂಗಗಳ ಕೈಗೆ ಸಿಗುವಂತೆ ಒಗೆದಳು; ಇದು ರಾವಣನಿಗೆ ತಿಳಿಯಲಿಲ್ಲ. ಅವನು ತನ್ನ ವಿಚಾರದಲ್ಲಿಯೇ ಮಗ್ನನಾಗಿ ರಥ ಸಾಗಿಸಿದ್ದನು. ಹೀಗೆ ಆತನು ಅನೇಕ ನದಿ—ಸರೋವರ, ಗಿರಿ-ಗಂಹರಗಳನ್ನು ದಾಟುತ್ತ ಆರ್ಯಾವರ್ತದ ದಕ್ಷಿಣತುದಿಯ ಸಾಗರವನ್ನು ತಲುಪಿದನು. ಆ ಕೂಡಲೆ ಅವನು ಧನುಸ್ಸಿನಿಂದ ಮುಕ್ತನಾದ ಬಾಣದಂತೆ ಶೀಘ್ರಗತಿಯಿಂದ ಸಾಗರವನ್ನು ದಾಟಿ ತನ್ನ ಲಂಕಾಪಟ್ಟಣವನ್ನು ಸೇರಿದನು.

ಲಂಕೆಗೆ ಹೋದಕೂಡಲೆ ಅವನು ಮೊದಲು ತನ್ನ ಎಂಟುಜನ ರಾಕ್ಷಸರನ್ನು ಪಂಚವಟಿಯಲ್ಲಿರುವ ರಾಮನಮೇಲೆ ಬಲವಾದ ಕಾವಲಾಗಿ ಕಳಿಸಿದನು. ಆಬಳಿಕ ಸೀತೆಗೆ ಸುಂದರವಾದ ಅರಮನೆಯನ್ನು ತೋರಿಸಿ:— “ ಸೀತೆ ! ಇದು ನೋಡು ನಾನು ಇಪ್ಪತ್ತೆರಡುಕೋಟಿ ರಾಕ್ಷಸರ ಅಧಿಪತಿಯು; ಅಲ್ಲದೆ ಮೂವತ್ತುಮೂರುಕೋಟಿ ದೇವತೆಗಳೆಲ್ಲ ನನ್ನ ವಶವರ್ತಿಗಳಾಗಿರುವರು. ಸೂರ್ಯ—ಚಂದ್ರರು ನನ್ನ ಆಜ್ಞೆಯಂತೆ ಬೈಗು-ಬೆಳಗುಮಾಡುವರು. ಸಾಕ್ಷಾತ್ ಲಕ್ಷ್ಮಿಯು ನನ್ನ ಪಾದದ ದಾಸಿಯಾಗಿರುವಳು. ಇಂಥ ಬಲಾಢ್ಯನಾದ ರಾಕ್ಷಸರಾಜ ನನ್ನನ್ನು ವರಿಸಿ ಸುಖವಾಗಿ ಬಾಳು ” ಎಂದು ಹೇಳಿದನು. ಆಗ ಸೀತೆಯು ಅತಿ ದುಃಖದಿಂದ ಕ್ರೋಧಸಂತಪ್ತಳಾಗಿ “ ಛೀ, ಮೂರ್ಖ, ಕುಲಕಂಟಕನಾದ ದುಷ್ಟ, ಪಾಪೀ, ಮೃತ್ಯುವು ನಿನ್ನನ್ನು ಸಮೀಪಿಸಿದಂತೆ ನನಗೆ ತೋರುತ್ತದೆ. ಅಂತೆಯೇ ನಿನಗೆ ಈ ದುರ್ಬುದ್ಧಿಯು ಉತ್ಪನ್ನವಾಯಿತು. ಎಲೈ ನೀನು ಸುರಾಸುರರಿಗೆ ಅಸಾಧ್ಯವಾದವನಿದ್ದರೂಕೂಡ ಶ್ರೀರಾಮಚಂದ್ರನ ಅಮೋಘವಾದ ಬಾಣಗಳು ನಿನ್ನನ್ನು ಯಮಲೋಕಕ್ಕೆ ಕಳಿಸದೆ ಬಿಡಲಾರವು. ನಿನ್ನ ಈ ಕೋಟ್ಯಾವಧಿ ರಾಕ್ಷಸರು ಯುದ್ಧದಲ್ಲಿ ಮಣ್ಣನ್ನು ಮುಕ್ಕುತ್ತ ಮಡಿದು ಬೀಳು

ವರು. ಎಲೈ ಕಳ್ಳನೇ ! ನೀನು ನನ್ನನ್ನು ರಾಮಚಂದ್ರನ ಸಮಕ್ಷಮವಾಗಿ ತಂದಿದ್ದರೆ, ನನ್ನ ಪತಿಯು ತನ್ನ ಸುವರ್ಣಮಂಡಿತವಾದ ಬಾಣಗಳಿಂದ ನಿನ್ನ ಹತ್ತೂ ಶಿರಸ್ಸುಗಳನ್ನು ಒಂದರಕ್ಷಣದಲ್ಲಿ ತರಿದು ಬಿಡುತ್ತಿದ್ದನು " ಎಂದು ಹೇಳಿದಳು. ಅವಳ ಈ ಕಠೋರವಾದ ಭಾಷಣವನ್ನು ಕೇಳಿ ರಾವಣನು ಅತಿ ಕ್ರೋಧಾನ್ವಿತನಾಗಿ " ಸೀತೆ, ಕೇಳು ನಾನು ನಿನಗೆ ಇಂದಿನಿಂದ ಒಂದುವರ್ಷದ ಅವಧಿಯನ್ನು ಕೊಟ್ಟಿರುವೆನು. ಅಷ್ಟರಲ್ಲಿ ನೀನು ನನ್ನ ವಶವರ್ತಿಯಾಗದಿದ್ದರೆ ನಿನ್ನನ್ನು ಕೊಂದು ನಿನ್ನ ಮಾಂಸವನ್ನಾದರೂ ನಾನು ತಿನ್ನುವೆನು" ಎಂದು ನುಡಿದನು. ಆಗ ರಾಕ್ಷಸಿಯರನ್ನು ಕರೆದು ಇವಳನ್ನು ಅಶೋಕವನದಲ್ಲಿರಿಸಿರಿ; ಮತ್ತು ಇವಳಮೇಲೆ ನೀವು ಭದ್ರವಾದ ಕಾವಲವನ್ನಿಡಿರಿ " ಎಂದು ಹೇಳಿ ಅಲ್ಲಿಂದ ಹೊರಟು ಹೋದನು. ಮುಂದೆ ಆ ರಾಕ್ಷಸಿಯರು ಸೀತೆಯನ್ನು ಅಶೋಕವನದಲ್ಲಿ ತಂದಿರಿಸಿದರು. ಆಗ ಬ್ರಹ್ಮದೇವನು ಇಂದ್ರನ ಕಡೆಯಿಂದ ದಿವ್ಯವಾದ ಪಾಯಸಪಾತ್ರೆಯನ್ನು ಕೊಟ್ಟು ಸೀತೆಯ ಬಳಿಗೆ ಕಳಿಸಿದನು. ಇಂದ್ರನು ಬ್ರಹ್ಮನಿಂದ ಪ್ರೇರಿತನಾಗಿ ಆ



ಸೀತೆಯು ಅಶೋಕವನದಲ್ಲಿ

ಅಶೋಕವನಕ್ಕೆ ಬಂದು ಮೊದಲು ಸೀತೆಯ ಕಾವಲಿಗಿದ್ದ ರಾಕ್ಷಸಿಯರಿಗೆಲ್ಲ ನಿದ್ರೆಯ ಮೋಹವನ್ನುಂಟುಮಾಡಿದನು. ಬಳಿಕ ಸೀತೆಯನ್ನು ಸಾಂತ್ವನಗೊಳಿಸಿ ತಾನುತಂದ ದಿವ್ಯಪಾಯಸವನ್ನು ಆಕೆಗೆ ನೀಡಿ ಭುಂಜಿಸಲು ಹೇಳಿದನು. ಇಂದ್ರನ ಅಪ್ಪಣೆಯಂತೆ ಅವಳು ಆ ದಿವ್ಯಪಾಯಸವನ್ನು ಸ್ವೀಕರಿಸಿ ಹಸಿವು—ನೀರಡಿಕೆಗಳೆಂಬ ಬಾಧೆಯಿಂದ ಮುಕ್ತಳಾದಳು. ಅಲ್ಲದೆ ಇಂಥ ಕಷ್ಟತಮ ಸ್ಥಿತಿಯಲ್ಲಿಯೂ ಕೂಡ ರಾಮಚಂದ್ರನು ಬಂದು ತನ್ನನ್ನು ಇಲ್ಲಿಂದ ಬಿಡಿಸಿ ಕರೆದೊಯ್ಯುವನು" ಎಂಬ ಬಲವಾದ ಆಸೆಯುಳ್ಳವಳಾಗಿ ಅವಳು ತನಗುಂಟಾದ ಕಷ್ಟವನ್ನು ಅನುಭೋಗಿಸಲು ಸಿದ್ಧಳಾದಳು.

ಇತ್ತ ರಾಮಚಂದ್ರನು ಮಾರೀಚರಾಕ್ಷಸನನ್ನು ಕೊಂದು ಮರಳಿ ಬರುತ್ತಿರುವಾಗ ದಾರಿಯಲ್ಲಿ ದೀನವದನನಾದ ಲಕ್ಷ್ಮಣನು ಭೆಟ್ಟಿಯಾದನು. ಆತನ ಮುಖಚರ್ಯೆಯನ್ನು ಕಂಡು ಶ್ರೀರಾಮಚಂದ್ರನು ಗಾಬರಿಯಿಂದ "ಲಕ್ಷ್ಮಣಾ, ನೀನು ನನ್ನ ಆಜ್ಞೆಯನ್ನು ಮೀರಿ ಇಲ್ಲಿಗೇಕೆ ಬಂದೆ?" ಎಂದು ಕೇಳಿದನು. ಆಗ ಲಕ್ಷ್ಮಣನು ಅತಿ ದುಃಖದಿಂದ ಎಲ್ಲ ನಿಜ ಸಂಗತಿಯನ್ನು ಹೇಳಿ "ಅಣ್ಣಾ, ನಾನು ಸೀತಾಮಾತೆಯ ದೃಷ್ಟಿಯಿಂದ ಪಾಪಿಯಾಗಿರುವೆನು" ಎಂದೆನ್ನುತ್ತ ಬಹುಪರಿಯಾಗಿ ಶೋಕಿಸಿದನು. ಕೂಡಲೆ ರಾಮನು ಆತನನ್ನು ಸಮಾಧಾನಗೊಳಿಸಿ ಬಹು ಲಗುಬಗೆಯಿಂದ ನಡೆದು ಆಶ್ರಮಕ್ಕೆ ಬಂದರು. ಆದರೆ ಅಲ್ಲಿ ಸೀತಾಮಾತೆ ಇರಲಿಲ್ಲ. ಆದರಿಂದ ಆಶ್ರಮವು ಶೂನ್ಯಮಯವಾಗಿ ತೋರಹತ್ತಿತು. ಆಗ ರಾಮಚಂದ್ರನು ಶೋಕಭರಿತನಾಗಿ "ಲಕ್ಷ್ಮಣಾ, ನಾನು ರಾಜ್ಯಭ್ರಷ್ಟನಾದರೂಕೂಡ ನನ್ನನ್ನು ಬಿಡದೆ ನೆರಳಿನಂತೆ ಹಿಂಬಾಲಿಸಿಬಂದ ನನ್ನ ಸೀತೆಯು ಈಗೆಲ್ಲಿ ಮಾಯವಾದಳು! ನಾನು ಸೀತೆಯನ್ನು ಬಿಟ್ಟು ಒಂದು ಅರೆ ಕ್ಷಣವೂಕೂಡ ಜೀವಿಸಲಾರೆ ಅವಳು ಜೀವದಿಂದಾವರೂ ಇರುವಳೇ?"

ಎಂದು ಶೋಕಿಸುತ್ತ ಆಕೆ ಕೂಡ್ರುವ, ನಿಲ್ಲುವ, ಅಡ್ಡಾಡುವ, ಎಲ್ಲ ಸ್ಥಳಗಳನ್ನೂ ಹುಡುಕಾಡಹತ್ತಿದನು. "ಹಾಯ್! ಹಾಯ್! ಸೀತೆಯನ್ನು ರಾಕ್ಷಸರು ಕೊಂದು ತಿಂದಿರಬಹುದು; ಛೇ, ಛೇ, ಹಾಗೆಂದಿಗೂ ಆಗಲಾರದು. ಅವಳು ನೀರುತರಲು ಹೊಳೆಗೆ ಹೋಗಿರಬಹುದು; ಇಲ್ಲದಿದ್ದರೆ ಹೂಗಳನ್ನಾರಿಸಲು ಹೋಗಿರಬಹುದು" ಎಂದು ಇತ್ತಿಂದಿತ್ತ ಅತ್ತಿಂದಿತ್ತ ಅವಳನ್ನು ಹುಡುಕುತ್ತ ಓಡಾಡಹತ್ತಿದನು. ಈ ರೀತಿ ಬಹುಪರಿಯಾಗಿ ಭ್ರಮಿಸಿ ಶೋಕಿಸಿದ್ದರಿಂದ ಅವನ ಕಣ್ಣುಗಳು ಕೆಂಪಗಾದವು; ಆಗ ಅವನು ಉನ್ಮತ್ತನಂತೆ ತೋರುತ್ತಿದ್ದನು. ಇಂತು ಶ್ರೀರಾಮಚಂದ್ರನ ಮನಸ್ಸು ಶೋಕಸಾಗರದಲ್ಲಿ ಮುಳುಗಿಹೋಯಿತು. ಅವನು ಅತಿ ದುಃಖದಿಂದ ಗಿಡ-ಬಳ್ಳಿಗಳನ್ನು ಅಪ್ಪಿಕೊಳ್ಳುತ್ತ "ಹೇ ಕದಂಬವೃಕ್ಷವೇ, ನನ್ನ ಪ್ರಿಯಳಾದ ಸೀತೆಯನ್ನು ನೀನು ಕಂಡಿರುವಿಯಾ? ಹೇ ಬಿಲ್ವವೃಕ್ಷವೇ, ಪೀತಾಂಬರವನ್ನುಟ್ಟ ನನ್ನ ಪ್ರಿಯಳಾದ ಸೀತೆಯನ್ನು ನೀನು ಎಲ್ಲಿಯಾದರೂ ನೋಡಿದಿಯಾ? ಹೇ ಅರ್ಜುನವೃಕ್ಷಾ, ನಿನಗೆ ದಿನಾಲು ನೀರನ್ನು ಹಾಕುತ್ತಿರುವ ನನ್ನ ಪ್ರಿಯಸಖಿ ಜನಕಕುಮಾರಿಯು ಎಲ್ಲಿರುವಳು?" ಎಂದು ಹಲವಾಗಿ ಹಲಬುತ್ತ ಹುಚ್ಚನಂತೆ ಗಿಡ-ಬಳ್ಳಿಗಳನ್ನು ಕೇಳುತ್ತ ಓಡಾಡಹತ್ತಿದನು. ಮುಂದೆ ಬರುತ್ತಿರುವ ಚಿಗರೆಯ ಹಿಂಡೊಂದನ್ನು ಕಂಡು "ಹೇ ಎರಳೆಗಳಿರಾ, ನನ್ನ ಪ್ರಾಣಪ್ರಿಯೆ ಹರಿಣಾಕ್ಷಿಯನ್ನು ಕಂಡಿರುವಿರಾ? ಹೇ ವನರಾಜನೇ! ನೀನು ನನ್ನ ಹರಿಮಧ್ಯೆಸುಂದರಿಯನ್ನು ಕಂಡಿರುವಿಯಾ? ಎಲೈ ಗಜರಾಜನೇ, ನನ್ನ ಗಜಗಾಮನಿಯಾದ ಸೀತೆಯನ್ನು ಕಂಡಿರುವಿಯಾ" ಎಂದು ರಾಮಚಂದ್ರನು ಹಲಬುತ್ತ ಅಲೆದಾಡಹತ್ತಿದನು. ಇತ್ತ ಲಕ್ಷ್ಮಣನು ಶ್ರೀರಾಮಚಂದ್ರನ ಈ ಸ್ಥಿತಿಯನ್ನು ಕಂಡು ಮನಸ್ಸಿನಲ್ಲಿ ವ್ಯಸನಾಕ್ರಾಂತನಾಗಿ ಕೈ ಜೋಡಿಸಿ "ಅಣ್ಣಾ, ರಾಮಚಂದ್ರಾ, ಶಾಂತನಾಗು" ಎಂದು



ಶ್ರೀರಾಮಚಂದ್ರನು ಸೀತೆಗಾಗಿ ಶೋಕಿಸುತ್ತ ಹೋಗುತ್ತಿರುವದು

ಹೇಳುತ್ತ ಆತನನ್ನು ಬಹಳರೀತಿಯಿಂದ ಸಾಂತ್ವನಗೊಳಿಸಲು ಪ್ರಯತ್ನಿಸಿದನು. ಆದರೆ ಅದೆಲ್ಲವೂ ನಿರರ್ಥಕವಾಯಿತು ಕೂಡಲೆ ಶ್ರೀರಾಮಚಂದ್ರನ ಶೋಕವು ಇಮ್ಮಡಿಯಾಗಿ "ಹೇ ಸೀತೆ, ಹಾ! ಜಾನಕಿ; ನೀನೆಲ್ಲಿ ಹೋದೆ? ಲಕ್ಷ್ಮಣಾ, ನಾನು ಅಯೋಧ್ಯೆಯನ್ನು ಬಿಟ್ಟು ಬರುವಾಗ್ಗೆ ಸೀತೆ ಸಹಿತನಾಗಿ ಬಂದಿದ್ದೆ. ಇನ್ನು ಸೀತಾವಿರಹಿತನಾಗಿ ನಾನು ಮರಳಿ ಅಯೋಧ್ಯೆಗೆ ಹೋಗಲಾರೆ; ಅವಳಿಂದಲೇ ನನಗೆ ಸ್ವರ್ಗವು. ಅವಳಿಲ್ಲದಿದ್ದರೆ ನನಗೆ ಸರ್ವಸ್ವವೂ ಬೇಡ. ಕಾರಣ ನೀನು ಮರಳಿ ಅಯೋಧ್ಯೆಗೆ ಹೋಗಿ ತಮ್ಮನಾದ ಭರತನನ್ನು ದೃಢಾಲಿಂಗಿಸು ಅವನಿಗೆ "ನೀನು ಸುಖವಾಗಿ ರಾಜ್ಯವನ್ನಾಳಿ ಮಾತೋಶ್ರೀಯರಾದ ಕೈಕೆಯಿ–ಕೌಸಲ್ಯಾ—ಸುಮಿತ್ರಾದೇವಿಯರನ್ನು ಚನ್ನಾಗಿ ರಕ್ಷಿಸೆಂದು ಹೇಳು" ಎಂದು ನುಡಿಯುತ್ತ ದೀನಸ್ವರದಿಂದ ಅಳುತ್ತ ಭೂಮಿಯ ಮೇಲೆ ಬಿದ್ದು ಹೊರಳಾಡಹತ್ತಿದನು. ಆತನ ಈ ಶೋಕವನ್ನು ಕಂಡು ಲಕ್ಷ್ಮಣನು ಮುಂದೆಬಂದು ಗಟ್ಟಿಯಾಗಿ ಆತನ ಪಾದಗಳನ್ನು ಹಿಡಿದು "ಅಣ್ಣಾ, ರಾಮಚಂದ್ರನೇ, ಧೈರ್ಯಬಿಡಬೇಡ. ನೀನೇ ಹೀಗೆ ಧೃತಿಗುಂದಿದರೆ ಪ್ರಾಕೃತರಾದ ಜನರು ಹೇಗೆ ಮಾಡುವರು? ಪ್ರಸಂಗವು ಯಾರಿಗೆ ಬರುವದಿಲ್ಲ? ಇಂಥ ಜಗತ್ತನ್ನು ಬೆಳಗುತ್ತಿರುವ ಸೂರ್ಯ—ಚಂದ್ರರಿಗೂಕೂಡ ಗ್ರಹಣಗಳೆಂಬ ಕುತ್ತುಗಳುಂಟು. ದೈವವು ಯಾರನ್ನೂ ಬಿಟ್ಟಿರುವದಿಲ್ಲ; ಬುದ್ಧಿವಂತನಾದ ಮನುಷ್ಯನು ತನ್ನ ಬುದ್ಧಿಯಿಂದ ಬಂದ ಕಷ್ಟಗಳನ್ನು ಎದುರಿಸಿ ಅವನ್ನು ಹಿಂದೂಡುತ್ತಾನೆ; ಹೀಗೆ ಎಷ್ಟೋಸಾರೆ ನೀನು ನನಗೆ ಜ್ಞಾನೋಪದೇಶವನ್ನು ಮಾಡಲಿಲ್ಲವೇ? ಅಂದಮೇಲೆ ನಾನು ಚಿಕ್ಕವನು; ತಮಗೆ ನಾನೇನು ಹೇಳಬೇಕು? ತಾವು ಧೈರ್ಯವನ್ನು ತಂದುಕೊಂಡು ಮನಸ್ಸನ್ನು ಶಾಂತಗೊಳಿಸಿಕೊಳ್ಳಿರಿ ಧೈರ್ಯವೆಂಬ ಲಕ್ಷ್ಮಿಯು ಬಲು ದೊಡ್ಡವಳು" ಎಂದು ಪರಿಪರಿಯಾಗಿ ಹೇಳಿದನು.

ಇತ್ತ ಕೈಲಾಸಪರ್ವತದಲ್ಲಿ ಶಂಕರನು ಶ್ರೀರಾಮಚಂದ್ರನ ಧ್ಯಾನದಲ್ಲಿ ಮಗ್ನನಾಗಿ ಕುಳಿತಿದ್ದನು. ಆಗ ಪಾರ್ವತಿಯು ಕೈಲಾಶ ನಾಥನ ಸಮೀಪಕ್ಕೆ ಬಂದು "ಹೇ ಪರಮೇಶ್ವರಾ, ನೀವು ಯಾವ ರಾಮಚಂದ್ರನ ಧ್ಯಾನದಲ್ಲಿ ಮಗ್ನರಾಗಿರುವಿರೋ ಆ ರಾಮಚಂದ್ರನು ವೃಕ್ಷ–ಪಾಷಾಣಗಳನ್ನು ಆಲಿಂಗಿಸುತ್ತ ಭ್ರಮಿಷ್ಟನಂತೆ ಅಲೆಯುವ ಕಾರಣವೇನು ?" ಎಂದು ಕೇಳಿದಳು. ಆಗ ಪರಮೇಶ್ವರನು, "ಹೇ ಪಾರ್ವತಿ, ಶ್ರೀರಾಮಚಂದ್ರನು ನಿರ್ವಿಕಲ್ಪನೂ, ನಿರ್ವಿಕಾರನೂ, ಆಗಿರುವನು. ಅವನು ಕೇವಲ ತನ್ನ ಅವತಾರಚರಿತ್ರೆಯನ್ನು ಜನರಿಗೆ ತೋರಿಸುವದರಸಲುವಾಗಿ ಹಾಗೆ ಮಾಡುತ್ತಿರುವನು. ವೃಕ್ಷ-ಪಾಷಾಣಗಳು ಅಂದರೆ ಅವರು ಶಾಪಗ್ರಸ್ತರಾದ ತಾಪಸಿಗಳು. ಅವರನ್ನು ಈ ರೀತಿಯಾಗಿ ಆಲಿಂಗಿಸಿ ಅವರ ಶಾಪವಿಮೋಚನೆಯನ್ನು ಮಾಡುತ್ತಿರುವನು" ಎಂದು ಹೇಳಿದನು. ಈ ಮಾತು ಪಾರ್ವತಿಗೆ ಸರಿದೋರಲಿಲ್ಲ. ಕೂಡಲೆ ಅವಳು "ನಿಮ್ಮ ರಾಮಚಂದ್ರನನ್ನು ನಾನು ಪರೀಕ್ಷಿಸುವೆನು" ಎಂದು ಹೇಳಿ ಅವಳು ಸೀತಾಮಾತೆಯು ರೂಪವನ್ನು ಧರಿಸಿ ಶ್ರೀರಾಮಚಂದ್ರನಿದ್ದಲ್ಲಿ ಬಂದಳು. ಅವಳನ್ನು ಕಂಡು ಲಕ್ಷ್ಮಣನು ಅತಿ ಆನಂದದಿಂದ "ರಾಮಚಂದ್ರಾ, ಇದೋ ನೋಡು ಸೀತಾಮಾತೆಯು ಬಂದಳು" ಎಂದು ಹೇಳಿದನು. ಆಗ ರಾಮಚಂದ್ರನು "ಲಕ್ಷ್ಮಣಾ, ಇವಳು ಸೀತೆಯಲ್ಲ; ಕೈಲಾಸನಾಥನ ಸತಿಯೂ, ಲೋಕಮಾತೆಯೂಆದ ಪಾರ್ವತಿಯು. ತನ್ನ ಪತಿಯ ಸಂಗಡ ಪಣತೊಟ್ಟು ಇವಳು ನನ್ನನ್ನು ಮೋಸಗೊಳಿಸುವದರಸಲುವಾಗಿ ಇಲ್ಲಿಗೆ ಬಂದಿರುವಳು" ಎಂದು ಹೇಳಿದನು. ಈ ಮಾತನ್ನು ಕೇಳಿ ಪಾರ್ವತಿಗೆ ಪರಮಾಶ್ಚರ್ಯವಾಯಿತು. ಕೂಡಲೆ ಅವಳು ಶ್ರೀರಾಮಚಂದ್ರನಿಗೆ ವರ ಕೊಡಲು ಸಿದ್ಧಳಾದಳು. ಆಗ ಶ್ರೀರಾಮಚಂದ್ರನು, "ಮಾತೇ ಪಾರ್ವತಿ, ನೀನು ಕೈಲಾಸನಾಥನನ್ನು ಬಿಟ್ಟು

ಇಲ್ಲಿಗೆ ಬಂದಿರುವ ಕಾರಣವೇನು?" ಎಂದು ಕೇಳಿದನು. "ನೀವು ವೃಕ್ಷ-ಪಾಷಾಣಗಳನ್ನು ಆಲಿಂಗಿಸುವ ಕಾರಣವೇನು? ಎಂದು ಪಾರ್ವತಿಯು ಪ್ರತಿಯಾಗಿ ಕೇಳಿದಳು. "ಈ ಮಾತು ನೀನು ಶಿವನನ್ನೇ ವಿಚಾರಿಸು" ಎಂದು ರಾಮಚಂದ್ರನು ಹೇಳಿ ಅವಳಿಗೆ ಜ್ಞಾನೋಪದೇಶವನ್ನು ಮಾಡಿ "ವೃಕ್ಷಪಾಷಾಣಗಳು ಯಾರಿರುವರೆಂಬದನ್ನು ನೀನು ನೋಡು" ಎಂದು ರಾಮಚಂದ್ರನು ಹೇಳಿದನು. ಆಗ ಅವಳಿಗೆ ಸೀತೆಯ ನಿಮಿತ್ತವಾಗಿ ಶ್ರೀರಾಮಚಂದ್ರನು ವೃಕ್ಷ-ಪಾಷಾಣಗಳನ್ನು ಆಲಿಂಗಿಸಿ ಮಹಾತಾಪಸಿಗಳನ್ನು ಉದ್ಧರಿಸುವೆನೆಂದು ತಿಳಿದು ಬಂದಿತು. ಮುಂದೆ ಪಾರ್ವತಿಯು "ನೀನು ರಾವಣನನ್ನು ಕೊಂದು ಸೀತೆಯಿಂದೊಡಗೂಡಿ ಮರಳಿ ಅಯೋಧ್ಯೆಗೆ ಬರುವಿ" ಎಂದು ಅಭಯವರವಿತ್ತಳು. ಆನಂತರ ಶ್ರೀರಾಮಚಂದ್ರನು ಪಾರ್ವತಿದೇವಿಯನ್ನು ಪೂಜಿಸಿ† ಸೀತಾಶೋಧಕ್ಕಾಗಿ ತಮ್ಮನೊಡನೆ ಮುಂದೆ ಸಾಗಿದನು.

ಮುಂದೆ ರಾಮ—ಲಕ್ಷ್ಮಣರು ಪಾರ್ವತಿಯನ್ನು ಪ್ರಸನ್ನೀಕರಿಸಿಕೊಂಡು ಜನಸ್ಥಾನದಲ್ಲಿ ಅತ್ತಿತ್ತ ನೋಡುತ್ತ ಹೋಗುವಷ್ಟರಲ್ಲಿ ಕೆಲವಂತರದಲ್ಲಿ ಒಂದು ರಥವು ಮುರಿದುಬಿದ್ದದು ಅವರ ದೃಷ್ಟಿಗೋಚರವಾಯಿತು. ಇದೇನು ಚಮತ್ಕಾರವೆಂದು ಹಾಗೇ ಸ್ವಲ್ಪ ಮುಂದಕ್ಕೆ ಹೋಗುವಷ್ಟರಲ್ಲಿ ನರಳುವ ಧ್ವನಿಯೊಂದವರಿಗೆ ಕೇಳ ಬಂದಿತು. ಈ ಆರ್ತಧ್ವನಿಯು ಎಲ್ಲಿಂದ ಕೇಳಬರುತ್ತದೆಂದು ಅತ್ತಿತ್ತ ನೋಡುವಷ್ಟರಲ್ಲಿ ಅಲ್ಲಿಯೇ ಸಮೀಪದಲ್ಲಿ ರಾವಣನಿಂದ ರೆಕ್ಕೆಯನ್ನು ಕಳೆದುಕೊಂಡ ಜಟಾಯುವು ಗತಬಲನಾಗಿ ಭೂಮಿಯಮೇಲೆ ಬಿದ್ದದ್ದು ಅವರ ದೃಷ್ಟಿಗೆ ಬಿದ್ದಿತು; ಆಗ ಅವರು ಹತ್ತಿರಬಂದು "ಹೇ

---

† ಶ್ರೀರಾಮನು ಪಾರ್ವತಿದೇವಿಯನ್ನು ಪೂಜಿಸಿದ ಸ್ಥಾನವೇ ಈಗಿನ ಸೊಲ್ಲಾಪುರಜಿಲ್ಲೆಯ ಪ್ರಸಿದ್ಧ ಕ್ಷೇತ್ರ ತುಳಜಾಪುರವೆಂದು ತಿಳಿಯಲ್ಪಡುತ್ತದೆ.

ಜಟಾಯುವೇ ನಿನ್ನ ಸ್ಥಿತಿ ಹೀಗೇಕೆ ಆಯಿತು?" ಎಂದು ಕೇಳಿದರು. ಆಗ ಜಟಾಯುವು ಬಾಯಿಂದ ರಕ್ತವನ್ನುಕಾರಿ ಅತಿ ದೀನಸ್ವರದಿಂದ "ಹೇ ರಾಮಚಂದ್ರಾ, ನೀನು ಯಾವಳನ್ನು ಒಂದು ಸಂಜೀವನಿಯಂತೆ ಹುಡುಕುತ್ತಿರುವಿಯೋ ಆ ನಿನ್ನ ಪ್ರೀತಿಯ ಸತಿಯನ್ನು ದುಷ್ಟನಾದ ರಾವಣನು ನನ್ನನ್ನು ಗತಪ್ರಾಣನನ್ನಾಗಿ ಮಾಡಿ ಅಪಹರಿಸಿಕೊಂಡು ಹೋದನು. ರಾವಣನು ಲಂಕೆಯ ಅರಸನು; ನೀವು ಆಶ್ರಮದಲ್ಲಿರದ ಸಮಯಸಾಧಿಸಿ ನಿಮ್ಮ ಆಶ್ರಮದಲ್ಲಿ ಹೊಕ್ಕು ಸೀತೆಯನ್ನು ಎತ್ತಿಕೊಂಡು ಇದೇಮಾರ್ಗದಿಂದ ರಥದಲ್ಲಿಂದ ಹೋದನು. ಆಗ ಸೀತಾದೇವಿಯ ಆರ್ತಸ್ವರವನ್ನು ಕೇಳಿ ನಾನು ಆ ರಾವಣನಮೇಲೆ ಏರಿ ಹೋಗಿ ಆತನನ್ನು ಎದುರಿಸಿದೆ, ಅವನ ರಥವನ್ನು ಮುರಿದೊಗೆದೆ. ಅವನ ರಥಾಶ್ವಗಳನ್ನು ಕೂಡ ಕೊಂದುಬಿಟ್ಟೆ. ಇಷ್ಟೇ ಅಲ್ಲ; ಅವನು ಧರಿಸಿದ್ದ ಬಿಲ್ಲನ್ನೂ ತುಂಡರಿಸಿಬಿಟ್ಟೆನು. ಈ ಎಲ್ಲ ರೀತಿಯಿಂದ ನಾನು ಅವನನ್ನು ಪ್ರತಿಭಟಿಸುತ್ತಿರಲು ಕೂಡಲೆ ಆಕಾಲವು ವ್ಯತ್ಯಸ್ತವಾಗಿಬಿಟ್ಟಿತು. ಬಿಲ್ಲನ್ನು ಕಳೆದುಕೊಂಡ ಆತನು ತನ್ನ ಖಡ್ಗದಿಂದ ನನ್ನ ರೆಕ್ಕೆಗಳನ್ನು ಛೇದಿಸಿ ನನ್ನನ್ನು ಈ ಗತಿಗೀಡುಮಾಡಿ ನಿರಾತಂಕವಾಗಿ ಸೀತೆಯನ್ನು ತೆಗೆದುಕೊಂಡು ಆಕಾಶಮಾರ್ಗವಾಗಿ ಹೋದನು."ಜಟಾಯುವಿನ ಈ ಮಾತನ್ನು ಕೇಳಿ ರಾಮಚಂದ್ರನು ಅತಿ ದುಃಖದಿಂದ ಮೂರ್ಛೆ ಹೊಂದಿ ಭೂಮಿಯಮೇಲೆ ಬಿದ್ದನು. ತುಸ ಹೊತ್ತಿನಲ್ಲಿಯೇ ಎಚ್ಚತ್ತು "ಲಕ್ಷ್ಮಣಾ, ನನ್ನ ದುರ್ಭಾಗ್ಯವು ಎಂತಹದಿರಬಹುದು? ನಾನು ರಾಜ್ಯಭ್ರಷ್ಟನಾದೆ, ವನದಲ್ಲಿಕೂಡ ಸುಖವನ್ನು ಕೊಡುತ್ತಿರುವ ಸೀತೆಯನ್ನು ಕಳೆದುಕೊಂಡೆ. ನನ್ನ ತಂದೆಯ ಸಖ್ಯತ್ವ ಕೈಕೊಂಡಿದ್ದ ಈ ಪಕ್ಷಿರಾಜನು ಈಗ ದೇಹಬಿಡಹತ್ತಿರುವನು. ಅಂದಮೇಲೆ ನಾನೆಂಥ ದುರ್ದೈವಿಯು? ಎಂದು ಕಣ್ಣೀರಿಡುತ್ತ ಅತಿ ಸ್ನೇಹದಿಂದ ಆ ಜಟಾಯುವಿನ ಬೆನ್ನಮೇಲೆ ಕೈಯಾಡಿಸಿ "ಹೇ ಪಕ್ಷಿರಾಜಾ, ನನ್ನಿಂದಲೇ

ನಿನಗೆ ಈ ಸ್ಥಿತಿಯು ಪ್ರಾಪ್ತವಾಯಿತಲ್ಲವೇ ? ” ಎಂದು ಶೋಕಿಸಿದನು. ಆಗ ಜಟಾಯುವು, ಕೈಕಾಲುಗಳನ್ನುದ್ದಕ್ಕೂ ಚಾಚಿ ತನ್ನ ಕತ್ತನ್ನು ಮೇಲಕ್ಕೆತ್ತಿ ಶ್ರೀರಾಮಚಂದ್ರನಕಡೆಗೆ ಕರುಣಾದೃಷ್ಟಿಯನ್ನಿರಿಸಿ ರಾಮಚಂದ್ರನ ಪಾದಗಳಮೇಲೆ ಹಣೆಯನ್ನಿಟ್ಟು ತನ್ನ ದೇಹವನ್ನು ಬಿಟ್ಟಿತು! ಅದು ಮೃತವಾದುದನ್ನು ಕಂಡು ರಾಮಚಂದ್ರನ ತಾಪವು ಹೆಚ್ಚಿತು. “ ಹಾಯ್ ! ದೈವವೇ ದಂಡಕಾರಣ್ಯದಲ್ಲಿ ಈ ಪಕ್ಷಿಯು ಎಷ್ಟೋಸಾವಿರವರ್ಷಗಳವರೆಗೆ ಸುಖವಾಗಿದ್ದಿತಲ್ಲ ! ಆದರೆ ನನ್ನಸಲುವಾಗಿ ಇಂದು ಇದರಗತಿ ಹೀಗಾಯಿತಲ್ಲವೇ! ಲಕ್ಷ್ಮಣಾ, ಬೇಗ ಹೋಗು, ಚಿತೆಗಾಗಿ ಒಣ ಕಟ್ಟಿಗೆಗಳನ್ನು ಸಂಗ್ರಹಿಸು. ಇವನು ನಮ್ಮ ಪಿತೃಸಖನಾದುದರಿಂದ ನಮಗೆ ಪಿತೃಸಮಾನನೇ ಆಗಿರುವನು ” ಎಂದು ಹೇಳಿದನು. ಆಕೂಡಲೆ ಲಕ್ಷ್ಮಣನು ಚಿತೆಯನ್ನು ಸಿದ್ಧಪಡಿಸಿದನು ಬಳಿಕ ಅಣ್ಣತಮ್ಮಂದಿರೀರ್ವರೂ ಆ ಜಟಾಯುವಿನ ಮೃತದೇಹಕ್ಕೆ ಅಗ್ನಿ ಸಂಸ್ಕಾರವನ್ನಿತ್ತರು. ಆನಂತರ ಅವರಿಬ್ಬರೂ ಗೋದಾವರೀತೀರಕ್ಕೆ ಹೋಗಿ ಅಲ್ಲಿ ಸ್ನಾನ-ಕರ್ಮಾದಿಗಳನ್ನು ಮುಗಿಸಿ ಜಟಾಯುವಿನ ಹೆಸರಿನಿಂದ ಧರ್ಮೋದಕವನ್ನು ಕೊಟ್ಟರು.

ಈ ರೀತಿಯಾಗಿ ಜಟಾಯುಪಕ್ಷಿರಾಜನು ಶ್ರೀರಾಮಚಂದ್ರನ ಹಸ್ತದಿಂದ ಸದ್ಗತಿಹೊಂದಿದನು.

## ೧೫. ಸುಗ್ರೀವನ ಸಖ್ಯ

ಈ ರೀತಿಯಾಗಿ ರಾಮ-ಲಕ್ಷ್ಮಣರು ಜಟಾಯುವಿಗೆ ಸದ್ಗತಿಯನ್ನು ಹೊಂದಿಸಿ ಸೀತೆಯನ್ನು ಹುಡುಕುತ್ತ ಮುಂದೆ ಹೊರಟರು. ಅವರು ಮೊದಲು ಪಶ್ಚಿಮದಿಕ್ಕನ್ನು ಕಂಡು ಆನಂತರ ದಕ್ಷಿಣಕ್ಕೆ

ಬಂದು ಮರಳಿ ಜನಸ್ಥಾನಕ್ಕೆ ಬಂದರು. ಅಲ್ಲಿಂದ ಮತ್ತೆ ಹೊರಟು ಕ್ರೌಂಚಾರಣ್ಯವನ್ನು ಹೊಕ್ಕರು. ಹಾಗೆಯೇ ಮುಂದಕ್ಕೆ ಪೂರ್ವದ ಕಡೆಗೆ ಬಂದು ಒಂದು ಘೋರಾರಣ್ಯವನ್ನು ಪ್ರವೇಶಿಸಿದರು. ಮಾರ್ಗದಲ್ಲಿ ಹಲವು ನದಿ-ಪರ್ವತಗಳನ್ನು ದಾಟುತ್ತ ಒಂದು ದಟ್ಟವಾದ ಅಡವಿಯಲ್ಲಿ ಹೋಗುತ್ತಿರುವಾಗ ಅತಿ ಭಯಂಕರವಾದ ಸಪ್ಪಳವೊಂದು ಕೇಳಬಂದಿತು. ಆ ಸಪ್ಪಳವು ಕೇಳಬರುವ ಮಾರ್ಗದಿಂದ ಮುಂದಕ್ಕೆ ಬರುವಷ್ಟರಲ್ಲಿ ಪರ್ವತಪ್ರಾಯನಾದ ಕಬಂಧನೆಂಬ ರಾಕ್ಷಸನೊಬ್ಬನು ಅವರಿಗೆ ಮಾರ್ಗಪ್ರತಿಬಂಧಕನಾಗಿ ಕುಳಿತಿರುವಂತೆ ದೃಷ್ಟಿಗೆ ಬಿದ್ದಿತು. ಆ ರಾಕ್ಷಸನ ತಲೆಯು ಆತನ ದೇಹದಲ್ಲಿ ಹುದುಗಿತ್ತು. ಅವನ ಕಣ್ಣುಗಳು ಎದೆಯಮೇಲಿದ್ದವು; ಅವನ ಬಾಯಿಯು ಅವನ ಉದರದಲ್ಲಿತ್ತು; ಕೈಗಳೆರಡೂ ಒಂದೊಂದು ಯೋಜನದಷ್ಟು ಉದ್ದವಿದ್ದವು. ಕಾಲುಗಳು ತುಂಡರಿಸಿ ಮೊಂಡವಾಗಿದ್ದವು, ಅದರಿಂದ ಅವನು ತಾನು ಕುಳಿತಿರುವ ಸ್ಥಳವನ್ನು ಬಿಟ್ಟು ಕದಲುವಂತಿರಲಿಲ್ಲ. ಅವನು ತನ್ನ ಆಹಾರವನ್ನು ಕುಳಿತಲ್ಲಿಯೇ ತನ್ನ ಉದ್ದವಾದ ಕೈಗಳನ್ನು ಮುಂಚಾಚಿ ದೊರಕಿಸಿಕೊಳ್ಳುತ್ತಿದ್ದನು. ಆತನ ಈ ಭಯಂಕರವಾದ ಸ್ವರೂಪಕಂಡು ಲಕ್ಷ್ಮಣನು ಬೆದರಿದನು. ರಾಮಚಂದ್ರನು ಆತನಿಗೆ ಅಂಜದಿರಲು ಹೇಳಿ ಈರ್ವರೂ ಆ ರಾಕ್ಷಸನನ್ನು ಸಮೀಪಿಸಿದರು. ಆ ಪ್ರದೇಶದಲ್ಲಿ ಸಂಚರಿಸುವ ಬಲವುಳ್ಳ ಪಶು-ಪ್ರಾಣಿಗಳು ಆ ಘೋರರಾಕ್ಷಸನ ನೀಳ್ದವಾದ ಕೈಗಳಿಗೆ ಸಿಕ್ಕದೆ ಹೋಗುತ್ತಿರಲಿಲ್ಲ. ಆ ರಾಕ್ಷಸನು ಈಗ ಅಲ್ಲಿಗೆ ಬಂದ ರಾಮ-ಲಕ್ಷ್ಮಣರನ್ನು ಸಂತೋಷದಿಂದ ತನ್ನ ಎರಡೂಕೈಗಳನ್ನು ಮುಂಚಾಚಿ ಒಂದ ರಕ್ಷಣದಲ್ಲಿಯೇ ಅವರನ್ನು ತನ್ನ ಕೈಗಳಲ್ಲಿ ಹಿಡಿದುಕೊಂಡನು. ಆಗ ರಾಮಚಂದ್ರನು ಲಕ್ಷ್ಮಣನಿಗೆ "ನಾವು ಮೊದಲು ಈ ರಾಕ್ಷಸನ ಕೈಗಳನ್ನು ಕತ್ತರಿಸಲುಪಕ್ರಮಿಸಬೇಕು" ಎಂದು ಸೂಚಿಸಿ ಈರ್ವರೂ

ತಮ್ಮ ಖಡ್ಗಗಳಿಂದ ಆ ರಾಕ್ಷಸನ ಒಂದೊಂದು ಕೈಯನ್ನು ಚೂರು ಚೂರಾಗಿ ತುಂಡರಿಸಿ ಚಲ್ಲಿಬಿಟ್ಟರು. ಆಗ ಆ ಕಬಂಧರಾಕ್ಷಸನು ಹತಬಲನಾಗಿ ಕರ್ಕಶಧ್ವನಿಯಿಂದ ಚೀರಿ ನೆಲಕ್ಕುರುಳಿದನು. ಪ್ರಾಣ ಬಿಡುವ ಮೊದಲು ಆ ರಾಕ್ಷಸನು ರಾಮ-ಲಕ್ಷ್ಮಣರನ್ನು ಕುರಿತು:— " ನೀವು ಯಾರು ? ಎಂಬದಾಗಿ ಕೇಳಿದನು. ಆಗ ಲಕ್ಷ್ಮಣನು " ಈ ನನ್ನ ಅಣ್ಣನು ದಶರಥಪುತ್ರನಾದ ರಾಮನು. ತಂದೆಯ ವಚನವನ್ನು ಪಾಲಿಸುವದಕ್ಕಾಗಿ ವನವಾಸಕ್ಕೆ ಬಂದಿರುವನು " ಎಂದು ಹೇಳಿದನು. ಅವನ ಈ ಮಾತನ್ನು ಕೇಳಿ ಆತನಿಗೆ ಬಹಳ ಆನಂದವಾಯಿತು. "ಹೇ ರಾಮಚಂದ್ರಾ ನಾನು ನಿನ್ನ ದರ್ಶನದಿಂದ ಇಂದಿಗೆ ಶಾಪವಿಮುಕ್ತನಾದೆನು " ಎಂದು ಹೇಳಿ ತನ್ನನಿಜಸಂಗತಿಯನ್ನರುಹಿದನು. "ನಾನು ಪೂರ್ವದಲ್ಲಿ ದನುಎಂಬ ಹೆಸರಿನ ಗಂಧರ್ವನು. ಮನೆಗೆ ಬಂದ ಬ್ರಾಹ್ಮಣರನ್ನೆಲ್ಲ ಅತಿ ಭಯಂಕರವಾದ ರೂಪವನ್ನು ಧರಿಸಿ ಅವರನ್ನು ಅಂಜಿಸುತ್ತಿದ್ದೆನು. ಹೀಗಿರುವಾಗ ಒಂದುದಿನ ಸ್ಥೂಲಶಿರಎಂಬ ಮಹರ್ಷಿಗಳು ನನ್ನನ್ನುಕಂಡು ಅತಿ ಕ್ರೋಧದಿಂದ " ನಿನ್ನ ಈ ರೂಪವು ಹೀಗೆಯೇ ಚಿರಕಾಲವಿರಲಿ " ಎಂದು ಶಾಪವನ್ನಿತ್ತರು. ಅದರ ಪರಿಣಾಮವಾಗಿ ನಾನು ಈ ರಾಕ್ಷಸ ಜನ್ಮತಾಳಬೇಕಾಯಿತು. ಇದೇ ಸ್ವರೂಪದಲ್ಲಿ ನಾನು ತಪಸ್ಸುಮಾಡಿ ಬ್ರಹ್ಮನಿಂದೆ ದೀರ್ಘಾಯುಷ್ಯವನ್ನು ಹೊಂದಿದೆನು. ಈಗಲೂಕೂಡ ನಾನು ಮದದಿಂದ ಮತಿಭ್ರಷ್ಟನಾಗಿ ಸುರಪತಿಯನ್ನು ಎದುರಿಸಲು ಆ ಇಂದ್ರನ ವಜ್ರಾಯುಧದ ಹೊಡೆತದಿಂದ ನಾನು ಈ ವಿದ್ರೂಪಸ್ಥಿತಿಯನ್ನು ಹೊಂದಿದೆನು. ಆತನು ನನ್ನ ನೆತ್ತಿಯಮೇಲೆ ಪ್ರಹಾರ ಮಾಡಿದ್ದರಿಂದ ನನ್ನ ಶಿರಸ್ಸು ಉರ—ಉದರ ಪ್ರದೇಶದೊಳಕ್ಕೆ ಸೇರಿತು. ಇನ್ನೊಂದು ಹೊಡೆತದಿಂದ ನನ್ನ ಉದ್ದಾದ ಕಾಲುಗಳು ಕತ್ತರಿಸಲ್ಪಟ್ಟವು. ಹೀಗಾಗಿ ನಾನು ಕೊನೆಗೆ ಗತಬಲನಾಗಿ ಆ

ಇಂದ್ರನನ್ನೇ ಶರಣು-ಶರಣೆಂದು ಮೊರೆಹೊಕ್ಕೆನು. ಅವನನ್ನು ಹಲವು ಬಗೆಯಿಂದ ಪ್ರಾರ್ಥಿಸಿದೆನು; ನನ್ನ ಬೇಡಿಕೆಯನ್ನು ದಯಾಂಕುರಿತನಾದ ಇಂದ್ರನು ಮನ್ನಿಸಿ ಬಿದ್ದಲ್ಲಿಯೇ ನನ್ನ ಚರಿತಾರ್ಥಕ್ಕೆ ಆಸ್ಪದವಾಗು ವಂತೆ ನನ್ನ ಕೈಗಳನ್ನು ದೀರ್ಘವನ್ನಾಗಿ ಮಾಡಿದನು. ಹಾಗು ಆ ಇಂದ್ರನು ನನ್ನನ್ನು ಕುರಿತು:— “ ರಾಕ್ಷಸಾ; ಈ ನಿನ್ನ ದುರವಸ್ಥೆಯು ಸೀತಾನ್ವೇಷಣಕ್ಕಾಗಿ ಈ ಪ್ರದೇಶಕ್ಕೆ ಬಂದ ರಾಮ—ಲಕ್ಷ್ಮಣರು ನಿನ್ನ ಉದ್ದಾದ ಕರಗಳನ್ನು ಕತ್ತರಿಸಿದನಂತರ ದೂರಾಗುವದು. ಆಗ ನೀನು ನಿನ್ನ ದೇಹವನ್ನು ಅಗ್ನಿನಾರಾಯಣನಿಗೆ ಅರ್ಪಿಸಿದೆಯಾದರೆ ನಿನಗೆ ಮೊದಲಿನ ರೂಪವು ಪ್ರಾಪ್ತವಾಗುವದು ” ಎಂದು ಭರವಸೆ ಹೇಳಿ ಇಂದ್ರನು ಹೊರಟುಹೋದನು ಅಂದಿನಿಂದ ನಾನು ನನ್ನ ಚರಿತಾರ್ಥವನ್ನು ಇದ್ದಲ್ಲಿಯೇ ಈ ರೀತಿಯಾಗಿ ಸಾಗಿಸುತ್ತ ಬಂದಿರು ವೆನು. ಇಂದು ನಾನು ನಿಮ್ಮಿಂದ ಶಾಪಮುಕ್ತನಾದೆನು. ಕಾರಣ ನೀವು ಇನ್ನು ನನ್ನ ದೇಹವನ್ನು ಅಗ್ನಿನಾರಾಯಣನಿಗೆ ಅರ್ಪಿಸಿ ನನ್ನನ್ನು ಸದ್ಗತಿಗೆ ಕೊಂದಿಸಬೇಕು ” ಎಂದು ಹೇಳಿದನು. ಆಗ ಲಕ್ಷ್ಮಣನು “ ಎಲೈ ರಾಕ್ಷಸನೇ, ರಾವಣನು ಸೀತೆಯನ್ನು ಒಯ್ಯು ತ್ತಿರುವಾಗ ನೀನು ಆತನನ್ನು ಕಂಡಿರುವೆಯಾ ? ” ಎಂದು ಕೇಳಿದನು. ಕೂಡಲೆ ಅವನು “ ನಾನು ಕಂಡಿಲ್ಲ, ಆದರೆ ಇಲ್ಲಿಂದ ದಕ್ಷಿಣದಕಡೆಗೆ ಪಂಪಾಎಂಬ ಹೆಸರಿನ ಒಂದು ಸರೋವರವಿರುತ್ತದೆ. ಅದರ ದಂಡೆಗೆ ಹೊಂದಿ ಋಷ್ಯಮೂಕವೆಂಬ ಪರ್ವತವಿರುತ್ತದೆ. ಆ ಪರ್ವತದಲ್ಲಿ ಸುಗ್ರೀವನೆಂಬ ಒಬ್ಬ ಕಪಿರಾಜನು ಇರುತ್ತಾನೆ; ನೀವು ಆತನನ್ನು ವಿಚಾರಿಸಿದರೆ ಎಲ್ಲ ಸಂಗತಿಯು ತಿಳಿಯುವದು. ಮತ್ತು ಆವನು ಅವಶ್ಯ ಉಂಟಾದರೆ ನಿಮಗೆ ಚನ್ನಾಗಿ ಸಹಾಯಮಾಡುವನು ” ಎಂದು ಹೇಳಿದನು. ರಾಕ್ಷಸನ ಮಾತುಗಳಿಂದ ರಾಮ—ಲಕ್ಷ್ಮಣರಿಗೆ ಪರಮಾನಂದವಾಯಿತು. ಮುಂದೆ ಅವರಿಬ್ಬರೂ ಒಂದು ದೊಡ್ಡ

ತ್ರೆಗ್ಗನ್ನು ತೋಡಿ ಚಿತೆಯನ್ನು ರಚಿಸಿ ಗತಪ್ರಾಣನಾದ ಕಬಂಧನನ್ನು ಅದರಲ್ಲಿ ನೂಕಿಬಿಟ್ಟರು. ಅದರಿಂದ ಆ ಕಬಂಧರಾಕ್ಷಸನ ದೇಹವು ಸುಟ್ಟು ಭಸ್ಮವಾಯಿತು. ಹಾಗೂ ಆ ಚಿತೆಯಿಂದ ಒಂದು ದಿವ್ಯ ತೇಜಸ್ಸಿನ ದೇಹವು ಆಕಾಶಕ್ಕೆ ಹೊರಟುಹೋಯಿತು. ಆ ದಿವ್ಯ ರೂಪಧರಿಸಿದ ಕಬಂಧನು ಹೋಗುವಾಗ್ಗೆ “ ಎಲೈ ರಾಮಚಂದ್ರನೇ, ನೀವು ಪಶ್ಚಿಮದಕಡೆಗಿರುವ ದಾರಿಯಿಂದ ಹೋಗಿರಿ. ಅಂದರೆ ನಿಮಗೆ ಆ ಮಾರ್ಗದಲ್ಲಿ ಜಂಬುನೇರಿಳೆ, ಅಶೋಕ, ಹಲಸು, ಮುಂತಾದ ಫಲ—ವೃಕ್ಷಗಳು ಹತ್ತುವವು. ನೀವು ಅವುಗಳ ಮಧುರ ತರ ಫಲಗಳನ್ನು ಸೇವಿಸಿ ಮಾರ್ಗದ ಒಂದೊಂದು ಪರ್ವತವನ್ನು ದಾಟ ಹಿಂದುಳಿಸಿ ಮುಂದೆ ಸಾಗಲು ಕೆಲವಂತರದಲ್ಲಿಯೇ ನಿಮಗೆ ಮನೋಹರವಾದ ಪಂಪಾಸರೋವರವು ತೋರಿಬರುವದು; ಸ್ಪಟಿಕ ದಂತೆ ಶುಭ್ರವಾದ ಅದರ ನಿರ್ಮಲೋದಕ ಪ್ರಾಶನದಿಂದ ನಿಮಗೆ ಆನಂದವಾಗುವದು. ಆ ಸರಸ್ಸಿನಲ್ಲಿಯ ವಿವಿಧವರ್ಣರಂಜಿತ ಕಮಲ ಗಳಿಂದ ಜಲದೇವತೆಯು ಚಿತ್ರತರ ಕಸೀದೆಯ ಸೀರೆಯನ್ನು ಉಟ್ಟಂತೆ ನಿಮಗೆ ಭಾಸವಾಗುವದು. ಆ ಸರೋವರಕ್ಕೆ ಪ್ರತಿದಿನ ಸೂರ್‍ಯಾಸ್ತ ಸಮಯಕ್ಕೆ ನೀರನ್ನು ಕುಡಿಯಲುಬಂದ ಸಣ್ಣ, ದೊಡ್ಡ, ಅತಿ ದೊಡ್ಡ ಕಪಿಗಣಗಳನ್ನು ನಿರೀಕ್ಷಿಸಲು ನಿಮಗೆ ಅತ್ಯಂತ ಕೌತುಕವಾಗುವದು. ಹಾಗು ಆ ಸರೋವರದಲ್ಲಿ ಕ್ರೀಡೆಗಾಗಿ ಬರುವ ಆನೆ—ಆನೆಮರಿಗಳ ಗುಂಪುಗಳ ಗಂಭೀರದೃಶ್ಯದಿಂದ ಆ ಸರೋವರದ ಮಹತ್ತರತೆಯು ನಿಮಗೆ ಕಂಡು ನಿಮ್ಮಲ್ಲಿ ಕಾರ್‍ಯತತ್ಪರತೆಯುಂಟಾಗುವದು. ಇಂಥ ಈ ದಿವ್ಯ ಸರೋವರದ ದರ್ಶನದಿಂದ ರಾಮಚಂದ್ರ, ನಿನ್ನ ದುಃಖವು ಸ್ವಲ್ಪ ಕಡಿಮೆಯಾಗಬಹುದು. ಅಲ್ಲಿಂದ ತುಸು ಮುಂದಕ್ಕೆ ಹೋಗುವ ಷ್ಟರಲ್ಲಿ ನಿಮಗೆ ಮತಂಗಋುಷಿಯ ಆಶ್ರಮವು ಹತ್ತುವದು. ಅವರು ಮೊದಲು ಅಲ್ಲಿ ತಪಸ್ಸನ್ನಾಚರಿಸುತ್ತಿದ್ದರು; ಆಗ ಅವರ ಶಿಷ್ಯರು

ದಿನಾಲು ಅಡವಿಯಲ್ಲಿ ಹೋಗಿ ವನ್ಯಪದಾರ್ಥಗಳನ್ನು ಹೊತ್ತು ಕೊಂಡು ತರುತ್ತಿದ್ದರು. ಭಾರಹೊತ್ತು ದಣಿದ ಅವರ ಮೈಯಿಂದ ಧಾರೆಗಟ್ಟಿ ಸುರಿಯುತ್ತಿದ್ದ ಬೆವರನೀರಿನಿಂದ ಆಶ್ರಮದ ನೆಲವೆಲ್ಲ ತೊಯ್ದು ಅಲ್ಲಿ ಮೇಲ್ತರದ ಪುಷ್ಪಸಂಕುಳಗಳು ಉತ್ಪನ್ನವಾಗಿರು ವವು. ಆ ಹೂವುಗಳು ಎಂದೂ ಕುಂದಿಲ್ಲ ಕಂದಿಲ್ಲ; ಅಂಥ ಆ ಆಶ್ರಮ ವನ್ನು ಕಂಡರೆ ನಿಮಗೆ ಅತಿ ಹರುಷವಾಗುವದು. ಈಗಲೂ ಅಲ್ಲಿ ಮತಂಗಋಷಿಯ ವೃದ್ಧಸೇವಿಕೆಯಾದ ಶಬರಿಯೆಂಬಾಕೆಯು ,ನಿಮ್ಮ ಮಾರ್ಗ ನಿರೀಕ್ಷಿಸುತ್ತಲಿರುವಳು. ಪಂಪಾಸರೋವರದ ಪೂರ್ವಕ್ಕಿ ರುವ ಋಷ್ಯಮೂಕ ಪರ್ವತದ ಒಂದುಗವಿಯಲ್ಲಿ ಸುಗ್ರೀವನ ವಾಸ ಸ್ಥಳವಿದೆ. ಅವನ ಅಣ್ಣ ವಾಲಿ ಎಂಬಾತನು ಅವನನ್ನು ಕಿಷ್ಕಿಂಧೆ ಯಿಂದ ಓಡಿಸಿ ತಾನೇ ಅಲ್ಲಿಯ ಅರಸನಾಗಿರುವನು. ಆ ವಾಲಿಯ ಭಯದಿಂದಲೇ ಸುಗ್ರೀವನು ಅಲ್ಲಿ ಬಂದು ಯಾವಾಗಲೂ ತಾನಿರುವ ಗುಹೆಯ ಬಾಗಿಲನ್ನು ದೊಡ್ಡದಾದಕಲ್ಲು ಆನಿಸಿ ಮುಚ್ಚಿಕೊಂಡು ಒಳಗೇ ಇರುತ್ತಾನೆ. ಆದರೂ ಅವನು ಕೆಲವೊಂದುಸಾರೆ ತನ್ನ ನಾಲ್ವರು ಗೆಳೆಯರೊಂದಿಗೆ ಆ ಪರ್ವತದ ಶಿಖರದಮೇಲೆ ಬಂದು ಕುಳಿತು ವಿಶ್ರಮಿಸುವನು. ರಾಮಚಂದ್ರ; ನೀವು ಅವನನ್ನು ಕಂಡು ದಾದರೆ ಅವನ ಸಹಾಯ-ಸಹಕಾರಗಳಿಂದ ನಿಮ್ಮ ಕೆಲಸ ಸುಗಮ ವಾಗುವದು” ಎಂದು ಹೇಳಿ ಕಬಂಧರಕ್ಕಸನು ದಾನವ ಲೋಕಕ್ಕೆ ನಮನಿಸಿದನು.

ಮುಂದೆ ರಾಮ—ಲಕ್ಷ್ಮಣರು ಕಬಂಧನ ಹೇಳಿಕೆಯಂತೆ ಪಂಪಾಸರೋವರಕ್ಕೆ ಬಂದು ತಲುಪಿದರು. ಅದರ ಪಶ್ಚಿಮದಂಡೆಯ ಲ್ಲಿರುತ್ತಿರುವ ಮತಂಗನ ಆಶ್ರಮಕ್ಕೆ ಬಂದಕೂಡಲೆ ಅಲ್ಲಿದ್ದ ಶಬರಿಯು ಮುಂದೆಬಂದು ಕೈಜೋಡಿಸಿ ಸಾಷ್ಟಾಂಗವೆರಗಿ ಅವರನ್ನು ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿದಳು. ಮತ್ತು ಉತ್ತಮೋತ್ತಮವಾದ

ಹಣ್ಣು — ಹಂಪಲಗಳನ್ನು ಅವರಮುಂದಿಟ್ಟು "ಹೇ ರಾಮಚಂದ್ರನೇ, ನೀನು ಚಿತ್ರಕೂಟಕ್ಕೆ ಬಂದ ಸುದ್ದಿಯು ಈ ಮೊದಲೇ ನಮಗೆ ತಿಳಿದಿತ್ತು. ಅಂದಿನಿಂದ ನಾನು ತಮ್ಮ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತಿರುವೆನು. ಇನ್ನು ನಾನು ನಿಮ್ಮ ದರ್ಶನದಿಂದ ಉತ್ತಮ ಗತಿಯನ್ನು ಹೊಂದುವೆನು. ಈ ಆಶ್ರಮದಲ್ಲಿ ನನ್ನ ಗುರುಗಳಾದ ಮತಂಗಋಷಿಗಳ ವಾಸವಿತ್ತು; ಇಲ್ಲಿಯೇ ಅವರು ತಪಸ್ಸನ್ನಾಚರಿಸಿ ದಿವ್ಯಲೋಕವನ್ನು ಪಡೆದರು. ಇಂಥ ಈ ಪವಿತ್ರ ಆಶ್ರಮಕ್ಷೇತ್ರದಲ್ಲಿ ಎಂದಿಗೂ ಕಂದಿಕುಂದದ ಪ್ರಫುಲ್ಲಿತ ಕುಸುಮಗಳಿರುತ್ತವೆ" ಎಂದು ಆ ಹೂವುಗಳನ್ನು ರಾಮಚಂದ್ರನಿಗೆ ತೋರಿಸಿದಳು. ತರುವಾಯ ಶಬರಿಯು ತನಗಾಗಿ ಒಂದು ಚಿತೆಯನ್ನು ರಚಿಸಿ ಅದರಲ್ಲಿ ತನ್ನ ದೇಹವನ್ನು ಚಲ್ಲಿ ಅಗ್ನಿನಾರಾಯಣನಿಗೆ ಅರ್ಪಿಸಿ ಸದ್ಗತಿಯನ್ನು ಹೊಂದಿದಳು.

ಮುಂದೆ ರಾಮ-ಲಕ್ಷ್ಮಣರು ಪಂಪಾತೀರದ ಪೂರ್ವದ ನಿಟ್ಟಿನಿಂದ ಸಾಗಿ ಆ ಸರೋವರದ ಮನಹರ ಶೋಭೆಯನ್ನು ಕಾಣುತ್ತ ಮುಂದುವರಿದರು. ಆಗ ವಸಂತಮಾಸವು ಪ್ರಾಪ್ತವಾದುದರಿಂದ ಗಿಡ-ಬಳ್ಳಿಗಳು ಅಲ್ಲಲ್ಲಿ ಫಲ-ಪುಷ್ಪಗಳಿಂದ ತುಂಬಿದ್ದವು. ಅಗರು, ಮಲ್ಲಿಗೆ, ಜಾಜಿ, ಸಂಪಿಗೆ ಮೊದಲಾದ ಹೂಗಳ ಸುವಾಸನೆಯು ಎಲ್ಲ ಕಡೆಯಲ್ಲಿಯೂ ಹರಡಿತ್ತು. ಅಲ್ಲಿಯ ಆ ಸೊಬಗು ಎಂಥ ರಸಿಕನಲ್ಲದವನನ್ನು ಕೂಡ ಮನಾಹ್ಲಾದಗೊಳಿಸದೆ ಬಿಡುತ್ತಿರಲಿಲ್ಲ. ಹೀಗಿದ್ದರೂ ಶ್ರೀರಾಮಚಂದ್ರನು ವಸಂತಋತುವಿನ ವನಶ್ರೀಯ ಸೊಬಗನ್ನು ಸವಿಯದಾದನು. ಸೀತಾವಿರಹದ ಸಂತಾಪವು ಅವನಲ್ಲಿ ಮತ್ತಿಷ್ಟು ಒತ್ತರಿಸಿತು. ಆಗ ಆತನು ಲಕ್ಷ್ಮಣನನ್ನು ಕುರಿತು:— "ಲಕ್ಷ್ಮಣ! ನೋಡಿದೆಯಾ ಈ ಗಿಡ-ಬಳ್ಳಿಗಳ ಸೊಬಗನ್ನು. ಮೋಡಗಳು ಮಳೆಹನಿಗಳನ್ನು ಉದುರಿಸುವಂತೆ ಈ ಮರ-ಗಿಡಗಳು ನಾಲ್ಕೂ ನಿಟ್ಟುಗಳಿಂದ

ಹೂಮಳೆಗರೆಯುತ್ತಿರುವವು. ಆದರಿಂದ ಈ ಪ್ರದೇಶದ ನೆಲದ ಮೇಲೆಲ್ಲ ಹೂವಿನ ಹಾಸುಗೆಯನ್ನೇ ಹಾಸಿದಂತೆ ತೋರುತ್ತಿರುವದು. ಈ ವಾಯುವುಸಹ ಆ ಹೂಗಳೊಡನೆ ಸರಸವಾಡುತ್ತ ಅವನ್ನು ಅತ್ತಿಂದಿತ್ತ, ಇತ್ತಿಂದತ್ತ ತೂರಿ, ಹಾರಿಸಿ, ಆಡಿಸುತ್ತಿರುವನು. ಆ ಮಂಜುಳದನಿಯ ಕೋಕಿಲೆಗಳು ಇಂಪಾದ ತಮ್ಮ ಪಂಚಮಸ್ವರದಿಂದ ಶೋಕಾರ್ತರ ಮನಸ್ಸನ್ನುಸಹ ಆಹ್ಲಾದಗೊಳಿಸುತ್ತಿರುವವು. ಆಕಡೆಗೆ ಸೋಗೆ ನವಿಲುಗಳು ತಮ್ಮ ಗರಿಗಣ್ಣುಗಳನ್ನು ತೆರೆದು ಮನವಾರೆ ತಣಿದು ಆನಂದದಿಂದ ಕುಣಿಯುತ್ತಿರುವವು. ಲಕ್ಷ್ಮಣ! ಇಂಥ ಈ ವಸಂತಮಾಸದ ಅನುಪಮ ಶೃಂಗಾರ-ಶೋಭೆಯು ನನ್ನ ಕಣ್ಣನ್ನು ಕುಕ್ಕಿದರೂಕೂಡ ನನ್ನ ಮನಸ್ಸು ವಿರಹಾಗ್ನಿಯಲ್ಲಿ ಬಿದ್ದು ದಗ್ಧವಾಗ ಹತ್ತಿದೆ. ಹಾಯ್! ಹಾಯ್!" ಎಂದು ನುಡಿದು ಕೆಲನಿಮಿಷ ಮೌನತಾಳಿದನು.

ಅಣ್ಣನ ವಿಪರೀತಾವಸ್ಥೆಯನ್ನು ಕಂಡು ಲಕ್ಷ್ಮಣನು ಏನೋ ನುಡಿಯಬೇಕೆನ್ನುವಷ್ಟರಲ್ಲಿ ಶ್ರೀರಾಮನು ಪುನಃ ಲಕ್ಷ್ಮಣನನ್ನು ಕಂಡು "ಲಕ್ಷ್ಮಣ! ನನ್ನ ಸೀತೆ ಎಲ್ಲಿರುವಳು? ನಾನು ಪಿತೃವಚನ ಪರಿಪಾಲನೆ ಗಾಗಿ ರಾಜ್ಯ ತ್ಯಜಿಸಿ ಅರಣ್ಯ ಸೇರಿದರೂಕೂಡ ಆ ನನ್ನ ಸತಿಯು ನೆರಳಿನಂತೆ ನನ್ನನ್ನು ಹಿಂಬಾಲಿಸಿದಳು. ಇಂದು ಆ ನನ್ನ ಪ್ರಿಯಳು ಎಲ್ಲಿರುವಳು? ಕಮಲಮುಖಿಯುವಳ ನಯನಗಳು ಕಮಲದೆಸಳಿನಂತೆ ಶೋಭಿಸುತ್ತಿದ್ದವು. ಅವಳು ಯಾವಾಗಲೂ ನನ್ನೊಡನೆ ಮಂದ— ಹಾಸದಿಂದ ನಗುತ್ತ ಮಧುರಭಾಷಣಗಳನ್ನಾಡುತ್ತ ನನ್ನನ್ನು ಆನಂದ ಗೊಳಿಸುತ್ತಿದ್ದಳು. ಅಂಥ ನನ್ನ ಅರ್ಧಾಂಗಿಯನ್ನು ಕಳೆದುಕೊಂಡು ಇನ್ನು ನಾನು ಹೇಗೆ ಜೀವಿಸಲಿ?" ಎಂದು ಪ್ರಲಾಪಿಸುತ್ತ ಕುಳಿತನು.

ಆಗ ಲಕ್ಷ್ಮಣನು "ಅಣ್ಣಾ, ಶೋಕಕ್ಕೆ ಅವಸರವನ್ನೀಯ ಬೇಡ. ರಾವಣನು ಪಾತಾಳದಲ್ಲಿದ್ದರೂಕೂಡ ಇನ್ನು ಅವನು ಜೀವದಿಂದ ಬದುಕಲಾರನು; ನಾವು ಧೈರ್ಯದಿಂದ ಆತನನ್ನು ಹುಡುಕುವ ಯೋಚನೆಯನ್ನು ಮಾಡಬೇಕು. ಧೈರ್ಯದಿಂದಲೇ ಮನುಷ್ಯನಿಗೆ ಬಲವು ಹೆಚ್ಚುತ್ತದೆ. ಅಂಥವನಿಗೆ ಯಾವ ಕೆಲಸವೂ ಅಸಾಧ್ಯವೆನಿಸಲಾರದು" ಎಂದು ಹೇಳಿದನು. ಲಕ್ಷ್ಮಣನ ಈ ಸಾಹಸದ ಮಾತನ್ನು ಕೇಳಿ ರಾಮಚಂದ್ರನು ಶೋಕ-ಮೋಹಗಳನ್ನು ಬದಿಗೊತ್ತಿ ಎದ್ದುನಿಂತು ಅಲ್ಲಿಂದ ಋಷ್ಯಮೂಕಪರ್ವತದಲ್ಲಿರುವ ಸುಗ್ರೀವನನ್ನು ಕಾಣಲು ಹೊರಟರು.

ಪಂಪಾಸರೋವರದ ಪೂರ್ವದಂಡೆಯಮೇಲಿರುವ ಋಷ್ಯಮೂಕಪರ್ವತದಕಡೆಗೆ ಬರುತ್ತಿರುವ ಆ ಧನುರ್ಧಾರಿಗಳಾದ ತರುಣರೀರ್ವರನ್ನು ದೂರದಿಂದಲೇ ಕಂಡು ಸುಗ್ರೀವನು ಮನದಲ್ಲಿ ಯೋಚಿಸಿ "ಇವರು ತಮ್ಮ ಶತ್ರುಗಳಾಗಿರಬಹುದೇ? ಇಲ್ಲವಾದರೆ ನಮ್ಮ ಅಣ್ಣ-ತಮ್ಮಂದಿರ ವ್ಯಾಜ್ಯದ ಮಧ್ಯಸ್ಥಿಕೆಗಾಗಿ ಯಾರಾದರೂ ಆ ವಾಲಿಯಿಂದ ಪ್ರೇಷಿತರಾಗಿ ಬಂದಿರಬಹುದೇ? ಹೀಗೆ ಹಲವುಬಗೆಯಿಂದ ಅನುಮಾನಿಸಿ ಕೊನೆಗೆ ತನಗುಂಟಾದ ಸಂಶಯವನ್ನು ಉಳಿದ ಗೆಳೆಯರಮುಂದೆ ತಿಳಿಸಿದನು. ಆಕೂಡಲೆ ಅವರಲ್ಲಿ ಅಗ್ರಗಣ್ಯನಾದ ಹನುಮನೆಂಬವನು ಮುಂದೆ ಬಂದು:— "ಕಪಿವರ! ಇದು ಮಲಯಗಿರಿಯ ಒಂದು ಭಾಗವಾಗಿದೆ. ಇಲ್ಲಿ ಆ ವಾಲಿಯು ಬರುವ ಭಯವೇ ಇರುವದಿಲ್ಲ" ಎಂದು ನುಡಿಯಲು ಸುಗ್ರೀವನು "ಹಾಗಾದರೆ ಧನುಷ್ಯ—ಬಾಣಗಳನ್ನು ಧರಿಸಿ ದೇವತೆಗಳಂತೆ ತೋರುತ್ತಿರುವ ಅತಿ ಬಲಾಢ್ಯರಾದ ಆ ತರುಣರು ಇತ್ತಕಡೆಗೆ ಬರುವ ಕಾರಣವೇನು? ಹನುಮ! ನೀನು ಅವರೆದುರು ಹೋಗಿ ಅವರನ್ನು ಮಾತನಾಡಿಸಿ

ಅವರು ಬಂದ ಕಾರ್ಯದ ಉದ್ದೇಶವನ್ನು ತಿಳಿದುಕೊಂಡು ಬರಬೇಕು" ಎಂದು ಆಜ್ಞಾಪಿಸಿದನು.

ಸುಗ್ರೀವನಿಂದ ಕಳಿಸಲ್ಪಟ್ಟ ಹನುಮಂತನು ಅಲ್ಲಿಂದ ಹೊರಟು ತನ್ನ ಕಪಿರೂಪವನ್ನು ಬಿಟ್ಟು ಭಿಕ್ಷುಕನ ವೇಷ ಧರಿಸಿ ರಾಮ-ಲಕ್ಷ್ಮಣರಿದ್ದಲ್ಲಿಗೆ ಬಂದನು. ಹಾಗು ಅವರ ಮನಹರವಾದ ರೂಪಗಳನ್ನು ಕಂಡು ಸಾಷ್ಟಾಂಗವಾಗಿ ನಮಸ್ಕರಿಸಿ:— "ದೇವತೆಗಳಂತೆ ತೋರುತ್ತಿರುವ ನೀವು ಯಾರು? ಮುನಿಕುಮಾರರಂತೆ ತೋರುತ್ತಿರುವ ನಿಮ್ಮ ಈ ಸ್ವರೂಪವನ್ನು ಕಂಡು ಇಲ್ಲಿಯ ವನ್ಯಮೃಗಗಳೂ, ಇತರ ಪ್ರಾಣಿಗಳೂ, ಭಯಗ್ರಸ್ತವಾಗಿವೆ. ಈ ಪರ್ವತದಲ್ಲಿ ಸುಗ್ರೀವನೆಂಬ ಕಪಿವರನು ವಾಸಿಸಿರುವನು. ಆತನ ಅಣ್ಣನಾದ ವಾಲಿಯು ಆತನನ್ನು ಸ್ವದೇಶದಿಂದ ತಳ್ಳಿದ್ದರಿಂದ, ಅತಿ ದುಃಖದಿಂದ ಆತನು ಇಲ್ಲಿ ಕಾಲ ಕಳೆಯುತ್ತಿರುವನು. ಆ ಸುಗ್ರೀವನ ಆಜ್ಞೆಯಿಂದಲೇ ನಾನು ನಿಮ್ಮನ್ನು ಎದುರ್ಗೊಳ್ಳಲು ಬಂದಿರುವೆನು. ಆತನಿಗೆ ತಮ್ಮ ಸಂಗಡ ಸಖ್ಯವನ್ನು ಬೆಳೆಸುವ ಪ್ರಬಲೇಚ್ಛೆಯಿದೆ; ನಾನು ವಾಯುಪುತ್ರನಾದ ಹನುಮನು. ಸುಗ್ರೀವನ ಸಚಿವನು;" ಎಂದು ಹೇಳಿದನು. ಆಗ ರಾಮಚಂದ್ರನು; "ಲಕ್ಷ್ಮಣಾ, ನೋಡು ಯಾವ ಸುಗ್ರೀವನ ಸಖ್ಯತ್ವವನ್ನು ನಾವು ಬಯಸುತ್ತಿದ್ದೆವೋ ಆ ಸುಗ್ರೀವನ ಕಡೆಯಿಂದಲೇ ಈತನು ಬಂದಿರುವನು. ಇವನು ಎಷ್ಟು ತೇಜಸ್ವಿಯಾಗಿರುವನು? ಇವನ ಆಚರಣೆಯು ಎಷ್ಟು ಶುದ್ಧವಾಗಿರುವದು! ಈತನ ನಯ-ಮಧುರವಾದ ಭಾಷಣಗಳನ್ನು ಕೇಳಿದರೆ ಸಂಸ್ಕೃತಿಯಿಂದ ಸಂಕಷ್ಟಕ್ಕೊಳಗಾದ ಮಾನವನಿಗೂ ಕೂಡ ಸಮಾಧಾನವಾಗುವದರಲ್ಲೇನು ಆಶ್ಚರ್ಯ?" ಎಂದು ಹೇಳಿದನು. ಆಗ ಲಕ್ಷ್ಮಣನು ಮುಂದೆ ಬಂದು "ಹೇ, ವಾಯುಪುತ್ರಾ, ನಾವು ಸುಗ್ರೀವನ ಗುಣಗಳನ್ನು ಮೊದಲೇ ಕೇಳಿರು

ವೆವು ಅಂತೆಯೇ ಆತನ ಗೆಳೆತನವನ್ನು ನಾವು ಬಯಸಿ ಇಲ್ಲಿಗೆ ಬಂದಿರುವೆವು '' ಎಂದು ಹೇಳಿದನು.

ಆ ಬಳಿಕ ಹನುಮಂತನು '' ಪೂಜ್ಯರೆ ನೀವು ವನವಾಸವಾಗಿ ರುವ ಕಾರಣವೇನು ? ಇದನ್ನು ನನಗೆ ತಿಳಿಸಬೇಕು '' ಎಂದು ಕೇಳಿ ದನು. ಆಗ ಲಕ್ಷ್ಮಣನು, '' ಎಲೈ ಹನುಮಂತನೇ, ಇವನು ಅಯೋಧ್ಯೆಯ ಧರ್ಮಪ್ರಿಯನಾಗಿದ್ದ ದಶರಥಮಹಾರಾಜನ ಜ್ಯೇಷ್ಠಪುತ್ರ ರಾಮಚಂದ್ರನು; ಪಿತೃವಚನವನ್ನು ಪಾಲಿಸುವದಕ್ಕಾಗಿ ಇವನೊಡನೆ ನಾನೂ ಸೀತೆಯೂ ದಂಡಕಾರಣ್ಯಕ್ಕೆ ಬಂದೆವು. ನಾವು ಪಂಚವಟಿ ಯಲ್ಲಿರುತ್ತಿರಲು ಒಂದುದಿನ ಮೃಗಯಾರ್ಥವಾಗಿ ಆಶ್ರಮವನ್ನು ಬಿಟ್ಟು ಸ್ವಲ್ಪ ಮುಂದಕ್ಕೆ ಹೋದೆವು. ಅಷ್ಟರಲ್ಲಿ ರಾವಣನೆಂಬ ರಾಕ್ಷಸನು ಅಲ್ಲಿಗೆ ಬಂದು ಕಳ್ಳತನದಿಂದ ರಾಮಚಂದ್ರನ ಪತ್ನಿಯಾದ ಸೀತೆಯನ್ನು ಅಪಹರಿಸಿಕೊಂಡು ಹೋದನು. ಆತನನ್ನು ಹುಡುಕುತ್ತ ನಾವು ಇಲ್ಲಿಗೆ ಬಂದಿರುವೆವು. ಸುಗ್ರೀವನ ಸಹಾಯದಿಂದ ನಮ್ಮ ಕಾರ್ಯವು ಕೈಗೂಡುವದೆಂದು ಭಾವಿಸಿ ನಾವು ಆತನ ದರ್ಶನಾಪೇಕ್ಷಿ ಗಳಾಗಿ ಇಲ್ಲಿಗೆ ಬಂದಿರುವೆವು. ದಶರಥ ಪುತ್ರನಾದ ಈ ರಾಮ ಚಂದ್ರನು ಎಲ್ಲ ಜನರಿಗೂ ವಂದ್ಯನಾಗಿರುವನು. ಆತನೇ ಇಂದು ಸುಗ್ರೀವನ ಸಖ್ಯತ್ವವನ್ನು ಬಯಸುತ್ತಿರುವನು '' ಎಂದು ಕಣ್ಣೀರನ್ನು ಸುರಿಸುತ್ತ ಮಾತನಾಡಿದನು. ಆಗ ಹನುಮಂತನು ಅತಿ ಪ್ರೇಮ ದಿಂದ '' ಎಲೈ ರಾಜಪುತ್ರರೇ, ನಮ್ಮ ಸುಗ್ರೀವನಾದರೂ ಈ ದೃಷ್ಟಿ ಯಿಂದ ನಿಮಗೆ ಸಮದುಃಖಿಯಾಗಿರುವನು ಅಂತೆಯೇ ಅವನು ಈ ವನದಲ್ಲಿ ವಾಸಿಸುತ್ತಿರುವನು. ಅವನು ನಿಮ್ಮ ಸಂಗತಿಯನ್ನು ತಿಳಿದು ನಿಶ್ಚಿತವಾಗಿ ಸಹಾಯ ಮಾಡುವನು '' ಎಂದು ಹೇಳಿ ತನ್ನ ನಿಜ

ರೂಪವನ್ನು ಧರಿಸಿ ರಾಮನ ಪಾದಗಳಿಗೆ ಸಾಷ್ಟಾಂಗವೆರಗಿದನು. ಬಳಿಕ ರಾಮ—ಲಕ್ಷ್ಮಣರೀರ್ವರನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ನಡೆವನು. ಋಷ್ಯಮೂಕಪರ್ವತವನ್ನು ದಾಟಿ ಅಲ್ಲಿಂದ ಮಲಯಪರ್ವತದಲ್ಲಿ ಸುಗ್ರೀವಸಿದ್ದೆಡೆಗೆ ಅವರನ್ನು ತಂದಿಳಿಸಿದನು.



ಪಂಪಾತೀರದಲ್ಲಿ ಶ್ರೀರಾಮ-ಹನುಮರ ಭೆಟ್ಟಿ

ಹಾಗು ತಾನು ಮುಂದೆ ಹೋಗಿ ಸುಗ್ರೀವನಿಗೆ ಶ್ರೀರಾಮಚಂದ್ರನ ಪರಿಚಯ ಮಾಡಿಕೊಟ್ಟು ಅವರ ನಿಜ ಸಂಗತಿಯನ್ನು ತಾನು ಕೇಳಿದಂತೆ ಎಲ್ಲವನ್ನೂ ಅರುಹಿದನು.

ಇದಾದಬಳಿಕ ಸುಗ್ರೀವನು ಸುಂದರವಾದ ರೂಪವನ್ನು ಧರಿಸಿ ರಾಮನಬಳಿಗೆ ಬಂದು ಅತಿ ಪ್ರೇಮದಿಂದ ದೃಢಾಲಿಂಗನವನ್ನು ಕೊಟ್ಟು "ಹೇ ರಾಮಚಂದ್ರನೇ, ನೀನು ನನ್ನ ಗೆಳೆತನವನ್ನು ಅಪೇಕ್ಷಿಸುವಂತೆ ನಾನೂ ನಿನ್ನ ಸಹಕಾರವನ್ನು ಕೋರುವೆನು" ಎಂದು ಸಹೃದಯದಿಂದ ನುಡಿದು ತನ್ನ ಹಸ್ತವನ್ನು ಮುಂದೆ ನೀಡಿದನು. ಕೂಡಲೆ ಶ್ರೀರಾಮಚಂದ್ರನು ಆತನ ಹಸ್ತಾಂದೋಲನವನ್ನು ಮಾಡಿ ಅನ್ಯೋನ್ಯ ಮಿತ್ರತ್ವವನ್ನು ದೃಢೀಕರಿಸಿದನು. ಈ ರೀತಿಯಾಗಿ ಶ್ರೀರಾಮಚಂದ್ರನು ಸುಗ್ರೀವನ ಸಖ್ಯತ್ವವನ್ನು ಬೆಳಿಸಿದನು.

## ೧೬. ವಾಲಿಯ ವಧ

ಸುಗ್ರೀವನು ಬಳಿಕ ಶ್ರೀರಾಮಚಂದ್ರನನ್ನು ಕುರಿತು– "ಹೇ ರಾಮಚಂದ್ರನೇ, ರಾವಣನು ಸೀತೆಯನ್ನು ಒಯ್ಯುತ್ತಿರುವಾಗ ಇಲ್ಲಿಯೇ ಇದ್ದ ನಾವು ಆಕೆಯನ್ನು ಕಂಡೆವು. ಆಗ ಅವಳು ಅತಿ ದುಃಖದಿಂದ 'ಹೇ ರಾಮಾ, ಹಾ! ಲಕ್ಷ್ಮಣಾ' ಎಂದು ಒಂದೇ ಸವನೆ ನಿಮ್ಮನ್ನು ಸಂಬೋಧಿಸುತ್ತಿದ್ದಳು. ರಾವಣನು ಆಕಾಶ ಮಾರ್ಗದಲ್ಲಿ ಗಮನಿಸುತ್ತಿರುವಾಗ ಸೀತಾಮಾತೆಯು ನಮ್ಮನ್ನು ಅಲ್ಲಿಂದಲೇ ನಿರೀಕ್ಷಿಸಿ ತನ್ನ ಉತ್ತರೀಯ ವಸ್ತ್ರದಲ್ಲಿ ಕೆಲವು ಅಲಂಕಾರಗಳನ್ನು ಕಟ್ಟಿ ಆ ಗಂಟನ್ನು ನಾವು ಕುಳಿತಲ್ಲಿ ಬೀಳುವಂತೆ ಚಲ್ಲಿದಳು. ಅದನ್ನು ನಾವು ತೆಗೆದುಕೊಂಡು ಇಲ್ಲಿಯೇ ಜತನದಿಂದ ಕಾದಿಟ್ಟಿರುವೆವು" ಎಂದು ಆ ಗಂಟನ್ನು ತಂದು ಶ್ರೀರಾಮನ ಮುಂದೆ ಇರಿಸಿದನು. ಕೂಡಲೆ ರಾಮಚಂದ್ರನು ಆ ಸೀತಾದೇವಿಯ ಉತ್ತರೀಯವಿದೆಂದು ಗುರುತಿಸಿ ಅದನ್ನು ಬಿಚ್ಚಿ ಅದರಲ್ಲಿದ್ದ ಆಕೆಯ ಆಭರಣಗಳನ್ನು ಕೈಯಲ್ಲಿ ತೆಗೆದುಕೊಂಡು 'ಹಾ! ಸೀತೆ ಹಾ! ಪ್ರಿಯೆ' ಎನ್ನುತ್ತ ಹಲುಬಿ

ಭೂಮಿಗೆ ಒರಗಿದನು. ಆತನ ಶೋಕವು ಆವರಿಸದಂತಾಗಿ ತಮ್ಮ ನನ್ನು ಕುರಿತು— " ಲಕ್ಷ್ಮಣ! ಈ ಅಲಂಕಾರಗಳನ್ನು ನೋಡಿದಿಯಾ! ಎಂದು ಕೇಳಿದನು. ಆಗ ಆತನು— ' ನಾನು ಈ ಕೇಯೂರ-ಕುಂಡಲ ಗಳನ್ನು ನೋಡಿರಲಿಲ್ಲ. ಕೇವಲ ಸೀತಾಮಾತೆಯ ಪಾದಗಳಲ್ಲಿಯ 'ನೇವುರ' ಗಳನ್ನಷ್ಟೇ ಗುರುತಿಸಬಲ್ಲೆನು' ಎಂದು ಹೇಳಿದನು. ಆಗ ಶ್ರೀರಾಮನು " ಸುಗ್ರೀವ ! ಆ ರಾಕ್ಷಸನು ಯಾವ ನಿಟ್ಟಿಗೆ ಹೋದನು ? " ಸುಗ್ರೀವನು— " ಹೇ ರಾಮಚಂದ್ರನೇ. ಆ ನೀಚ ರಾಕ್ಷಸನ ವಿಷಯವಾಗಿ ನಾನು ಏನೊಂದು ಸಂಗತಿಯನ್ನರಿಯೆನು. ಆದರೆ ನೀವು ಮಾತ್ರ ಧೈರ್ಯದಿಂದಿರಬೇಕು. ಆ ರಾಕ್ಷಸನು ಎಲ್ಲಿದ್ದರೂ ಅವನನ್ನು ನಾವು ಗೊತ್ತು ಹಚ್ಚದೆ ಬಿಡಲಾರೆವು. ನೀವು ಮಾತ್ರ ಶೋಕಿಸಬೇಡಿರಿ. ಎಂಥವನಾದರೂ ಅತಿ ಶೋಕದಿಂದ ನಿಸ್ತೇಜನೂ, ನಿರುತ್ಸಾಹಿಯೂ ಆಗುವನು. ಕಾರಣ ನೀವು ಶಾಂತ ರಾಗಿರಿ." ಎಂದು ಹೇಳಿದನು.

ಸುಗ್ರೀವನ ಸಾಂತ್ವನ ಪರವಾದ ಭಾಷಣಗಳಿಂದ ಶ್ರೀರಾಮ ಚಂದ್ರನು ಮನಸ್ಸಿನ ವೈಕಲ್ಯಭಾವವನ್ನು ಮರೆಮಾಜಿದನು. ಕಣ್ಣೊರಸಿಕೊಂಡು ಪ್ರಸನ್ನವದನನಾದನು. ಚಿತ್ತವೃತ್ತಿಯನ್ನು ಸರಿಪಡಿಸಿಕೊಂಡು ಸುಗ್ರಿವನನ್ನು ಅಪ್ಪಿಕೊಂಡು—" ಸುಗ್ರೀವ! ಸ್ನೇಹತ್ವಭಾವನೆಯಿಂದ ಎಸಗುವ ಕರ್ತವ್ಯವನ್ನು ಕೈಕೊಂಡಿರುವಿ, ನಿನ್ನಂಥ ಮಿತ್ರನು ಈ ಸಂಕಟ ಸಮಯದಲ್ಲಿ ನನಗೆ ಸಿಕ್ಕಿದುದು ಕೇವಲ ನನ್ನ ಗತ ಜನ್ಮದ ಸುಕೃತವೆಂದೇ ಭಾವಿಸುವೆ. ಅದಿರಲಿ, ಸುಗ್ರೀವ ! ಇನ್ನು ನನ್ನದೊಂದು ಕರುಳಿನ ಮಾತನ್ನು ಕೇಳು! ನಿನ್ನ ನಿಮಿತ್ತನಾಗಿ ನಾನು ಕೈಕೊಳ್ಳುವ ಕರ್ತವ್ಯವೇನು. ? ಇದನ್ನು ಹೃದಯ ಬಿಚ್ಚಿ ತಿಳಿಸಬೇಕು. ಮಿತ್ರತ್ವದಲ್ಲಿ ಅನುಮಾನಕ್ಕಾಸ್ಪದವಿರಕೂಡದು. ಉಪ

ಕೃತಿಯಿಂದ ಕೆಳೆತನವೂ ಅಪಕೃತಿಯಿಂದ ಹಗೆತನವೂ ಸ್ಥಿರತೆ ಪಡೆಯುವವು." ಎಂದು ನುಡಿದನು.

ತನಗಾದ ಅಪಮಾನವನ್ನು ಅನ್ಯರಲ್ಲಿ ಉಸುರುವದೆಂದರೆ ಅದೊಂದು ಸಂಕಟವು. ಇಷ್ಟೇ ಅಲ್ಲ, ಅದರಿಂದ ತನಗಿದ್ದ ಮರ್ಯಾದೆಗೆ ಕುಂದುಂಟಾಗುವದೆಂಬ ತಿಳುವಳಿಕೆಯೂ ಬಹುಜನರಲ್ಲಿರುವದು. ಆದರೆ ಸ್ನೇಹತ್ವದಲ್ಲಿ ಮಾತ್ರ ಇದಾವದಕ್ಕೂ ಆಕ್ಷೇಪಬರಲಾರದು. ಈ ವಿಚಾರವು ಸುಗ್ರೀವನಲ್ಲಿ ರಾಮಚಂದ್ರನ ಸಹೃದಯ ವಾಕ್ಯಗಳಿಂದ ಉದ್ಭೂತವಾಗಿ ತನ್ನನ್ನುವಾಲಿಯು ಕಡೆಗಣಿಸಿದ ಸಂಗತಿಯೆಲ್ಲವನ್ನೂ ಅವನ ಮುಂದೆ ಹೇಳಹತ್ತಿದನು. ವಾಲಿಯು ತನ್ನನ್ನು ಪ್ರಿಯಪತ್ನಿ ರುಮೆಯಿಂದ ಅಗಲಿಸಿ ಕಿಷ್ಕಿಂಧೆಯಿಂದ ಹೊರೆದೂಡಿದ್ದನ್ನೂ ತಾನು ತನ್ನ ಜೀವನ್ಮಿತ್ರ ಹನುಮಾನ್ ಮೊದಲಾದ ನಾಲ್ವರೊಡನೆ ಅಜ್ಞಾತವಾಗಿ ಹಾಗು ಭಯಯುಕ್ತರಾಗಿ ಈ ಪರ್ವತದ ಗುಹೆಯಲ್ಲಿ ವಾಸವಾಗಿರುವ ಸಂಗತಿಯನ್ನೂ ಒಂದೂ ಉಳಿಯದಂತೆ ವಿದಿತಪಡಿಸಿದನು.

ಶ್ರೀರಾಮಚಂದ್ರನು ಇದುವರೆಗೆ ಸುಗ್ರೀವನು ಅನುಭವಿಸಿದ ಯಾತನೆಗಳನ್ನು ಕೇಳಿ ತನಗಾದ ಶೋಕ—ತಾಪಗಳನ್ನು ಕ್ಷಣಕಾಲ ಬದಿಗಿಟ್ಟನು. ಮತ್ತು ಆ ಕೂಡಲೆ ಸುಗ್ರೀವನನ್ನು ಕುರಿತು "ನಿನ್ನನ್ನು ಪತ್ನಿಯಿಂದ ಅಗಲಿಸಿ ಸ್ಥಾನ ಭ್ರಷ್ಟನನ್ನಾಗಿ ಮಾಡಿದ ಆ ವಾಲಿಯನ್ನು ಈ ನನ್ನ ದಿವ್ಯಬಾಣದಿಂದ ಅನವಕಾಶದಲ್ಲಿಯೇ ನಾಶಪಡಿಸುವೆ" ಎಂದು ಆವೇಶಯುಕ್ತ ನುಡಿಯನ್ನಾಡಿದನು.

ಸುಗ್ರೀವನು ಶ್ರೀರಾಮನ ಸುಹೃದ್ವಾಕ್ಯಗಳನ್ನು ಕೇಳಿ ಅವನಲ್ಲಿ ಗೌರವಭಾವವನ್ನು ಒಪ್ಪಿ—"ಶ್ರೀರಾಮಚಂದ್ರ! ನೀವರಿಯದ ಆ ವಾಲಿಯ ಪರಾಕ್ರಮವನ್ನು ತಿಳಿಸುವೆನು. ಚಿತ್ತೈಸಿರಿ" ಎಂದು ಹೇಳಹತ್ತಿದನು.

"ಆ ವಾಲಿಯು ನನ್ನ ಸಹೋದರನು. ನಾವೀರ್ವರೂ ಶಕ್ರ ನೆಂಬ ಕಪಿವರನ ಮಕ್ಕಳು. ತಂದೆಗತಿಸಿದ ನಂತರ ಆತನೇ ರಾಜ್ಯಾಧಿ ಕಾರ ಕೈಕೊಂಡನು. ಪ್ರತಿನಿತ್ಯವೂ ಆತನು ಹಂಚ ಪಂಚ ಉಷಃ ಕಾಲದಲ್ಲಿದ್ದು ಚತುರ್ದಿಶೆಯ ಸಾಗರಗಳಲ್ಲಿ ಸ್ನಾನಮಾಡಿ ರವಿ ಯುಡಯದ ಮೊದಲೇ ಮರಳಿ ಮನೆಗೆ ಬರುವನು." ಒಂದು ದಿನ ಬ್ರಹ್ಮನ ವರ ಪಡೆದು ಉನ್ಮತ್ತನಾದ 'ದುಂದುಭಿ' ಎಂಬ ರಾಕ್ಷಸನು ಕೋಣನ ರೂಪಧರಿಸಿ ಬಂದು ವಾಲಿಯೊಡನೆ ಮಲ್ಲಯುದ್ಧವಾರಂಭಿಸಿ ದನು. ವಾಲಿಯು ಆ ಮಹಿಷಾಸುರನನ್ನು ಅತಿಬಲದಿಂದ ಮೇಲಕ್ಕೆತ್ತಿ ನೆಲಕ್ಕಪ್ಪಳಿಸಿದನು. ಆ ಕೂಡಲೆ ರಾಕ್ಷಸನು ರಕ್ತಕಾರಿ ಪ್ರಾಣನೀಗಿ ದನು. ವಾಲಿಯು ಆ ಮೃತ ಶರೀರವನ್ನು ತನ್ನ ಒಂದೇ ಕೈಯಿಂದ ಎತ್ತಿ ಬೀಸಿ ಒಗೆಯಲು ಆ ದೇಹವು ಈ ಪಂಪಾವನದಲ್ಲಿ ಬಂದು ಬಿದ್ದಿತು."

"ಇಂತು ಅವರಿಬ್ಬರ ಹೋರಾಟವಾಗಿ ಆ ರಾಕ್ಷಸನ ಮುಖ ದಿಂದ ಚಿಮ್ಮಿದ ರಕ್ತದ ಹನಿಗಳು ಸಮೀಪದಲ್ಲಿದ್ದ ಮತಂಗ ಋಷಿಯ ಪವಿತ್ರ ಆಶ್ರಮದಲ್ಲೆಲ್ಲ ಸಿಡಿದವು. ಅದರಿಂದ ಕೋಪಾನ್ವಿತರಾದ ಮತಂಗ ಋಷಿಗಳು ವಾಲಿಯನ್ನು ಉದ್ದೇಶಿಸಿ–'ಇನ್ನು ನೀನು ಈ ಆಶ್ರಮದ ಸುತ್ತಲಿನ ವನಕ್ಕೆ ಬಂದುದಾದರೆ ಪ್ರಾಣಕ್ಕೆ ಎರವಾಗುವಿ' ಎಂದು ಶಪಿಸಿದರು. ಅಂದಿನಿಂದ ಆತನು ಈ ಪಂಪಾವನದಲ್ಲಿ ಬರು ವಂತಿಲ್ಲ; ಇಲ್ಲದಿದ್ದರೆ ಅವನು ಇಲ್ಲಿಯೂ ಬಂದು ನಮ್ಮನ್ನು ಕೊಲ್ಲದೆ ಬಿಡುತ್ತಿದ್ದಿಲ್ಲ." ಎಂದು ವಾಲಿಯ ಸಾದ್ಯಂತ ಸಂಗತಿಯನ್ನು ಹೇಳಿದನು.

ಶ್ರೀರಾಮಚಂದ್ರನು ಸುಗ್ರೀವನು ಹೇಳುವದನ್ನೆಲ್ಲ ಗಂಭೀರ ಮುದ್ರೆಯಿಂದ ಕೇಳಹತ್ತಿದನು. ಆಗ ಸುಗ್ರೀವನು ತನ್ನ ಮಾತನ್ನು ಮುಂದುವರಿಸಿ. "ಶ್ರೀರಾಮಚಂದ್ರನೆ! ಅಗೋ ಅಲ್ಲಿ ಎದುರಿನಲ್ಲಿ

ಬಿದ್ದ ದುಂದುಭಿಯ ಅಸ್ಥಿಪಂಜರವನ್ನು ನೋಡಿರಿ. ಬಿಳಿಯ ಪರ್ವತ ದಂತೆ ಕಾಣುವದು. ಈ ದುಂದುಭಿಯ ಮಗನಾದ ಮಾಯಾವಿಯು ತಂದೆಗಳಿಸಿದ ನಂತರ ಒಬ್ಬ ಸ್ತ್ರೀಯ ವಿಷಯ ನಿಮಿತ್ತವನ್ನು ಮುಂದೆ ಮಾಡಿ ಆ ವಾಲಿಯನ್ನು ಎದುರಿಸಿದನು. ಆಗ ವಾಲಿಯೂ ನಾನೂ ಆತನನ್ನು ಪ್ರತಿಭಟಿಸಿ ಸೋಲಿಸಿ ಬೆನ್ನಟ್ಟಿದೆವು. ಮುಂದೆ ಆ ರಾಕ್ಷಸನು ಒಂದು ಗುಹೆಯಲ್ಲಿ ಸೇರಿದನು. ಆಗ ವಾಲಿಯು ನನ್ನನ್ನು ಆ ಗವಿಯ ಬಾಗಿಲಿಗೆ ನಿಲ್ಲಿಸಿ, ತಾನು ಆ ಮಾಯಾವಿಯನ್ನು ಕೊಲ್ಲು ವದರ ಸಲುವಾಗಿ ಆ ಗವಿಯೊಳಗೆ ಹೊಕ್ಕನು. ನಾನು ಒಂದು ವರ್ಷ ಪರ್ಯಂತರವೂ ಆ ಗವಿಯ ಬಾಗಿಲವನ್ನು ಕಾಯುತ್ತ ನಿಂತು ಕೊಂಡೆನು. ಆದರೆ ವಾಲಿಯೂ ಮಾಯಾವಿ ರಾಕ್ಷಸನೂ ಯಾರೂ ಹೊರಗೆ ಬಾರದಾದರು. ಆಗ ನಮ್ಮ ಕಿಷ್ಕಿಂಧಾ ಪಟ್ಟಣದ ಮಂತ್ರಿ ಮೊದಲಾದವರು ಅಲ್ಲಿಗೆ ಬಂದು ಆ ಗವಿಯ ಬಾಗಿಲಿಗೆ ಒಂದು ದೊಡ್ಡ ಕಲ್ಲನ್ನು ಆನಿಸಿ ನನ್ನನ್ನು ಕರೆದುಕೊಂಡು ಹೋಗಿ ಪಟ್ಟ ಗಟ್ಟಿದರು."

ಕೆಲ ದಿವಸಗಳು ಕಳೆದ ನಂತರ ವಾಲಿಯು ಮರಳಿ ಬಂದನು. ಅವನು ಅತಿಕ್ರೋಧದಿಂದ ನನ್ನನ್ನು ಹೀಯಾಳಿಸಿ "ನಾನು ಮಾಯಾವಿ ಯನ್ನು ಹುಡಿಕಿ ಆತನನ್ನು ಸಂಹರಿಸಿ ಬರುವಷ್ಟರಲ್ಲಿ ನೀನು ರಾಜ್ಯಾಧಿ ಕಾರವನ್ನು ಪಡೆದೆಯಾ ? ಗವಿಯ ಬಾಗಿಲ ಮುಂದೆ ನೀನು ದೊಡ್ಡ ಕಲ್ಲನ್ನು ನಿಲ್ಲಿಸಿದ್ದನ್ನು ನಾನು ಅತಿ ಪ್ರಯಾಸದಿಂದ ನೂಕಿ ಇಲ್ಲಿಗೆ ಬಂದೆನು. ಆದರೆ ನೀನು ಸುಖವಾಗಿ ರಾಜ್ಯವಾಳುವದನ್ನು ಕಂಡು ನನಗೆ ಬಲು ಸೋಜಿಗವೆನಿಸುತ್ತದೆ. ರಾಜ್ಯಲೋಲುಪನಾದ ನಿನಗೆ ಧಿಕ್ಕಾರವಿರಲಿ." ಎಂದು ದುರುಕ್ತಿಗಳನ್ನಾಡಿದನು. ಆಗ ನಾನು ನಡೆದು ಹೋದ ಕಾರ್ಯಕ್ಕಾಗಿ ಬಹುಪರಿಯಾಗಿ ಬೇಡಿಕೊಂಡೆನು. ಆದರೂ ಅವನು ನನ್ನನ್ನು ಲೆಕ್ಕಿಸದೆ ನನ್ನ ಪ್ರೇಮದ ಪತ್ನಿಯಾದ

ರುಮೆಯನ್ನು ತನ್ನ ಮನೆಯಲ್ಲಿರಿಸಿಕೊಂಡು ನನ್ನನ್ನು ರಾಜ್ಯಭ್ರಷ್ಟ ನನ್ನಾಗಿ ಮಾಡಿ ಹೊರದೂಡಿದನು. ಅಂದಿನಿಂದ ವಾಲಿಯು ನನ್ನ ವೈರಿಯಾದನು." ಎಂದು ಸುಗ್ರೀವನು ವಾಲಿಯ ಸಾದ್ಯಂತ ವೃತ್ತ ವನ್ನು ಹೇಳಿದನು.

" ಶ್ರೀರಾಮಚಂದ್ರ ಅಂಥ ಬಲಾಢ್ಯನಾದ ವಾಲಿಯನ್ನು ಜಯಿಸುವದು ಅಸಾಧ್ಯವು. ನೀವು ಬಹಳ ಬಲವುಳ್ಳವರೂ, ಪರಾಕ್ರಮಿಗಳೂ, ಆಗಿರುವಿರಿ ಎಂದು ಕೇಳಿರುವೆ. ಆದರೆ ನಿಮ್ಮ ಸಾಮರ್ಥ್ಯದ ಬಗೆಯನ್ನು ಇದುವರೆಗೂ ನಾನು ಕಂಡಿಲ್ಲ. ರಕ್ತ-ಮಾಂಸಗಳಿಂದ ತುಂಬಿರುವ ಆ ಮಹಿಷಾಸುರನ ದೇಹವನ್ನು ಆ ವಾಲಿಯು ತನ್ನ ಕೈಯಿಂದ ಒಂದು ಯೋಜನದಷ್ಟು ದೂರದವರೆಗೆ ಬೀಸಿ ಒಗೆದನು. ನೀವು ಆ ಮಹಿಷಾಸುರನ ಕೇವಲ ಈ ಅಸ್ಥಿಪಂಜರವನ್ನಷ್ಟೇ ನೀವು ಎತ್ತಿ ಒಗೆದರೆ ನನಗೆ ನಿಮ್ಮ ಸಾಮರ್ಥ್ಯದಪ್ರತೀತಿಯಾಗುವದು. " ಎಂದು ಹೇಳಿದನು. ಸುಗ್ರೀವನ ಈ ಮಾತನ್ನು ಕೇಳಿ ಶ್ರೀರಾಮಚಂದ್ರನು ನಗುತ್ತ ತನ್ನ ಎಡಗಾಲಿನ ಕಿರಿಬೆರಳಿನಿಂದ ಸಹಜವಾಗಿ ರಾಕ್ಷಸನ ಆ ಅಸ್ಥಿಪಂಜರವನ್ನು ಹತ್ತು ಯೋಜನ ದೂರದವರೆಗೆ ಬೀಸಿ ಚಿಮ್ಮಿದನು. ಆದರೂ ಸುಗ್ರೀವನಿಗೆ ಶ್ರೀರಾಮಚಂದ್ರನ ಬಲದ ಬಗ್ಗೆ ಭರವಸೆ ಯಾಗಲಿಲ್ಲ. ಆತನು ಪುನಃ " ಹೇ ರಾಮಚಂದ್ರಾ, ಇಲ್ಲಿರುವ ಈ ಸಪ್ತವೃಕ್ಷಗಳನ್ನು ನೋಡಿರಿ. ವಾಲಿಯು ಇವುಗಳನ್ನು ಕಸುವಿನಿಂದ ಅಲುಗಾಡಿಸಲು ಅವುಗಳಲ್ಲಿಯ ಎಲ್ಲ ಎಲೆಗಳು ನೆಲಕ್ಕೆ ಉದುರಿ ಬಿದ್ದವು. ನೀವು ಈ ವೃಕ್ಷಗಳನ್ನೆಲ್ಲ ನಿಮ್ಮ ಒಂದೇಬಾಣದಿಂದ ಕೆಡವಿದರೆ ನೀವು ಆ ವಾಲಿಯನ್ನು ಸಹಜವಾಗಿ ಕೊಲ್ಲುವಿರೆಂದು ನನ್ನನಂಬಿಕೆಯು ದೃಢವಾಗುವದು. ಎಂದು ಹೇಳಿದನು. ಸುಗ್ರೀವನ ಮಾತಿನಂತೆ ಈ ಸಾರೆಯೂ ಶ್ರೀರಾಮಚಂದ್ರನು ಒಂದೇ ಒಂದು ಬಾಣದಿಂದ ಅವುಗಳನ್ನು ಕೆಳಕ್ಕೆ ಕೆಡವಿ ತೋರಿಸಿದನು. ರಾಮನ ಶಕ್ತಿ

ಪರೀಕ್ಷಿಸಿದ ಸುಗ್ರೀವನು ಆಗ ಗದಗದನೆ ನಡುಗುತ್ತ ಶ್ರೀರಾಮ ಚಂದ್ರನು ಒಬ್ಬ ದೇವಪುರುಷನೆಂಬ ನಿರ್ಧಾರದಿಂದ ಆತನ ಚರಣಕ್ಕೆರಗಿ ' ಹೇ ರಾಮಚಂದ್ರಾ, ನೀನು ಸಮರಾಂಗಣದಲ್ಲಿ ಇಂದ್ರಾದಿ ದೇವತೆಗಳನ್ನು ಸಹ ಗೆಲ್ಲುವ ಶೂರನಾಗಿರುವಿ. ಅಂದ ಮೇಲೆ ಆ ವಾಲಿಯು ಪಾಡೇನು? ಸಮರದಲ್ಲಿ ನಿಮ್ಮನ್ನೆದುರಿಸಿ ನಿಲ್ಲುವ ಸಾಹಸವುಯಾರಿಗೆ ತಾನೆ ಸಾಧ್ಯ? ಎಂದು ಮುಕ್ತಕಂಠನಾಗಿ ಹೊಗಳಿದನು. ಹಾಗು ಆ ತನ್ನ ವೈರಿ ವಾಲಿಯನ್ನು ಕೊಂದು, ತನ್ನನ್ನು ಈಗಲೇ ಭಯದಿಂದ ಮುಕ್ತನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದನು.' ಶ್ರೀರಾಮಚಂದ್ರನು ತನ್ನನ್ನೇ ಮೊರೆಹೊಕ್ಕ ಸುಗ್ರೀವನ ಬೇಡಿಕೆಯನ್ನು ಅಂಗೀಕರಿಸಿ ಅವನ ಕಾರ್ಯಪೂರ್ಣತೆಗಾಗಿ ಎಲ್ಲರೂ ಕೂಡಿಕೊಂಡು ಅಂದೆಯೇ ಕಿಷ್ಕಿಂಧೆಯ ಕಡೆಗೆಸಾಗಿದರು.

ಬಲವತ್ತರ ಬೆಂಬಲ ದೊರಕಿಸಿದ ಸುಗ್ರೀವನು ಕಿಷ್ಕಿಂಧೆಯೊಳಕ್ಕೆ ಸೇರಿ ದೊಡ್ಡದನಿಯಿಂದ ಗರ್ಜಿಸಿ ವಾಲಿಯನ್ನು ಯುದ್ಧಕ್ಕಾಗಿ ಆಹ್ವಾನಿಸಿದನು. ಕೂಡಲೆ ವಾಲಿಯು ಕ್ರೋಧಾಯಮಾನನಾಗಿ ಹೊರಬಂದು ರಣಕಣಕ್ಕಿಳಿದು ಸುಗ್ರೀವನೊಡನೆ ಮುಷ್ಟಿಯುದ್ಧವಾರಂಭಿಸಿದನು. ಶ್ರೀರಾಮನು ಲಕ್ಷ್ಮಣನೊಡನೆ ಒಂದು ಮರದಡಿಯಲ್ಲಿ ಕುಳಿತು ನಿರೀಕ್ಷಿಸುತ್ತಿದ್ದನು. ವಾಲಿ—ಸುಗ್ರೀವರು ಸಮಬಲದಿಂದ ಹೋರಾಡಹತ್ತಿದ್ದರೂ ಕೊನೆಗೆ ಸುಗ್ರೀವನ ಪರಾಭವದ ಲಕ್ಷಣಗಳು ತೋರಹತ್ತಿದವು. ರಾಮಚಂದ್ರನು ಸುಗ್ರೀವನಿಗಿತ್ತ ಭಾಷೆಯಂತೆ ಆ ಯುದ್ಧದಲ್ಲಿ ಭಾಗ ವಹಿಸಬೇಕಾಗಿತ್ತು. ಆದರೆ ಹೋರಾಡುವ ವಾಲಿ—ಸುಗ್ರೀವರ ರೂಪ ಸಾದೃಶ್ಯದಿಂದ ಶ್ರೀರಾಮಚಂದ್ರನಿಗೆ ಬಾಣ ಪ್ರಯೋಗ ಮಾಡಲು ಅನುಮಾನವುಂಟಾಗಿ ಬಾಣ ತೊಡಲಿಲ್ಲ. ಆದ್ದರಿಂದ ಅಂದಿನ ಯುದ್ಧದಲ್ಲಿ ಸುಗ್ರೀವನು ಸಂಪೂರ್ಣ

ಸೋತು ವಾಲಿಯಿಂದ ತಪ್ಪಿಸಿಕೊಂಡು ತನ್ನ ವಾಸಸ್ಥಳವನ್ನು ಬಂದು ಸೇರಿದನು.

ಕಾಳಗದ ಕಣದಿಂದ ಪಲಾಯನ ಮಾಡಿದ ಸುಗ್ರೀವನ ಅಪಜಯದಿಂದ ಖಿನ್ನವದನನಾದ ಹನುಮನು ರಾಮ-ಲಕ್ಷ್ಮಣರ ಸಮೇತವಾಗಿ ಎಲ್ಲರೂ ರಣರಂಗದಿಂದ ಮರಳಿ ಸುಗ್ರೀವನಿದ್ದಲ್ಲಿ ಬಂದನು.

ಅಂದು ಪರಾಭವ ಹೊಂದಿದ ಸುಗ್ರೀವನು ದೀನವದನವುಳ್ಳವನಾಗಿ ಶ್ರೀರಾಮನನ್ನು ಕುರಿತು:—"ನೀವು ಈ ಬಗೆಯಾಗಿ ನನ್ನನ್ನು ವಂಚಿಸುವ ಮನಸ್ಸಿನವರಾಗಿದ್ದರೆ ಯುದ್ಧಕ್ಕಾಗಿ ನನ್ನನ್ನು ಹುರುಡುಂಬಿಸಬಾರದಾಗಿತ್ತು" ಎಂದು ಭಾರವಾದ ನುಡಿಯಾಡಿದನು. ಆಗ ಶ್ರೀರಾಮನು ಆತನನ್ನು ಯೋಗ್ಯ ಮಾತುಗಳಿಂದ ಸಾಂತ್ವನಗೊಳಿಸಿ—ಸುಗ್ರೀವ! ಕಣದಲ್ಲಿ ಹೋರಾಡುವ ನಿಮ್ಮಿಬ್ಬರ ರೂಪ ಸಾದೃಶ್ಯವು ನಮ್ಮನ್ನು ಅನುಮಾನದಲ್ಲಿ ನೂಕಿತು. ನೀನಾರು ? ವಾಲಿಯಾವಾತನು ? ಎಂಬುದೇ ನಮಗೆ ಗೊತ್ತಾಗಲಿಲ್ಲ. ಒಂದು ವೇಳೆ ನಿನ್ನನ್ನೇ ವಾಲಿಯೆಂದರಿತು ಬಾಣ ಬಿಟ್ಟಿದ್ದರೆ ಮಹದನರ್ಥವಾಗುತ್ತಿದ್ದಿತು. ಈ ವಿಚಾರದಿಂದ ಇಂದಿನ ಯುದ್ಧದಲ್ಲಿ ನಾನು ತಟಸ್ಥನಾಗಿ ಉಳಿಯಬೇಕಾಯಿತು. ಇದು ನನ್ನ ಅಪರಾಧವೆಂದು ನಿನಗೆ ಮನದಟ್ಟಾದರೆ ನನ್ನನ್ನು ಹೀಯಾಳಿಸಬಹುದು" ಎಂದು ಹೇಳಿ ಸುಗ್ರೀವನ ದುಗುಡನ್ನು ದೂರ ಮಾಡಿದನು. ಹಾಗು ಇನ್ನು ಮುಂದೆ ವಾಲಿ—ಸುಗ್ರೀವರ ಕಾಳಗವುಂಟಾದರೆ ರೂಪ ಸಾದೃಶ್ಯದ ಅನವಸ್ಥಾ ಪ್ರಸಂಗ ನಿವಾರಣೆಗಾಗಿ ಸುಗ್ರೀವನ ಕೊರಳಲ್ಲಿ ಹೂಮಾಲೆಯೊಂದನ್ನು ಹಾಕಬೇಕು. ಎಂಬ ವಿಚಾರದಿಂದ ಶ್ರೀರಾಮಚಂದ್ರನು ಲಕ್ಷ್ಮಣನಿಂದ ಕೆಲವು ನಾಗ ಪುಷ್ಪಗಳನ್ನು ತರಿಸಿ ಅವುಗಳನ್ನು ಪೋಣಿಸಿ ಸಿದ್ಧಪಡಿಸಿದಮಾಲೆಯೊಂದನ್ನು ಸುಗ್ರೀವನ ಕೊರಳೊಳಗೆ ಹಾಕಿದನು.

ಬಳಿಕ ಅವರೆಲ್ಲರೂ ಯುದ್ಧಕ್ಕೆ ಸಿದ್ಧರಾಗಿ ಮತ್ತೆ ಕಿಷ್ಕಿಂಧೆಗೆ ಬಂದರು. ರಾಮ-ಲಕ್ಷ್ಮಣರು ರಣರಂಗದ ಸಮೀಪದಲ್ಲಿಯ ಒಂದು ಮರದಡಿಯಲ್ಲಿ ಸಜ್ಜಾಗಿ ನಿಂತರು.

ಸುಗ್ರೀವನು ಕಿಷ್ಕಿಂಧೆಯ ಕೋಟೆಯ ಬಾಗಿಲಿಗೆ ಬಂದು ಮೊದಲಿಗಿಂತಲೂ ಹೆಚ್ಚು ರಭಸದಿಂದ ಆರ್ಭಟಿಸಿ ವಾಲಿಯನ್ನು ಯುದ್ಧಕ್ಕಾಗಿ ಎಚ್ಚರಿಸಿದನು. ವಾಲಿಯು ತನ್ನ ಅರಮನೆಯಲ್ಲಿ ತನ್ನ ಸತಿ ತಾರೆಯೊಡನೆ ಮಾತನಾಡುತ್ತ ಕುಳಿತಿದ್ದನು. ಸುಗ್ರೀವನ ರಣಧ್ವನಿಕೇಳಿ ಅತಿ ಕ್ರೋಧದಿಂದ ತಾನು ಕುಳಿತಿರುವ ಮಂಚದಿಂದ ಕೆಳಕ್ಕೆ ಟಣ್ಣನೆ ಧುಮಿಕಿದನು. ಆಗ ಸತಿ ತಾರೆಯು ಮುಂದೆ ಸಾವರಿಸಿ ಬಂದು ಪತಿಯ ಪಾದಗಳನ್ನು ಗಟ್ಟಿಯಾಗಿ ಹಿಡಿದು " ನಾಥ ! ಸೋತಂಥ ಶತ್ರುವು ತಾನಾಗಿ ಮರಳಿ ಕಾದಲು ಅಣಿಯಾಗಿ ಬರುವ ಈ ಪ್ರಸಂಗದಲ್ಲಿ ಏನಾದರೂ ಮೋಸವಿರಬಹುದೆಂದು ನನ್ನ ಭಾವನೆಯಾಗಿದೆ. ಅಯೋಧ್ಯೆಯ ದಶರಥ ಮಹಾರಾಜನ ಶೂರಪುತ್ರರಾದ ರಾಮ—ಲಕ್ಷ್ಮಣರು ದಂಡಕಾರಣ್ಯಕ್ಕೆ ಬಂದಿರುವರೆಂಬ ವಾರ್ತೆಯು ಗುಪ್ತಚಾರದಿಂದ ಯುವರಾಜ ಅಂಗದನಿಗೆ ತಿಳಿದಿರುವದು. ಆ ಸುಗ್ರೀವನು ಈಗ ಆ ರಾಮ—ಲಕ್ಷ್ಮಣರ ಸಹಾಯಪಡೆದಿರಬಹುದು. ಈಗ ನೀವು ನನ್ನ ಈ ವಿಚಾರವನ್ನು ಲಕ್ಷಕ್ಕೆ ತಂದು ಸುಗ್ರೀವನೊಡನೆ ಯುದ್ಧಕ್ಕೆ ಹೋಗುವದನ್ನು ತಡೆಯಿರಿ. ಇಂದು ನನಗೆ ಅದೇಕೋ ದುಶ್ಶಕುನಗಳು ಸೂಚಿತವಾಗಹತ್ತಿವೆ. ಬಲಗಣ್ಣು ಹಾರುತ್ತಿದೆ" ಎಂದು ತನ್ನ ಪತಿ ರಾಜನಿಗೆ ಹೇಳಿದಳು.

ಸತಿ ಶಿರೋಮಣಿ ತಾರೆಯ ಹಿತವಚನಗಳನ್ನು ತನ್ನ ಯುದ್ಧ ನಿರ್ಧಾರಣೆಯಿಂದ ವಾಲಿಯು ಕೇಳಲಿಲ್ಲ. ಆದರೂ ಅವಳಿಗೆ ಆಕೆಯ ಸ್ವಭಾವಕ್ಕನುಸರಿಸಿ ನಂಬುಗೆ ಹುಟ್ಟುವಂತೆ— " ಶ್ರೀರಾಮಚಂದ್ರ

ಪ್ರಭುವು ಕಾರಣವಿಲ್ಲದೆ ನಿರಪರಾಧಿಯಾದ ನನ್ನನ್ನು ಎಂದಿಗೂ ಕೊಲ್ಲಲಾರನು. ನೀನೇಕೆ ಹೆದರುವೆ? ಮಹಾಪರಾಧಿಯಾದ ಸುಗ್ರೀವ ಬಂಧುವಿಗೆ ಸೋತು ಗೆಳೆತನವನ್ನು ಬೆಳೆಸುವದು ವೀರನಾದ ನನಗೆ ಶೋಭಿಸಲಾರದು" ಎಂದು ನುಡಿದು ಘೋರಾಕಾರ ತಾಳಿ ಕೋಪಾಟೋಪದಿಂದ ಯುದ್ಧಕ್ಕೆ ಸನ್ನದ್ಧನಾಗಿ ಹೊರಟನು.

ಕಿಷ್ಕಿಂಧೆಯ ಕೋಟೆಯಿಂದ ಹೊರಬಿದ್ದುಬಂದ ವಾಲಿಯು ರಭಸವನ್ನು ಲೆಕ್ಕಿಸದೆ ಸುಗ್ರೀವನು ಅವನನ್ನು ಕಾಳಗದ ಕಣದಲ್ಲಿ ಎದುರಿಸಿದನು. ಸಮ ಬಲವುಳ್ಳವರಾದಅವರೀರ್ವರ ಬಾಹು ಯುದ್ಧವನ್ನು ರಾಮ—ಲಕ್ಷ್ಮಣರು ಮರದಡಿಯಲ್ಲಿ ನಿಂತು ನಿರೀಕ್ಷಿಸ ಹತ್ತಿದ್ದರು. ಕೊನೆಗೆ ಗದಾಯುದ್ಧದಿಂದ ಸುಗ್ರೀವನ ಬಲವು ಈ ಮೊದಲಿನ ಯುದ್ಧದಲ್ಲಿಯಂತೆ ಕುಗ್ಗಹತ್ತಿತು. ಶ್ರೀರಾಮನು ಸುಗ್ರೀವನಿಗಿತ್ತ ವಾಗ್ದಾನವನ್ನು ಪೂರೈಸುವ ಸಮಯವೀಗ ಉಂಟಾಯಿತು. ಆಗ ರಾಮಚಂದ್ರನುತನ್ನ ಅಮೋಘವಾದ ಬಾಣವನ್ನು ಪ್ರಯೋಗಿಸಲು ಅದು ಕೂಡಲೆವಾಲಿಯ ಶರೀರದಲ್ಲಿ ನಟ್ಟು ಆತನನ್ನು ಮೂರ್ಛಿತನನ್ನಾಗಿ ಮಾಡಿತು.

ಆಶ್ವೀನ ಪೌರ್ಣಿಮೆಯ ದಿನದಲೆತ್ತಿದ ಇಂದ್ರಧ್ವಜವು ಕೆಳ ಬೀಳುವಂತೆ ಗ್ರೀಷ್ಮರ್ತುವಿನ ಕೊನೆಯಲ್ಲಿ ವಾಲಿಯು ಶ್ರೀರಾಮನ ಬಾಣದಿಂದ ಗತಪ್ರಾಣನಾಗಿ ನೆಲಕ್ಕುರುಳಿದನು. ಆದರೆ ಅವನ ಕೊರಳಲ್ಲಿ ಅವನಿಗೆ ಇಂದ್ರದತ್ತವಾದ ಸುವರ್ಣ ಹಾರವು ಇದ್ದುದರಿಂದ ಆಗ ಅವನ ಪ್ರಾಣೋತ್ಕ್ರಮಣವಾಗಲಿಲ್ಲ. ಮತ್ತು ಅವನ ತೇಜವು ಕುಂದಲಿಲ್ಲ.

ಬಳಿಕ ರಾಮ—ಲಕ್ಷ್ಮಣರು ಭೂಪತಿತನಾಗಿ ಹೊರಳಾಡುತ್ತಿರುವ ವಾಲಿಯ ಸನಿಹಕ್ಕೆ ಬಂದರು. ಆಗ ವಾಲಿಯು ಶ್ರೀರಾಮ

ನನ್ನು ಕಣ್ತುಂಬ ಕಂಡು:-"ಹೇರಾಮಚಂದ್ರಾ! ನೀವು ಸತ್ಯ-ಧರ್ಮ-ನ್ಯಾಯವಂತರಾಗಿ ಖ್ಯಾತಿಯನ್ನು ಪಡೆದಿರುವಿರಿ; ಸನ್ಮಾರ್ಗಿಗಳೂ, ಪರಾಕ್ರಮಿಗಳೂ ಆಗಿರುವಿರಿ. ಆದರೆ ನಾನು ನನ್ನ ವೈರಿಯೊಬ್ಬ ನೊಡನೆ ಕಾದುತ್ತಿರುವಾಗ ನೀವು ಮರೆಯಾಗಿ ನಿಂತು ನನ್ನ ಮೇಲೆ ಬಾಣ ಪ್ರಯೋಗಿಸಿದುದು ನ್ಯಾಯ ಸಮ್ಮತವೇ ? ಶ್ರೀರಾಮನು ಪ್ರಜಾಹಿತದಕ್ಷನೂ, ಸಮಯವನ್ನರಿತು ನಡೆಯುವವನೂ, ಕರ್ತವ್ಯ ತತ್ಪರನೂ ಇತ್ಯಾದಿಯಾಗಿ ಜನವರ್ಗವೆಲ್ಲ ತಮ್ಮನ್ನು ಬಾಯ್ತುಂಬ ನುಡಿದು ಕೊಂಡಾಡುತ್ತಿರುವ ಬಗೆಯು ನಿಮ್ಮ ಇಂತಹ ಅಧರ್ಮಾ ಚರಣೆಯ ಕೃತ್ಯಗಳಿಂದ ಉಂಟಾಗಿರಬಹುದಲ್ಲವೇ ? ಸದ್ಧರ್ಮ ಪ್ರವರ್ತಕರ ವೇಷದಿಂದ ಧರ್ಮಧ್ವಜವನ್ನು ಹಾರಿಸಿ ಒಳ್ಳೆಯ ಭಾಷಣಗಳನ್ನು ಸುರಿಸಿ ಕೇವಲ ಹೀನ ಕೃತ್ಯಗಳನ್ನೆಸಗುವ ಪಾಪಿ ಗಳಂತೆ ನೀವು ನನಗೆ ತೋರುವಿರಿ. ನಾನು ನಿಮ್ಮ ಮೇಲೇರಿ ಯುದ್ಧ ವನ್ನೆಸಗಲು ಬರಲಿಲ್ಲ. ನಿಮ್ಮ ಸಂಪತ್ತನ್ನು ಅಪಹರಿಸಲಿಲ್ಲ. ನಾನು ನಿಮ್ಮನ್ನು ಕಾಡಿಗಟ್ಟಿದ ಕೈಕೇಯಿಯ ಮಗನಲ್ಲ, ಕಾಡಿನಲ್ಲಿ ನಿನ್ನ ಪತ್ನಿಯನ್ನಪಹರಿಸಿದ ರಾವಣನಲ್ಲ, ಹಾಗು ಕಾಳಗದಲ್ಲಿ ನಿನ್ನನ್ನೆದುರಿಸಿ ನಿಂತು ಕಾದುವ ನಿನ್ನ ವೈರಿ ರಾಜನಲ್ಲ; ಹೀಗಿದ್ದು ಏನೊಂದಪ ರಾಧವಿಲ್ಲದ ನನ್ನನ್ನು ಮೋಸದಿಂದ ಹೊಡೆದುದು ನಿನಗೆಳ್ಳಷ್ಟು ಭೂಷಣವಾಗಲಿಲ್ಲ. ಬಂಧುಗಳಾದ ನಮ್ಮಿರ್ವರ ಜಗಳದಲ್ಲಿ ನೀವು ಕೈ ಹಾಕಬಾರದಾಗಿತ್ತು. ನಾವು ಕಪಿಗಳು, ನೀವು ಮಾನವರು. ಈ ವಿಚಾರವನ್ನು ಅನುಲಕ್ಷಿಸಬೇಕಾಗಿತ್ತು. ಆದರೂ ನೀವು ಅಪ ರೋಕ್ಷವಾಗಿ ನನ್ನೊಡನೆ ಕಾದುವ ಕ್ಷತ್ರಿಯ ಧರ್ಮ ಬಿಡಬಾರ ದಾಗಿತ್ತು. ಒಂದು ವೇಳೆ ನನ್ನೊಡನೆ ಕಾದುವ ಇಚ್ಛೆಯನ್ನು ಪ್ರಕ ಟಿಸಿದ್ದರೆ ನಾನು ನಿಮಗೆ ವೀರಸ್ವರ್ಗದ ಮಾರ್ಗವನ್ನೇ ತೋರಿಸದೆ ಬಿಡುತ್ತಿದ್ದಿಲ್ಲ. ಆದುದಾಯಿತು. ಇಂದು ನೀವು ಇಂಥ ನಿಂದ್ಯಕರ್ಮ

ವನ್ನು ಮಾಡಿ ಸಜ್ಜನರಾಗಿ ಮೆರೆಯಿರಿ, ನನ್ನ ಪಶ್ಚಾತ ನಿಮ್ಮ ಮಿತ್ರ ಸುಗ್ರೀವನನ್ನೇ ಪಟ್ಟಗಟ್ಟಿಕೊಳ್ಳಿರಿ" ಎಂದು ಹೃದಯ ಸಂತಾಪದಿಂದ ವಾಲಿಯು ಹೀಯಾಳಿಸಿ ನುಡಿಯುವದನ್ನು ಶ್ರೀರಾಮಚಂದ್ರನು ಒಳ್ಳೆ ಶಾಂತತೆಯಿಂದ ಕೇಳಿಕೊಂಡು—"ಹೇ ವಾಲಿ, ನೀನು ಧರ್ಮಾಧರ್ಮ ಹಾಗು ಯುಕ್ತಾಯುಕ್ತ ವಿಚಾರಗಳನ್ನರಿತಿಲ್ಲ. ಅಂತೆಯೇ ನನಗೆ ದೋಷವನ್ನು ಇಡುವಿ. ಈ ಪೃಥ್ವಿಯಮೇಲಿನ ಸಾರ್ವಭೌಮಾಧಿ ಕಾರತ್ವವು ಮನ್ವಾದಿಯಿಂದ ನಡೆದು ಬಂದು ಇಕ್ಷ್ವಾಕು ವಂಶದ ರಾಜರಂದೆಂಬದನ್ನು ಅಲ್ಲಗಳೆಯಲಾರಿರಿ. ಸದ್ಯಕ್ಕೆ ಆ ಶ್ರೇಷ್ಠವಂಶದಲ್ಲಿ ಜನಿಸಿದ ಭರತರಾಜನೇ ಅಯೋಧ್ಯೆಯಲ್ಲಿ ಆಳುತ್ತಿರುವನು. ಆತನೇ ಧರ್ಮ, ಅರ್ಥ, ಕಾಮಗಳ ನ್ಯಾಯ ನಿರ್ಣಾಯಕನು. ಆತನ ಅನುಜ್ಞೆಯಿಂದಲೇ ನಾವೂ ಹಾಗು ಉಳಿದ ರಾಜರುಗಳೂ ಧರ್ಮ ಸಂರಕ್ಷಣೆಯ ಕಾರ್ಯವನ್ನು ಕೈಕೊಂಡು ಪೃಥ್ವಿಯ ಮೇಲೆ ಸಂಚರಿಸು ವೆವು. ನೀನು ಕೇವಲ ವಿಷಯಾಂಧನಾಗಿ ವರ್ತಿಸಿದಿ. ಜನ್ಮವನ್ನಿತ್ತ ವನೂ, ಜೇಷ್ಠ ಬಂಧುವೂ ಹಾಗೂ ವಿದ್ಯಾಪ್ರದಾತ ಗುರುವೂ ಈ ಮೂವರನ್ನು ಪಿತೃಗಳೆಂದು ಅರಿಯಬೇಕೆಂದು ಶಾಸ್ತ್ರ ಸಮ್ಮತ ವುಂಟು. ಈ ವಿಚಾರದಿಂದ ನೀನು ಸುಗ್ರೀವನಿಗೆ ತಂದೆಯ ಸ್ಥಾನ ದಲ್ಲಿದ್ದಂತಾಯಿತು. ಹೀಗಿದ್ದು ನೀನು ಆತನ ಪ್ರೇಮದ ಪತ್ನಿ ರುಮೆಯನ್ನು ಅಪಹರಿಸಿದ್ದು ಇದು ಸಾಮಾನ್ಯ ಪಾತಕವೇ? ಸುಗ್ರೀವನು ಜೀವದಿಂದಿದ್ದಾಗ ನೀನು ಈ ಪಾಪ ಕರ್ಮವನ್ನು ಕೈಕೊಂಡು ಮೂರ್ಖನಾದಿ, ಮಹಾ ಪಾಪಿಯಾದಿ; ಇಂಥ ಪಾಪಿ ಷ್ಠರು ಅನುಭವಿಸುವ ಘೋರ ನರಕಕ್ಕೆ ಅವರನ್ನು ದೇಹಾಂತವಾಗಿ ವಧಿಸಿ ಮಾರ್ಗ ತೋರಿಸಬೇಕೆಂದು ಶಾಸ್ತ್ರವುಂಟು. ಇದರಿಂದ ಬೇರೆ ಯಾವ ಪ್ರಾಯಶ್ಚಿತ್ತಗಳೂ ಆ ಪಾಪಿಷ್ಠರಿಗೆ ಇರುವದಿಲ್ಲ. ವಾಲಿ! ಬ್ರಹ್ಮಪುತ್ರನಾದ ಮನು ಮಹರ್ಷಿಯು ಸದ್ಧರ್ಮ ವಿವರ್ಧನೆ

ಗಾಗಿ ಎರಡು ನಿಯಮಗಳನ್ನು ಹಾಕಿಕೊಟ್ಟಿರುವನು. ಇಂದಿನ ನಿಮ್ಮಿಬ್ಬರ ಯುದ್ಧದಲ್ಲಿ ನಾನು ಆ ನಿಯಮಗಳನ್ನೇ ಅನುಸರಿಸಿ ನನ್ನ ಕರ್ತವ್ಯವನ್ನು ಕೈಕೊಂಡಿರುವೆನು.

ಮನುವಿನ ಆ ಅಸಾಮಾನ್ಯ ನೇಮಗಳು ಸರ್ವಧರ್ಮಗಳಿಂದ ಮಾನ್ಯಮಾಡಲ್ಪಟ್ಟಿವೆ. ಆ ನಿಯಮಗಳಾವವೆಂದರೆ—

೧ ಪಾಪಕರ್ಮಗಳನ್ನಾಚರಿಸಿದ ಮಾನವನು ರಾಜದಂಡ ದಿಂದ ಪಾಪ ವಿಮುಕ್ತನಾದುದಾದರೆ ಆತನು ಪುಣ್ಯ ಪುರುಷನಂತೆ ಸ್ವರ್ಗವನ್ನು ಪಡೆಯುವನು.

೨ ಒಂದು ವೇಳೆ ಪಾಪಕರ್ಮಗಳನ್ನಾಚರಿಸಿದರೆ ಮಾನವ ನನ್ನು ರಾಜನು ಶಾಸನಕ್ಕೆ ಗುರಿಮಾಡದೆ ತನ್ನ ಕರ್ತವ್ಯದಿಂದ ಚ್ಯುತಿ ಯಾದರೆ ಆ ರಾಜನು ಆ ಪಾಪಿಯು ಪಾಪದ ಫಲಕ್ಕೆ ತಾನೇ ಗುರಿ ಯಾಗುವನು.

ಈ ಎರಡನೆಯ ನಿಯಮವನ್ನನುಸರಿಸಿ ಕೆಲವು ಪಾಪಿಷ್ಠರಾದ ರಾಜರು ತಾವೇ ಶಾಸನಕ್ಕೆ ಗುರಿಯಾಗಿ ತಮ್ಮ ಪಾಪದಿಂದ ಮುಕ್ತ ರಾಗುವರು.

" ಹೇ ವಾಲೀ! ನಿನ್ನ ದುಷ್ಕೃತ್ಯಗಳಿಗನುಸರಿಸಿ ಈಗ ನಿನಗೆ ಯೋಗ್ಯಶಾಸನವಾಗಿದೆ. ಇದರಿಂದ ನೀನು ಪಾಪ ನಿವೃತ್ತನಾಗಿರುವಿ."

" ಇನ್ನು ನೀನು ನನಗೆ ' ಅಪರೋಕ್ಷವಾಗಿ ಯುದ್ಧ ಮಾಡ ಲಿಲ್ಲ, ಮರೆಮೋಸವಾಗಿ ನಿಂತು ಬಾಣವನ್ನು ಪ್ರಯೋಗಿಸಿದಿ' ಎಂಬ ದಾಗಿ ದೂಷಿಸಿರುವಿ. ಆದರೆ ಬೇಟೆಗಾರನು ಪಶು—ಪಕ್ಷಿಗಳನ್ನು ಬಲೆಹಾಕಿ ಇಲ್ಲವೆ ಅವಕ್ಕೆ ಇಂಪಾಗುವಂತೆ ಕೊಳಲನ್ನು ನುಡಿಸಿ ಅವನ್ನು ಮೋಸಮಾಡಿ ಕೊಲ್ಲುವನು; ಪ್ರತ್ಯಕ್ಷವಾಗಿ ಅವುಗಳನ್ನು

ಎದುರಿಸಿ ಕೊಲ್ಲುವನು- ಇಂತು ಮೃಗಯಾವಿಹಾರದ ಬಗೆಯಿರುತ್ತದೆ. ಅಲ್ಲದೆ ಹಾಗೆ ಬೇಟೆಯಾಡುವದು ಯೋಗ್ಯವೂ ಆಗಿರುವದು. ಕ್ಷಾತ್ರಧರ್ಮಿಗಳಾದ ರಾಜರ್ಷಿಗಳು ಈ ಬೇಟೆಯುನಿಯಮಗಳನ್ನೇ ಅನುಸರಿಸುವರು. ಈಗ ನಾನಾದರೂ ಈ ನಿಯಮವನ್ನು ಉಲ್ಲಂಘಿಸಿರುವದಿಲ್ಲ. ಯಾಕಂದರೆ ನೀನು ಕಪಿ; ಅರ್ಥಾತ್ ಶಾಖಾಮೃಗದ ವರ್ಗದವನು. ಮೇಲಾಗಿ ದುಷ್ಕೃತ್ಯಗಳನ್ನು ಮಾಡಿದಂಥವನು. ಅಂದಮೇಲೆ ನಾನು ನಿನ್ನನ್ನು ಕೊಂದುದಾದರೆ ನನಗೆ ಏನೊಂದೂ ಪಾಪಲೇಪ ವುಂಟಾಗಲಾರದು ” ಎಂದು ಶ್ರೀರಾಮನು ವಾಲಿಯನ್ನು ಕುರಿತು ವಿಸ್ತರಿಸಿ ನುಡಿದನು.

ಗತ ಪ್ರಾಣನಾಗಿ ಈಗೋ ಇನ್ನೊಂದರೆಕ್ಷಣಕ್ಕೋ ಪ್ರಾಣಗಳನ್ನು ತೊರೆಯುವ ವಾಲಿಯು ಶ್ರೀರಾಮನ ಯುಕ್ತಿ ವಾದಗಳಿಂದ ತನ್ನ ತಪ್ಪನ್ನೊಪ್ಪಿಕೊಂಡ ಮನಸ್ಸುಳ್ಳವನಾಗಿ ದಯಾಯಾಚನೆಯ ದೃಷ್ಟಿಯನ್ನು ರಾಮಚಂದ್ರನಕಡೆಗೆ ಚಲ್ಲಿ ಕೈಜೋಡಿಸಿ “ ಶ್ರೀರಾಮಚಂದ್ರ! ನೀನು ಪರಾಕ್ರಮವುಳ್ಳವನು. ಸತ್ಯಪ್ರಿಯನೂ ನ್ಯಾಯಮಾರ್ಗವನ್ನು ಅವಲಂಬಿಸುವವನೂ ನೀನಾಗಿರುವಿ. ಇದನ್ನೆಲ್ಲ ನಾನು ಈ ಮೊದಲೇ ಕರ್ಣೋಪಕರ್ಣದಿಂದ ಕೇಳಿದ್ದೆನು. ಅದು ಇಂದಿನ ನನ್ನ ಕೊನೆಯ ಯುದ್ಧದಿಂದ ನನಗೆ ಅನುಭವಕ್ಕೆ ಬಂದುದಾಯತು. ಆದರೆ–ಆದರೇನು ? ಇನ್ನು ಅಲ್ಪಾವಕಾಶದಲ್ಲಿ ನನ್ನ ಪ್ರಾಣಗಳು ನನ್ನ ದೇಹವನ್ನು ತೊರೆದು ಹೋಗುವ ಹವಣಿಕೆಯಲ್ಲಿವೆ. ನಿಜವಾಗಿ ನನಗೆ ಮರಣಬರುವದೆಂಬ ಭಯವೂ ದುಃಖವೂ ಇರುವದಿಲ್ಲ. ಆದರೆ ನನ್ನ ಸತಿ ಶಿರೋಮಣಿ ತಾರೆಯೂ ಏಕಮೇವ ನನ್ನ ಮಗ ಅಂಗದನೂ ಇನ್ನುಮೇಲೆ ನಿರಾಶ್ರಿತರಾಗುವರೆಂಬ ಕಳವಳವು ಮಾತ್ರ ನನ್ನಲ್ಲಿ ತಲೆಯೆತ್ತಿದೆ. ಅದರ ಪರಿಹಾರವು ನಿಮ್ಮಿಂದ ಮಾತ್ರ ಆಗಬಹುದೆಂದು ಪೂರ್ಣಭರವಸೆಯೂ ನನ್ನಲ್ಲಿ ಉಂಟಾಗಿದೆ.

ಈಗ ನಿಮ್ಮಲ್ಲಿ ನನ್ನ ಕೊನೆಯ ಬೇಡಿಕೆಯೆಂದರೆ—ನನ್ನ ಸತಿ-ಸುತರನ್ನು ನೀವು ಪೋಷಿಸುವ ಕೃಪೆಯಾಗಬೇಕು. ಸುಗ್ರೀವನನ್ನು ತಾವು ಒಳ್ಳೆಹೃದಯದಿಂದ ಕಂಡಂತೆ ಈ ನನ್ನ ಸತಿ—ಸುತರನ್ನೂ ಕಾಣಬೇಕು. ಇನ್ನು ನಾನು ನಿಮಗೆ ಹೆಚ್ಚು ಹೇಳುವ ಕಾರಣವೂ ಇಲ್ಲ. ನನ್ನ ಪಂಚಪ್ರಾಣಗಳು ಚಿರವಿಶ್ರಾಂತಿಗಾಗಿ ತಮ್ಮನ್ನು ಬೇಡಿಕೊಳ್ಳುವವು. ಅಪ್ಪಣೆಯನ್ನೀಯುವ ಕೃಪೆಯಾಗಬೇಕು" ಎಂದು ನುಡಿದ ಅಂತಿಮ ವಾಕ್ಯಗಳಿಂದ ಶ್ರೀರಾಮಚಂದ್ರನು ವಾಲಿಯನ್ನು ಸಾಶ್ವಾಸನ ಪೂರ್ಣ ದೃಷ್ಟಿಯಿಂದ ನಿರೀಕ್ಷಿಸಿದನು.

ಅಷ್ಟರಲ್ಲಿ ಹಿಂದೆನಿಂತಿದ್ದ ಸುಗ್ರೀವನು ವಾಲಿಯೆದುರು ವಿಷಣ್ಣವದನನಾಗಿ ಮುಂದೆಬಂದುನಿಲ್ಲಲು ಆತನನ್ನು ಕಂಡು ವಾಲಿಯು-- "ಸುಗ್ರೀವ! ನಾವೀರ್ವರು ಬಂಧುಗಳು. ಕಾಲವೈಚಿತ್ರ್ಯದಿಂದ ವೈರಿಗಳಾದೆವು. ಹೋರಾಡಿದೆವು ಇದೆಲ್ಲವೂ ವಿಧಿಯ ದುರ್ವಿಲಾಸವಲ್ಲವೇ ? ಇನ್ನು ನಾನು ಕೆಲನಿಮಿಷಗಳಲ್ಲಿ ನಿಮ್ಮೆಲ್ಲರನ್ನು ತೊರೆಯುವೆನು. ಇನ್ನು ನೀನು ರಾಜಪದವನ್ನು ಸ್ವೀಕರಿಸಿ ಚಿಕ್ಕಕಂದ ಅಂಗದನನ್ನು ಯುವರಾಜ್ಯ ಪಟ್ಟಕ್ಕೇರಿಸಿ ಸುಖವಾಗಿ ರಾಜ್ಯವಾಳು. ನನ್ನಸತಿ-ಸುತರನ್ನುರಕ್ಷಿಸು'' ಎಂದು ಹೇಳಿ ಅವನನ್ನುಮುಂದಕ್ಕೆ ಕರೆದು ತನಗೆ ಇಂದ್ರನಿಂದ ಪ್ರಾಪ್ತವಾದ ಕಾಂಚನ ಮಾಲೆಯನ್ನು ಆತನ ಕೊರಳಲ್ಲಿ ಹಾಕಿದನು. ಹಾಗು "ಸುಗ್ರೀವ! ದಿವಿಜಪತಿಯಿಂದ ನನಗೆ ದೊರೆತ ಇದನ್ನು ಧರಿಸಲು ನೀನೇ ಯೋಗ್ಯನು." ಪುನಃ ಶ್ರೀರಾಮನ ಕಡೆಗೆ ಹೊರಳಿ ಕೈಮುಗಿದು-ಇವರೆಲ್ಲರಿಗೆ ಕೃಪೆಮಾಡಲು ನೀನೇ ಸಮರ್ಥನು" ಎಂದು ತ್ರಿವಾರವಾಗಿ ರಾಮನನ್ನು ಸ್ಮರಿಸಿ ದೇಹಬಿಟ್ಟನು. ಸುಗ್ರೀವ, ಹನುಮ ಮೊದಲಾಗಿ ಎಲ್ಲ ಕಪಿಗಳು ದೊಡ್ಡದನಿ ತೆಗೆದು ಶೋಕಿಸಹತ್ತಿದರು.

ಶ್ರೀರಾಮನ ಬಾಣದ ಹೊಡೆತದಿಂದ ವಾಲಿಯು ಮೃತಪಟ್ಟ ವಾರ್ತೆಯು ಅವನ ಸತಿ ತಾರೆಗೆ ತಿಳಿದು ಆವಳು ಶೋಕಿಸುತ್ತ ಮಗನಾದ ಅಂಗದನಿಂದ ಸಹಿತವಾಗಿ ರಣಭೂಮಿಗೆ ಬಂದಳು. ಅಲ್ಲಿ ಮೃತನಾಗಿಬಿದ್ದ ವಾಲಿಯ ಕಲೇವರವನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಸಂತಪ್ತಳಾಗಿ ಆಕ್ರೋಶಮಾಡಹತ್ತಿದಳು. ಅಳುತ್ತಿರುವ ತಾರೆಯನ್ನೂ ಅವಳ ಚಿಕ್ಕಮಗ ಅಂಗದನನ್ನೂ ಕಂಡು ಸುಗ್ರೀವನಿಗೆ ಮತ್ತಿಷ್ಟು ಶೋಕವು ಒತ್ತರಿಸಿತು!

ಪತಿದೇಹವನ್ನು ತೊಡೆಯಮೆಲೀರಿಸಿಕೊಂಡ ತಾರೆಯು ಅತಿಶಯ ದುಃಖಿಸುತ್ತ—"ಪ್ರಾಣಕಾಂತ! ನಾನು ಯುದ್ಧಕಾತುರನಾಗಬೇಡೆಂದು ಪರಿಪರಿಯಿಂದ ನಿನ್ನನು ಪ್ರಾರ್ಥಿಸಿದರೂ ನನ್ನ ಮಾತುಗಳನ್ನು ಅಲ್ಲಗಳೆದು ಈ ಅಂತಿಮಸ್ಥಿತಿಯನ್ನು ಹೊಂದಿದಿಯಾ! ರಾಜಮಂದಿರದ ಮೃದುಶಯ್ಯೆಯು ನಿನಗೆ ಬೇಸರವಾಗಿ ಈ ರಣರಂಗದ ಕಲ್ಲಿನ ಹಾಸುಗೆಯು ನಿನಗೆ ಬೇಕಾಯಿತೇ! ಧರ್ಮಪತ್ನಿಯಾಗಿ ನಿನ್ನಕೈವಿಡಿದ ನನ್ನನ್ನು ದೂರೀಕರಿಸಿ ಈ ಭೂದೇವಿಯನ್ನು ನಿನಗೆ ಪ್ರಿಯಳೆಂದು ಭಾವಿಸಿದೆಯಾ! ಅಂತೆಯೇ ನೀವು ಆ ಭೂದೇವಿಯನ್ನು ಆಲಿಂಗಿಸುತ್ತಿರುವಿರಿ. ಎಂದಿನಂತೆ ಈಗಲೂ ನೀವು ನನ್ನನ್ನು ಸ್ನೇಹದೃಷ್ಟಿಯಿಂದ ನೋಡಲೊಲ್ಲರೇಕೆ? ಬಾಯಿ ಬಿಚ್ಚಿ ಒಂದು ನುಡಿಯನ್ನೂ ಕೂಡ ನನ್ನೊಡನೆ ಆಡದಾದಿರಿ. ಅಕಟಾ! ಈ ಅಭಾಗಿನಿಯಾದ ನನ್ನನ್ನೊಬ್ಬಳನ್ನೇ ಇಲ್ಲಿರಿಸಿ ನೀವು ಏಕಾಕಿಯಾಗಿ ಸ್ವರ್ಗವನ್ನಡರುವದು ಪತಿ—ಪತ್ನಿಯರ ಸಂಬಂಧಕ್ಕೆ ವಿರುದ್ಧವಾದುದಲ್ಲವೇ! 'ಹೆಮ್ಮಕ್ಕಳನ್ನು ಹೆತ್ತವರು ಶೂರ ಪುರುಷನಿಗೆ ಮಗಳನ್ನು ಕೊಡಬಾರದು' ಎಂದು ಜನರು ನುಡಿಯುವದರ ಸತ್ಯತೆಯು ಇಂದು ನನಗೆ ನನ್ನ ಸ್ಥಿತಿಯಿಂದಲೇ ಕಂಡು ಬಂದಿತು. ಅದರಿಂದಲೇ ನಾನು ಪರಾಕ್ರಮಿಯಾದ ನಿನ್ನನ್ನು ವರಿಸಿದ್ದರ

ಪರಿಣಾಮವೇ ಇದಾಗಿರಬಹುದು. ಇನ್ನು ಮೇಲೆ ನಿಮ್ಮಿಂದ ವಿರಹಿತ ಳಾಗಿ ನಾನೆಂತು ಜೀವಿಸುವೆನು ? ಒಂದುವೇಳೆ ನನ್ನನ್ನು ಕಡೆಗಣಿಸಿ ದರೂ ನಿಮ್ಮನ್ನು ನಮಸ್ಕರಿಸುವ ನಿಮ್ಮ ಮೋಹದ ಪುತ್ರ ಅಂಗದನಿಗೆ 'ಮಗನೇ ಚಿರಂಜೀವಿಯಾಗು' ಎಂದು ನೀವು ಆಶೀರ್ವಾದವನ್ನೇಕೆ ಮಾಡಬಾರದು ? ನಿಮ್ಮನ್ನು ತೊರೆದು ನಾನು ಇಲ್ಲಿ ಇರುವದು ಸಾಕು. ನಾನೂ ನಿಮ್ಮೊಡನೆ ನೀವಿರುವ ಲೋಕಕ್ಕೆ ಬರುವೆ. ಅರ್ಧಾಂಗಿನಿಯಾದ ನನ್ನ ಬಿನ್ನಹವನ್ನು ಲೆಕ್ಕಿಸಿ ನನ್ನನ್ನೂ ಸಂಗಡ ಕರೆದೊಯ್ಯಿರಿ." ಎಂದು ಹಲವು ಬಗೆಯಿಂದ ಹಲುಬಿ, ಪತಿಶವದ ಮೇಲೆ ದೊಪ್ಪನೆ ಬಿದ್ದು ನಿಶ್ಚೇಷ್ಟಿತಳಾದಳು.

ತುಸು ಹೊತ್ತಿನಲ್ಲಿಯೇ ತಾರೆಯು ಚೇತರಿಸಿ ಕಣ್ಣು ತೆರೆದು ಸನಿಪದಲ್ಲಿದ್ದ ಶ್ರೀರಾಮನನ್ನು ನಿರೀಕ್ಷಿಸಿ:—

"ಹೇ ತ್ರೈಲೋಕ್ಯನಾಥ! ರಾಮಚಂದ್ರಪ್ರಭು! ನೀನು ಅನಾಥರ ನಾಥನೆಂದು ಜಗತ್ಪ್ರತೀತಿಯಿರುವದು. ನೀನಾವ ನಿನ್ನ ಧನುರ್ಬಾಣ ದಿಂದ ನನ್ನ ಪತಿರಾಜನನ್ನು ಪರಲೋಕಕ್ಕೆ ಕಳುಹಿದೆಯೋ ಅದರಿಂದಲೆ ಅನಾಥೆಯಾದ ನನ್ನನ್ನೂ ಸಹ ಅಲ್ಲಿಗೆದೂಡು. ಆ ಪರಲೋಕಕ್ಕೆ ತೆರಳಿದ್ದನನ್ನ ಪತಿರಾಜನು ಅಲ್ಲಿದ್ದುಕೊಂಡು ನಾನು ಬರುವಮಾರ್ಗ ಪ್ರತೀಕ್ಷೆಮಾಡುತ್ತಿರುವನು. ಆ ನನ್ನ ವೀರ ಪತಿಯು ಸ್ವರ್ಗದ ಸುರ ಸುಂದರೆಯರಾದ ಅಪ್ಸರೆಯರನ್ನು ತಿರಸ್ಕರಿಸಿ ನನ್ನ ವಿರಹವನ್ನು ಮತ್ತೆ ಮತ್ತೆ ಸ್ಮರಿಸಿ ವ್ಯಥೆಯಿಂದ ಶೋಕಿಸುತ್ತಿರುವನು. ಮಹಾ ರಾಜ! ರಾಮಚಂದ್ರಪ್ರಭುವೇ! ವಿಯೋಗ-ವಿರಹದ ತಾಪವು ಎಂಥ ಜಾಜ್ವಲ್ಯವಾಗಿರುವದೆಂಬದರ ಅನುಭವವು ತಮಗಿರಲಿಕ್ಕೆ ಸಾಕು. ಇದನ್ನೆಲ್ಲವನ್ನನುಲಕ್ಷಿಸಿ ಕರುಣಾಕರನೆಂಬ ಜಗನ್ಮಾನ್ಯ ಬಿರುದಿನಿಂದ ಮೆರೆಯುವಂತಹರಾದ ತಾವು ನನ್ನಪತಿಯ ಜೊತೆಗೆ ನನ್ನನ್ನುಕಳಿಸಿರಿ" ಎಂದು ಅನನ್ಯ ಭಾವನೆಯಿಂದ ಯಾಚಿಸಿ ಪುನಃ ಪುನಃ ನಮಿಸಿದಳು.

ಸಾಧ್ವೀಮಣಿ ತಾರೆಯ ಹೃದಯದ್ರಾವಕ ಶೋಕದ ಮಾತುಗಳನ್ನು ಕೇಳಿದ ಶ್ರೀರಾಮಪ್ರಭುವು ದುಃಖದಿಂದ ತನ್ನ ಕಣ್ಣನ್ನೊರಿಸಿಕೊಂಡು ಆಕೆಯನ್ನು ಲೌಕಿಕಕ್ಕನುಸಾರವಾಗಿ ಹೇಳುವ ಸಮಾಧಾನದ ನುಡಿಗಳಿಂದ ಸಾಂತ್ವನಗೋಳಿಸಿ “ ತಾರಾ! ಇನ್ನು ನೀನು ಶೋಕಿಸುವದು ನಿರರ್ಥಕವು. ಅದರಿಂದ ಮೃತನ ಆತ್ಮಕ್ಕೆ ಶಾಂತಿ ಸದ್ಗತಿಗಳು ಲಭಿಸಲಾರವು. ಜಗತ್ತಿನ ಪ್ರತಿಯೊಬ್ಬ ಮಾನವನು ‘ ತಾನು ಮಾಡಿದ ಕರ್ಮದ ಫಲವನ್ನು ತಾನೇ ಅನುಭೋಗಿಸಲೇ ಬೇಕಾಗುವದು’ ಅಲ್ಲದೆ ಎಲ್ಲರೂ ಕಾಲನ ಮಹಿಮೆಯನ್ನು ಅರಿಯಲೇಬೇಕು’ ಕರ್ಮಕರ್ತೃವೂ.ಇನ್ನೊಬ್ಬರನ್ನು ಕರ್ಮಕ್ಕಾಗಿ ಪ್ರೇರೇಪಿಸುವವನೂ ಆ ಕಾಲನೇ ಆಗಿರುವನು. ಅವನು ಯಾರನ್ನೂ ಬಿಟ್ಟಿರುವದಿಲ್ಲ. ಮಾನವ ಸ್ವಭಾವಕ್ಕನುಸರಿಸಿಯೇ ಕಾಲಾನುರೂಪವಾಗಿ ಫಲಪ್ರಾಪ್ತಿಯಾಗುವದುಂಟು. ಪ್ರಾಣಿಗಳಿಗೆ ಅಂತಿಮಾವಸ್ಥೆಯನ್ನು ಕೊಡುವ ಯಮರಾಜನೂ ಸಹ ಕಾಲಾಧೀನನೇ ಆಗಿರುವನು. ಆ ಕಾಲನಿಗೆ ಆಪ್ತೇಷ್ಟರೆಂಬ ಬಂಧುತ್ವವಿಲ್ಲ; ಅವನ ಆಜ್ಞೆಯನ್ನು ಉಲ್ಲಂಘಿಸುವ ಸಾಹಸಿಗಳಿಲ್ಲ; ಆದುದರಿಂದ ಪ್ರತಿಯೊಬ್ಬರೂ ಆತನ ಮಹಿಮೆಯನ್ನು ಲಕ್ಷ್ಯದಲ್ಲಿಡಲೇ ಬೇಕು. ಹಾಗು ಧರ್ಮ, ಅರ್ಥ, ಕಾಮಗಳಿಗೆ ಆತನೇ ನಿಯಂತ್ರಕನು. ತಾರಾ! ಇದನ್ನೆಲ್ಲ ನೀನರಿತು—ಧರ್ಮದಂತೆನಡೆ ” ಎಂದು ಶ್ರೀರಾಮನು ಬೋಧೆಮಾಡಿದನು.

ಅಷ್ಟರಲ್ಲಿ ಕರ್ತವ್ಯಮುಗ್ಧನಾಗಿ ಶೋಕಿಸುತ್ತ ಒತ್ತಟ್ಟಿಗೆ ಕುಳಿತ ಸುಗ್ರೀವನನ್ನು ಲಕ್ಷ್ಮಣನು ತನ್ನ ಬಳಿಗೆ ಕರೆದು “ ಸುಗ್ರೀವನೇ ಇನ್ನು ಇವೆಲ್ಲವನ್ನು ಮರೆ. ನಿನ್ನ ಬಂಧು ವಾಲಿಯು ಮರಣೋತ್ತರ ಕಾರ್ಯ ಕೈಕೊಳ್ಳು ” ಎಂದು ಸೂಚಿಸಿದನು. ಆಗ ಸುಗ್ರೀವನು ಕಪಿರಾಜನ ಮುಖ್ಯಸರದಾರನಾದ ‘ತಾರ, ಎಂಬವನಿಗೆ ಪ್ರೇತಕಾರ್ಯದ ವ್ಯವಸ್ಥೆಯನ್ನು ಸಿದ್ಧಗೊಳಿಸಲು ತಿಳಿಸಿದನು. ಎಲ್ಲವೂ ಸಜ್ಜಾದ

ನಂತರ ಎಲ್ಲ ಕಪಿಗಣವು ನೆರೆದು ವಾಲಿಯನ್ನು ಚಿತೆಯಲ್ಲಿರಿಸಿ ಅಗ್ನಿ ಸಂಸ್ಕಾರವನ್ನಿತ್ತವು. ವಾಲಿಯ ಸತಿ—ಸುತರ ಆಗಿನ ದುಃಖಶೋಕ ದಿಂದ ವನವೆಲ್ಲ ದುಮು ದುಮಿಸಿತು. !

ಶ್ರೀರಾಮನ ದಿವ್ಯಬಾಣದಿಂದ ಪಂಚತ್ವವನ್ನು ನೀಗಿದ ವಾಲಿಯೇ ಧನ್ಯಧನ್ಯನೆಂದು ಸುಗ್ರೀವ, ಅಂಗದ, ತಾರೆ ಮುಂತಾದವ ರೆಲ್ಲ ಭಾವಿಸಿ ರಾಮಚಂದ್ರನ ಸಲಹೆಯಂತೆ ವಾಲಿಯ ಔರ್ಧ್ವದೇಹಿಕ ಕ್ರಿಯೆಗಳನ್ನೆಲ್ಲ ಮುಗಿಸಿದರು.

## ೧೭. ಸೀತೆಯ ಶೋಧ

ವಾಲಿಯ ವಧೆಯ ತರುವಾಯ ಹನುಮಾನ ಮೊದಲಾಗಿ ಎಲ್ಲ ವಾನರ ಸರದಾರರು ಸುಗ್ರೀವನನ್ನು ಮೊದಲುಮಾಡಿ ಶ್ರೀರಾಮ ನಿದ್ದ ಪ್ರಸ್ರವಣಪರ್ವತಕ್ಕೆ ತೆರಳಿದರು. ಅಲ್ಲಿ ಹೋದ ನಂತರ ಹನು ಮಂತನು ಶ್ರೀರಾಮನನ್ನು ವಂದಿಸಿ " ಶ್ರೀರಾಮಚಂದ್ರಪ್ರಭು! ತಮ್ಮ ಸುಹೃತ್ಕೃಪೆಯಿಂದ ನಮ್ಮ ನಾಯಕ ಸುಗ್ರೀವನಿಗೆ ಸಂಪದ್ಯುಕ್ತವಾದ ಕಿಷ್ಕಿಂಧೆಯ ವಾನರರಾಜ್ಯವು ಲಭಿಸಿತು. ಇನ್ನು ತಾವು ರಾಜಧಾನಿಗೆ ಬಂದು ನಮ್ಮ ಸುಗ್ರೀವ ಮಹಾಶಯನು ರಾಜ್ಯಾರೋಹಣಪ್ರಸಂಗ ದಲ್ಲಿ ಕೃತಜ್ಞತಾ ಭಾವದಿಂದ ನಿಮಗೆ ಅರ್ಪಿಸುವ ಸತ್ಕಾರವನ್ನು ಸಂತೋಷದಿಂದ ಸ್ವೀಕರಿಸುವಿರಾದರೆ ಸುಗ್ರೀವನೂ ನಾವೂ ಕೃತ ಕೃತ್ಯರಾದೆವೆಂದು ಭಾವಿಸುವೆವು. ಈ ವಿಷಯವಾಗಿ ನಾವೆಲ್ಲರು ತಮ್ಮ ಅನುಜ್ಞೆಯನ್ನು ಬಯಸುವೆವು. ಚಿತ್ತೈಸುವದಾಗಬೇಕು " ಎಂದು ಸುಗ್ರೀವ ಮೊದಲಾದ ವಾನರರ ಪರವಾಗಿ ಬೇಡಿಕೊಂಡನು.

ಹನುಮಂತನಾಡಿದ ವಿನಯೋಕ್ತಿಗಳಿಂದ ಶ್ರೀರಾಮಚಂದ್ರನು ಆನಂದಪಟ್ಟು ಪ್ರತ್ಯುತ್ತರವಾಗಿ "ಹನುಮಾನ್! ನಾವು ಪಿತೃವಚನ

ಪೂರ್ಣತೆಯ ಪ್ರತಿಜ್ಞೆಯನ್ನು ಕೈಕೊಂಡಿರುವದರಿಂದ ಹದಿನಾಲ್ಕು ವರುಷ ಮುಗಿಯುವ ವರೆಗೂ ಯಾವದೊಂದು ಗ್ರಾಮ ಇಲ್ಲವೆ ನಗರ ಇವುಗಳನ್ನು ಪ್ರವೇಶಿಸಲಾರೆವು. ನಿರುಪಾಯವಾಗಿ ಇದನ್ನು ನಿಮ ಗೆಲ್ಲರಿಗೆ ತಿಳಿಸಬೇಕಾಯಿತು.. ನೀವು ಇನ್ನು ಏನೊಂದು ಬಗೆಯದೆ ಕಿಷ್ಕಿಂಧೆಗೆ ತೆರಳಿ ಸುಗ್ರೀವನಿಗೆ ಪಟ್ಟಗಟ್ಟಿರಿ. ಹಾಗು ಕುಮಾರ ಅಂಗದನನ್ನು ಯೌವರಾಜ್ಯಾಭಿಷೇಕದಿಂದ ಮರ್ಯಾದೆಗೊಳಿಸಿರಿ. ಆ ಅಂಗದನಲ್ಲಿಯ ಮೇಲ್ತರದ ಗುಣಗಳೇ 'ಅವನು ಯುವರಾಜನಾಗಲು ಅರ್ಹನಾಗಿರುವನು' ಎಂಬದನ್ನು ಸ್ಪಷ್ಟಪಡಿಸುವವು. ಎಂಬುದಾಗಿ ತನ್ನ ಮತವನ್ನು ವ್ಯಕ್ತಪಡಿಸಿದನು. ಇದಲ್ಲದೆ ಶ್ರೀರಾಮನು ಅಲ್ಲಿ ಬಂದವರಿಗೆಲ್ಲ—"ಸದ್ಯ ಶ್ರಾವಣಮಾಸವಿದೆ. ವರ್ಷಾಕಾಲದಲ್ಲಿ ಸುರಿಯುವ ಮೋಡ-ಮಳೆಗಳಿಂದಲೂ ಚಾತುರ್ಮಾಸ ವ್ರತದ ಧರ್ಮ—ಶಾಸ್ತ್ರಗಳ ನಿಬಂಧನೆಗಳಿಂದಲೂ ನಾವು ಈ ಪ್ರಸ್ರವಣ ಪರ್ವತದ ವಾಸ್ತವ್ಯವನ್ನು ಕದಲಿಸಬಾರದಾಗಿದೆ. ಅದಕ್ಕಾಗಿ ಸೀತಾ ಶೋಧದಕಾರ್ಯವನ್ನು ಕೈಕೊಳ್ಳುವ ನಮ್ಮ ಪ್ರವಾಸವನ್ನು ಆಶ್ವೀನ ಮಾಸದ ವರೆಗೆ ಮುಂದುವರಿಸೋಣ. ಆದ್ದರಿಂದ ನೀವು ಕಿಷ್ಕಿಂಧೆ ಯಲ್ಲಿದ್ದು ಈ ಕಾಲವನ್ನು ಸುಖವಾಗಿ ಕಳೆಯಿರಿ. ಅದು ವರೆಗೆ ನಾವು ಇಲ್ಲಿಯೇ ಇರುವೆವು" ಎಂದು ಹೇಳಿ ಸುಗ್ರೀವ ಹನುಮಾದಿ ಕಪಿಗಣಗಳಿಗೆಲ್ಲ ರಾಜಧಾನಿಗೆ ತೆರಳಲು ನಿರೋಪಿಸಿದನು. ವಾನರರೆಲ್ಲ ಕಿಷ್ಕಿಂಧೆಗೆ ಬಂದರು. ನಂತರ ರಾಮಾಜ್ಞೆಯನ್ನು ಸ್ಮರಿಸಿ ಒಳ್ಳೆ ಸಡ ಗರದಿಂದ ಸರದಾರರೆಲ್ಲರು ಸುಗ್ರೀವನಿಗೆ ಪಟ್ಟಗಟ್ಟಿದರು. ಅದ ರೊಡನೆಯೇ ಅಂಗದನಿಗೆ ಯೌವರಾಜ್ಯಾಭಿಷೇಕ ಮಾಡಿದರು. ಪ್ರಜಾಪರಿವಾರವೆಲ್ಲ ರಾಜ-ಯುವರಾಜರನ್ನು ವಂದಿಸಿ ಜಯಘೋಷ ಮಾಡಿದರು. ಅಮಾತ್ಯ ಸಚಿವ ಸೇನಾನಿಗಳೆಲ್ಲ ಶಿರಬಾಗಿದರು. ಮಾಂಡಲಿಕರೂ, ಮಿತ್ರರಾಜರುಗಳೂ ಹೊನ್ನು—ರನ್ನಗಳ ನಜರಾಣೆ

ಯನ್ನಿತ್ತರು. ಇಂತಾಗಿ ಜರುಗಿದ ಮಹಾ ವೈಭವದ ರಾಜ್ಯಾರೋಹಣದ ಸಮಾರಂಭದಿಂದ ಕಿಷ್ಕಿಂಧೆಯು ಇಂದ್ರನ ಅಮರಾವತಿಯ ಸೊಬಗನ್ನು ಹಿಂದೊಗೆದಂತೆ ಭಾಸವಾಗುತ್ತಿದ್ದಿತು. ಸಮಸ್ತ ವಾನರ ವೃಂದವು ಆನಂದೋದಧಿಯಲ್ಲಿ ಮಿಂದು ಮೆರೆದಾಡಹತ್ತಿತು.

ಶ್ರೀರಾಮಚಂದ್ರನು ಸುಗ್ರೀವ-ಹನುಮಾದಿಗಳನ್ನೆಲ್ಲ ಕಿಷ್ಕಿಂಧೆಗೆ ಬೀಳ್ಕೊಟ್ಟು ಲಕ್ಷ್ಮಣನೊಡನೆ ಪ್ರಸ್ರವಣ ಅಥವಾ ಮಾಲ್ಯವಾನ ಪರ್ವತದಲ್ಲಿ ಇರಹತ್ತಿದನು. ಆ ಪರ್ವತದ ಸೊಬಗನ್ನು ಕಂಡು ಅವರಿಗೆ ಕೌತುಕವೆನಿಸಿತು. ಪರ್ವತ ಪ್ರದೇಶದಲ್ಲಿಯ ಹಲತರದ ವೃಕ್ಷ—ಲತೆಗಳು ಫಲ–ಪುಷ್ಪಗಳಿಂದ ಭಾರವಾಗಿ ಬಾಗಿದ್ದವು. ಎಲ್ಲೆಡೆಯಲ್ಲಿಯೂ ಕರಿಯ ಸಣ್ಣ ದೊಡ್ಡ ಕಲ್ಲುಗಳಿಂದ ತುಂಬಿದ ಆ ಪರ್ವತವು ಕಾಡಿಗೆಯ ರಾಶಿಯಂತೆ ತೋರುತ್ತಿತ್ತಲ್ಲದೆ ಅಲ್ಲಲ್ಲಿ ಚಲ್ಲುವರಿದು ಬಿದ್ದಿರುವ ಬಿಳಿಯ ಹಾಗು ಕೆಂಪುವರ್ಣದ ಬಂಡೆಗಳಿಂದ ಭೂದೇವಿಯುಡುವ ಚಂದ್ರಕಾಳೀ ಸೀರೆಗೆ ಬಣ್ಣ ಬಣ್ಣದ ರೇಶಿಮೆಯಿಂದ ಕಸೀದೆಯನ್ನು ತೆಗೆದಂತೆ ಭಾಸವಾಗುತ್ತಿದ್ದಿತು. ಇಂಥ ನಿಸರ್ಗರಂಜಿತವಾಗಿ ಮನಹರವಾದ ಆ ಗಿರಿಯಲ್ಲಿ ತಮ್ಮ ಇಂಚರಗಳಿಂದ ಪಾಡುವ ಚಿತ್ರತರ ವರ್ಣಗಳುಳ್ಳ ಪಕ್ಷಿಗಣಗಳು ಸ್ವೇಚ್ಛೆಯಿಂದ ಮರಮರಕ್ಕೂ ಹಾರಾಡುತ್ತಿದ್ದವು.

ಈ ಎಲ್ಲ ಪರ್ವತದ ಸಿರಿ ಸೊಬಗನ್ನು ನಿರೀಕ್ಷಿಸುತ್ತ ಶ್ರೀರಾಮನು ಅಲ್ಲಿ ಸಂಚರಿಸುತ್ತಿರಲು ಮುಂದೆ ಒಂದು ಈಶಾನ್ಯಾಭಿಮುಖವಾದ ಗುಹೆಯು ಅವನ ದೃಷ್ಟಿಗೋಚರವಾಯಿತು. ಆದನ್ನು ಕಂಡು ಶ್ರೀರಾಮನು— “ ಲಕ್ಷ್ಮಣ! ಇದೀಗುಹೆಯನೋಡು! ಇಲ್ಲಿ ನಮ್ಮ ವಾಸ್ತವ್ಯಕ್ಕೆ ಒಳ್ಳೆ ಅನುಕೂಲತೆಯಿದೆ. ಸನಿಹದಲ್ಲಿಯೇ ಪೂರ್ಣಭರಿತ ತಟಾಕವಿರುವದು. ಗವಿಯ ಒಳಪ್ರದೇಶದಲ್ಲಿ ಮಂದ ಮಂದನೆ

ಸುಳಿಯುವ ಗಾಳಿಯಿರುವದರಿಂದ ಕೇವಲ ಸೃಷ್ಟಿದೇವತೆಯು ನಮ ಗಾಗಿಯೇ ಇದನ್ನು ನಿರ್ಮಿಸಿರಬಹುದೆಂದು ಊಹಿಸುವೆನು. ಇದು ಅಲ್ಲದೆ ಈ ಗುಹೆಗೂ ಕಿಷ್ಕಿಂಧೆಗೂ ನಡುವಿನ ಅಂತರವು ಅನಿತೊಂದಿಲ್ಲ. ಸದ್ಯ ಸುಗ್ರೀವನ ರಾಜ್ಯಾರೋಹಣದ ಸಮಾರಂಭದಲ್ಲಿ ಮೊಳಗುವ ವಾದ್ಯಗಳ ಧ್ವನಿಯು ಇಲ್ಲಿಗೆ ಕೇಳ ಬರುವದರಿಂದ ಆ ಅಂತರವನ್ನು ನೀನೇ ಕಂಡುಕೊಳ್ಳು. ಅದೇನೇ ಇರಲಿ, ಲಕ್ಷ್ಮಣಾ! ಈಗ ಸಂಪ್ರಾಪ್ತ ವಾದ ವರ್ಷಾಕಾಲವನ್ನು ಇಲ್ಲಿಯೇ ಇದ್ದುಕೊಂಡು ಕಳೆಯೋಣ" ಎನ್ನಲು ಲಕ್ಷ್ಮಣನು ಗುಹೆಯನ್ನೆಲ್ಲ ಸ್ವಚ್ಛ ಪಡಿಸಿದನು. ಅಂದಿನಿಂದ ಆ ಬಂಧುಗಳೀರ್ವರು ಅಲ್ಲಿಯೇ ಇರಹತ್ತಿದರು.

ಈ ಪ್ರಕಾರವಾಗಿ ರಾಮ—ಲಕ್ಷ್ಮಣರು ಪ್ರಸ್ರವಣ ಗಿರಿಯ ಗುಹೆಯಲ್ಲಿದ್ದುಕೊಂಡು ವರ್ಷರ್ತುವಿನಲ್ಲಾಗುವ ಸೃಷ್ಟಿಯ ವಿಶಿಷ್ಟತೆ ಯನ್ನು ಕಾಣಹತ್ತಿದರು. ಗಗನದಲ್ಲಿ ಕವಿದು ಬರುವ ಮೋಡಗಳೂ, ಅವುಗಳಿಂದ ಮೇಘರಾಜನುದುರಿಸುವ ಪರ್ಜನ್ಯ-ವೃಷ್ಟಿಗಳೂ ಮನ ಹರವಾಗಿ ಅವರ ನೋಟದಲ್ಲಿ 'ಸ್ತ್ರೀಯಳು ಗರ್ಭಧಾರಣೆಯಾಗಿ ನವ ಮಾಸ ಕಳೆದು ಶಿಶುವನ್ನು ಹೆರುವಂತೆ ರವಿಕಿರಣಗಳಿಂದ ಶೋಷಿಸ ಲ್ಪಟ್ಟ ಸಾಗರ ಜಲವು ಮೋಡವಾಗಿ ನಿಂತು ಒಂಭತ್ತು ತಿಂಗಳುಗಳ ತರುವಾಯ ಮಳೆಯ ಸ್ವರೂಪದಿಂದ ಬೀಳುವ ಬಗೆಯು ಕಂಡು ಬಂದಿತು. ಪಡುವಣ ದಿಕ್ಕಿನಿಂದ ಒಂದರಹಿಂದೊಂದರಂತೆ ಹಲವು ಮೋಡಗಳು ಮೇಲೇರಿ ಬಂದವುಗಳನ್ನು ಪರ್ವತವು ಮೋಡಗಳೆಂಬ ಗಂಟು ಗದಡಿಗಳನ್ನು ತನ್ನ ತಲೆಯ ಮೇಲೆ ಅಡಿಕಲೇರಿಸಿ ಹೊತ್ತು ಕೊಂಡು ನಿಂತಂತೆ ತೋರಿತು. ಹಾಗು ಸಂಧ್ಯಾರುಣಕಾಂತಿಯಿಂದೆ ಬಿಳಿ ಮೋಡಗಳ ಪಟ್ಟಿಗಳ ಅಂಚುಗಳು ಆರಕ್ತವಾಗಿ ತೋರಹತ್ತಿ ದ್ದವು. ಗಾಯಗೊಂಡ ಗಗನಕ್ಕೆ ಅದರ ಕ್ಷತವನ್ನು ಅರಿವೆಯ ನೀಳ್ದ ವಾದ ತುಣಿಕಿನಿಂದ ಬಿಗಿದು ಕಟ್ಟಿದಂತೆ ಕಂಡಿತು. ಇದಲ್ಲದೆ ಮೋಡ

ಗಳ ಘರ್ಷಣೆ, ಹೊಯ್ದಾಟ-ತಾಕಲಾಟಗಳಿಂದ ಹುಟ್ಟುವ ಮಿಂಚು ಗುಡುಗುಗಳು ಬಂಗಾರದ ಬಾರಕೋಲನ್ನು ಕಟಿದುದರಿಂದ ತಗುಲಿದ ಪೆಟ್ಟಿನಿಂದ ನಗನವು ಘೋರ ಗರ್ಜನೆ ಗೈಯ್ಯುವದೋ ಏನೋ ಅನ್ನುವಂತೆ ಭಾಸವಾಯಿತು.

ಇವೆಲ್ಲ ವರ್ಷಾಕಾಲದ ದೃಶ್ಯಗಳನ್ನಲ್ಲದೆ ಇನ್ನೂ ಹಲವು ಮನಹರ ಯುಕ್ತವಾಗಿ ವರ್ಣಿಸಿದ ಸಂಗತಿಗಳನ್ನು ಕಂಡು ಸೃಷ್ಟಿದೇವತೆಯ ಸಿರಿ-ಸೌಂದರ್ಯವನ್ನು ಅವರೀರ್ವರು ನಿರಲಸಿಕೆಯಿಂದ ಅನುಲಕ್ಷಿಸಿದರು. ಆದರೂ ಕ್ಷಣಕಾಲ ಮರೆಯಾಗಿದ್ದ ರಾಮನ ಸೀತಾವಿಯೋಗದ ದುಗುಡವು ಈ ಸನ್ನಿವೇಶ ನಿರೀಕ್ಷಣೆಯಿಂದ ಮತ್ತೆ ಪ್ರಾದುರ್ಭವಿಸಿತು. ಆತನು ಲಕ್ಷ್ಮಣನನ್ನು ಕುರಿತು—"ಲಕ್ಷ್ಮಣ! ಈ ವರ್ಷರ್ತುವಿನಲ್ಲಿ ಪ್ರವಹಿಸುವ ಹೊಳೆ-ಹಳ್ಳಗಳ ದಂಡೆಗಳಂತೆ ನನ್ನ ಧೈರ್ಯವು ಸ್ಥೈರ್ಯಗೆಡಹತ್ತಿದೆ! ಹಾಗು ಈಗ ನಡೆದಿರುವ ಗಂಭೀರ ಜಲಪ್ರಲಯದಂತೆ ಆ ರಾವಣನು ನನಗೆ ಅಸಾಧ್ಯವಾಗಿ ತೋರಬಹುದೇನೆ. ಈ ವರ್ಷಾಕಾಲವು ಮುಗಿಯುವವರೆಗೆ ನಾವು ಇಲ್ಲಿಯೇ ಇದ್ದು ಸುಗ್ರೀವನ ಮಾರ್ಗ ಪ್ರತೀಕ್ಷೆಗೆ ಹಂಬಲಿಸಿ ಕುಳ್ಳಿರಬೇಕಾಗಿದೆ!" ಎಂದು ಹೇಳಿದನು.

ಇಂತಿರಲು ವರ್ಷಾಕಾಲವು ಕಳೆದು ಶರತ್ ಕಾಲವು ಪ್ರಾಪ್ತವಾಯಿತು. ಆಗ ಆಕಾಶವು ನಿರಭ್ರವಾಗಿಯೂ-ನಿರ್ಮಲವಾಗಿಯೂ ತೋರಹತ್ತಿತು. ರಾತ್ರಿಕಾಲದಲ್ಲಿ ಚಂದ್ರ ಪ್ರಕಾಶವು ಶುಭ್ರವಾಗಿ ತೋರುತ್ತಿತ್ತು. ಸರೋವರಗಳು ಕಮಲಗಳಿಂದ ತುಂಬಿ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುತ್ತಿದ್ದವು. ಕೆರೆ, ಭಾವಿಗಳೆಲ್ಲ ತುಂಬಿ ಸೂಸುತ್ತಿದ್ದವು. ವಾಯುವು ಮಂದವಾಗಿ ಬೀಸುತ್ತಿದ್ದನು. ಇಂಥ ಈ ಶರತ್ ಕಾಲದಲ್ಲಿ ಶ್ರೀರಾಮಚಂದ್ರನು ವಿರಹಕ್ರಾಂತನಾಗಿ

ಲಕ್ಷ್ಮಣಾ ! ಸುಗ್ರೀವನು ನಮ್ಮನ್ನು ಮರೆತಂತೆ ತೋರುತ್ತದೆ. ಇದು ವರೆಗೆ ನಾನು ಸೀತಾವಿಯೋಗ ದುಃಖವನ್ನು ಎಂತೋ ಸಹಿಸಿದೆನು. ಭರವಸೆಯಿತ್ತ ಸುಗ್ರೀವನು ಇನ್ನೂ ನಮ್ಮ ಮೇಲೆ ಕೃಪೆ ಮಾಡು ವಂತೆ ತೋರುವದಿಲ್ಲ. ನಾನು ನನ್ನ ರಾಜ್ಯವನ್ನೂ ಸತಿಯಳನ್ನೂ ಕಳೆದುಕೊಂಡೆನು. ನನ್ನಂತೆ ದರಿದ್ರನಾಗಿದ್ದ ಆ ಸುಗ್ರೀವನಿಗೆ ಹೆಂಡತಿಯೂ ರಾಜ್ಯವೂ ಪುನಃ ದೊರೆತಿದ್ದರಿಂದ ಈಗ ಆತನು ನಮ್ಮ ನೆನಪು ಸಹ ತೆಗೆಯುತ್ತಿರಲಿಕ್ಕಿಲ್ಲ. ಕಾರಣ ನೀನು ಕಿಷ್ಕಿಂಧೆಗೆ ಹೋಗಿ ಸುಗ್ರೀವನನ್ನು ಕಂಡು ಅವನಿಗೆ ನನ್ನ ಈ ಸಂದೇಶವನ್ನು ತಿಳಿಸು.

"ಯುಕ್ತಾಯುಕ್ತ ವಿಚಾರಿಸಿ ಇನ್ನೊಬ್ಬರಿಗೆ ತಾನಿತ್ತ ವಚನ ದಂತೆ ವರ್ತಿಸುವವನೇ ನಿಜವಾದ ವೀರನು. ಹಾಗೂ ಸ್ವಾರ್ಥಕ್ಕಾಗಿ ಹಂಬಲಿಸಿ ಇನ್ನೊಬ್ಬನೊಡನೆ ಸ್ನೇಹಭಾವದಿಂದ ನಡೆದು ಕಾರ್ಯಲಾಭ ಹೊಂದಿ ಬಳಿಕ ಆ ಗೆಳೆಯನನ್ನು ಮರೆಯುವವನೇ ಕೃತಘ್ನನು. ಇಂಥವನು ಮುಂದೆ ರಾಕ್ಷಸನ ತುತ್ತಾಗುವನು" ಲಕ್ಷ್ಮಣ! ಈ ಮಾತುಗಳನ್ನು ಸುಗ್ರೀವನಿಗೆ ತಿಳಿಸಿ—'ನೀನು ಕೃತಘ್ನನಾಗಬೇಡ. ಅಂತಾದರೆ ನಿಮ್ಮ ಅಣ್ಣ ವಾಲಿಯು ನಡೆದು ಹೋದ ವಿಲೋಕದ ದಾರಿಯಲ್ಲಿ ನೀನು ಹೋಗಬೇಕಾದೀತು' ಎಂದು ತಿಳಿಸು. ಎಂದು ಸಂದೇಶವನ್ನು ಕಳಿಸಿದನು.

ಶ್ರೀರಾಮಚಂದ್ರನ ಅತಿ ಕಟುತರವಾದ ಹಾಗು ಬೋಧಪರ ವಾದ ಸಂದೇಶದೊಡನೆ ಲಕ್ಷ್ಮಣನು ಕಿಷ್ಕಿಂಧೆಯನ್ನು ಕುರಿತು ತೆರಳಿ ದನು. ಪಟ್ಟಣದ ಸನಿಹಕ್ಕೆ ಬಂದು ಅಲ್ಲಿ ನಾನಾ ಪ್ರಕಾರದ ರತ್ನ ಗಳಿಂದ ಮೆರೆಯುತ್ತಿರುವ ಉನ್ನತ ಗೋಪುರಗಳನ್ನು ಕಂಡು ಆಶ್ಚರ್ಯ ಪಟ್ಟನು. ಮುಂದೆ ಹಾಗೇ ನಗರದಲ್ಲಿ ಸಾಗಿದನು. ರಾಜಧಾನಿ

ಯಲ್ಲಿಯ ಮಹಾನ್ ಮಹಾನ್ ಕಪಿವರರ ಮನಃ ಪ್ರಸನ್ನತೆಗೆ ಆವಶ್ಯಕಾನುಕೂಲತೆಗಳುಳ್ಳ ಹಾಗು ಫಲಭರಿತ ಗಗನ ಚುಂಬಿತ ಮರಗಳುಳ್ಳ ರಮಣೀಯ ಪುರೋದ್ಯಾನಗಳು ನಂದನವನದ ಶೋಭೆಯನ್ನು ಸ್ಪರ್ಧಿಸುತ್ತಿರುವಂತೆ ಅವನಿಗೆ ತೋರಿತು. ನಗರಸ್ಥಿತ ಕೋಟೆ-ಕೊತ್ತಳಗಳೂ ಉನ್ನತೋನ್ನತ ಹರ್ಮ್ಯ-ಸೌಧಗಳೂ ಅವನ ದೃಷ್ಟಿಯಲ್ಲಿ ಲೋಕಚಂಚಲೆ ಲಕ್ಷ್ಮಿಯೇ ಕಪಿರಾಜ್ಯಕ್ಕೆ ಕಳೆಯನ್ನಿತ್ತಿರುವಳೆಂಬುದನ್ನು ಸೂಚಿಸುತ್ತಿದ್ದವು. ನಗರದ ಶೋಭೆಯನ್ನು ನಿರೀಕ್ಷಿಸುತ್ತ ಮನಸ್ಸಿನಲ್ಲಿ ಏನೊಂದು ಸಂಶಯ ತಾರದೆ ಕೋಟೆಯೊಳಕ್ಕೆ ಸೇರಿ ಸುಗ್ರೀವನ ರಾಜಮಂದಿರವನ್ನು ಸೇರಿದನು.

ಅಕಸ್ಮಾತ್ತಾಗಿ ಆಗಮಿಸಿದ ಲಕ್ಷ್ಮಣನನ್ನು ಸುಗ್ರೀವನು ಕಂಡೂ ಕಾಣದಂತವನಾಗಿ ಬರಮಾಡಿಕೊಳ್ಳಲಿಲ್ಲ. ಅರಮಂದಿರದ ನಾರಿಯರೊಡನೆ ಆನಂದದಿಂದ ಹರಟೆ ಕೊಚ್ಚುತ್ತಲಿದ್ದ. ಬಾಹ್ಯ ಪ್ರಪಂಚವನ್ನು ಮರೆತವನ ಸ್ಥಿತಿಯವನದಾಗಿತ್ತು. ಆಗಿನ ಆತನ ಬಗೆಯನ್ನು ನಿರೀಕ್ಷಿಸಿ ಲಕ್ಷ್ಮಣನು ಸಂತಪ್ತನಾಗಿ ಸುಗ್ರೀವನ ಲಕ್ಷ್ಯವನ್ನು ತನ್ನೆಡೆಗೆ ಸೆಳೆದುಕೊಳ್ಳುವ ವಿಚಾರದಿಂದ ತನ್ನ ಧನುಷ್ಟಂಕಾರದ ಧ್ವನಿಯನ್ನು ಹುಟ್ಟಿಸಿದನು. ಆ ಮಹಾರವದಿಂದ ಭಯಭೀತನಾಗಿ ಕ್ಷಣಕಾಲ ದಿಕ್ಕನ್ನರಿಯದ ಸುಗ್ರೀವನು ತನ್ನ ಅತ್ತಿಗೆ ತಾರಾದೇವಿಗೆ—'ಶ್ರೀರಾಮಚಂದ್ರಾನುಜ ಧೀರ ಲಕ್ಷ್ಮಣನ ಕೋಪವು ಆತನು ನುಡಿಸಿದ ಧನುಷ್ಟಂಕಾರದಿಂದ ಸೂಚಿತವಾಗುವಂತಿದೆ. ನೀವು ಅದನ್ನರಿತುಕೊಂಡು ಬರುವದು' ಎಂದು ಕಳಿಸಿದನು.

ಮೈದುನನಿಂದ ಪ್ರೇಷಿತಳಾಗಿ ಲಕ್ಷ್ಮಣನೆಡೆಗೆ ತಾರಾದೇವಿಯು ಹೋಗಿ ಸ್ತ್ರೀ ಸೌಜನ್ಯ-ಮರ್ಯಾದೆಗಳಿಂದ ಆತನನ್ನು ಕಂಡಳು. ಹಾಗು "ಹೇ ರಾಜಪುತ್ರ ! ತಾವು ಕೋಪೋದ್ದೀಪಿತರಾಗಿ ಇಲ್ಲಿಗೆ ಬಂದಿರುವಂತೆ ಭಾಸವಾಗುತ್ತಿದೆ. ಇದಕ್ಕೆ ಕಾರಣವೇನಾಯಿತೋ ನಾವರಿ

ಯೆವು. ಗಿರಿಪಾಸರಾಗಿದ್ದ ತಮಗೆ ನಮ್ಮ ವಾನರರಲ್ಲಿ ಯಾರಾದರಿಂದ ಅವಮಾನಗೊಳಿಸಲ್ಪಟ್ಟಿತೇ? ಹಾಗಿದ್ದುದಾದರೆ ಅವರು ಅರಣ್ಯವನ್ನು ದಹಿಸುವ ಬೇಗೆಗಾರರೆಂದೇ ತಿಳಿಯುವೆನು. ಇಷ್ಟೇ ಅಲ್ಲ. ನೀವು ಅದನ್ನು ತಿಳಿಸಿದ್ದಾದರೆ ಅವರನ್ನು ಕೂಡಲೆ ಶಾಸನೆಗೆ ಗುರಿಪಡಿಸಲ್ಪಡುವೆವು. ರಾಜಕುಮಾರ ! ನಿಮ್ಮ ಸಖ್ಯತ್ವವನ್ನು ಕೈಕೊಂಡ ಸುಗ್ರೀವ ಮಹಾರಾಜನು ನನ್ನ ಮೈದುನನೆಂಬದನ್ನು ನಿಮಗೆ ತಿಳಿಸಬೇಕಾಗಿಲ್ಲ. ಅವರಿಂದಾಗಲಿ, ಯುವರಾಜ ಅಂಗದನಿಂದಾಗಲಿ ಏನೊಂದು ಅಪರಾಧಗಳು ತಿಳಿಯದೊದಗಿದ್ದರೆ ನಾನು ತಮ್ಮ ಹಾಗು ನಿಮ್ಮ ಮುಖಾಂತರ ಶ್ರೀರಾಮಚಂದ್ರಪ್ರಭುವಿನ ಕ್ಷಮೆಯನ್ನು ಬೇಡುವೆನು'' ಎಂದು ತಾರಾದೇವಿಯು ಲಕ್ಷ್ಮಣನೊಡನೆ ಹಿತೋಕ್ತಿಗಳನ್ನಾಡಿ ಅವನನ್ನು ಅರಮನೆಗೆ ಕರೆತಂದಳು.

ತಾರೆಯೊಡನೆ ಅರಮಂದಿರಕ್ಕೆ ಬರುವ ಲಕ್ಷ್ಮಣನನ್ನು ಸುಗ್ರೀವನು ಕಂಡು ಎದುರ್ಗೊಳ್ಳಲು ಆತನ ಮುಂದೆ ಬಂದು ಕೈಮುಗಿದು ನಿಂತು 'ಬರುವದಾಗಬೇಕು' ಎಂದು ಭಯದಿಂದ ಬಿನ್ನೈಸಿದನು. ಆಗ ಲಕ್ಷ್ಮಣನು ನಮ್ರನಾಗಿರುವ ಸುಗ್ರೀವನನ್ನು ಕುರಿತು— ''ಸುಗ್ರೀವ ! ಶ್ರೀರಾಮಚಂದ್ರನ ಸಂದೇಶವಿಂತಿದೆ. 'ಸತ್ಯವಂತನೂ, ಜಿತೇಂದ್ರಿಯನೂ, ದಯಾಪರನೂ ಮತ್ತು ಕೃತಜ್ಞತೆಯುಳ್ಳವನೂ ಆಗಿರುವವನು ಸರ್ವರಿಗೂ ಸುಪ್ರಿಯನಾಗುವನು. ಆದರೆ ಅಸತ್ಯ, ಚೌರ್ಯ, ವಂಚನೆ ಈ ಮೊದಲಾದ ದುರ್ಗುಣಗಳಿಂದ ಯುಕ್ತನಾಗಿರುವವನು ಜಗತ್ತಿನಲ್ಲಿ ನೀಚನೆನ್ನಿಸಿಕೊಳ್ಳುವನು. ಈ ನೀಚನು ತನ್ನ ಪಾಪವನ್ನು ಪ್ರಾಯಶ್ಚಿತ್ತದಿಂದ ಕ್ಷಾಲನೆ ಮಾಡಿಕೊಳ್ಳಲು ಶಾಸ್ತ್ರಗಳು ಅವಕಾಶವಿಟ್ಟಿವೆ. ಇವನಿಗಿಂತಲೂ ಪರಮ ನೀಚನೆನಿಸಿದ ಕೃತಘ್ನನೊಬ್ಬನಾಗಿರುವನು. ಅವನ ದುರ್ಗುಣದ ಪಾಪ ನಿವಾರಣೆಗೆ

ಶಾಸ್ತ್ರದಲ್ಲಿ ದೇಹಾಂತ ಪ್ರಾಯಶ್ಚಿತ್ತದ ವಿನಹ ಬೇರಾವವನ್ನೂ ಹೇಳಿರುವದಿಲ್ಲ.

ಇದೇ ನಿಮಗೆ ಶ್ರೀರಾಮಪ್ರಭುವಿನ ಬೋಧಾನ್ವಿತವಾದ ಸಂದೇಶ. ಸುಗ್ರೀವ! ಇನ್ನು ನಿನಗೆ ಸ್ಪಷ್ಟವಾಗಿ ಎಚ್ಚರಗೊಳಿಸುವ ಮಾತುಗಳೆಂದರೆ—ಚಾತುರ್ಮಾಸ ಗತಿಸಿದರೂ ನೀನು ಇನ್ನೂ ಶ್ರೀರಾಮನ ಕಾರ್ಯ್ಯವನ್ನು ಕೈಕೊಳ್ಳಲಿಲ್ಲ. ಕೇವಲ ನಿಶ್ಚಿಂತನಾಗಿ ಭೋಗ ಸುಖಕ್ಕೆ ಮೆಚ್ಚಿ ಕಾಲಕಳೆಯುತ್ತಿರುವಿ. ಅಡವೀಪಾಲಾಗಿ ಜೀವಿಸುತ್ತಿದ್ದ ನೀನು ಈ ಸಂಪನ್ನ ಪರಿಣಾಮವನ್ನು ನಿನಗೆ ಒದಗಿಸಿಕೊಟ್ಟವರ ಉಪಕಾರದ ಭಾರವನ್ನು ಇಳಿಸದೆ ಇನ್ನೂ ಹಾಗೇ ಇರುವಿಯಲ್ಲ! ನಿನ್ನ ಕ್ರಿಯೂ ಸಫಲತೆಯುಂಟಾಗಿ ನಾಲ್ಕು ತಿಂಗಳಾದವು. ಇನ್ನು ಮೇಲೆ ಸೀತಾ ಶೋಧದ ಕ್ರಿಯೆಯನ್ನು ಕೈಕೊಳ್ಳದಿದ್ದರೆ ನಿನ್ನ ಬಂಧು ವಾಲಿಯು ಸ್ವರ್ಗಕ್ಕೆ ಗತಿಸಿದ ಅವಸ್ಥೆಯೇ ನಿನಗುಂಟೆಂಬುದನ್ನು ಬಲವಾಗಿ ನಂಬು. ಈ ಎಲ್ಲ ವಿಚಾರಗಳನ್ನು ಲಕ್ಷಿಸಿ ಇನ್ನು ನೀನು ನಿನಗೆ ಸರಿಕಂಡ ಮಾರ್ಗವನ್ನು ಸ್ವೀಕರಿಸು. ನಾನಂತೂ ಕೇವಲ ಪ್ರಭುವಿನ ಸಂದೇಶವಾಹಕನಾಗಿ ನಿನಗೆ ತಿಳಿಸಿದೆನು. ಇನ್ನು ನಿನ್ನ ಪ್ರತ್ಯುತ್ತರವನ್ನಾದರೂ ಒಯ್ದು ಶ್ರೀರಾಮನ ಎದುರಿಡುತ್ತೇನೆ.' ಎಂದು ನುಡಿದು ಲಕ್ಷ್ಮಣನು ಮೌನತಾಳಿದನು.

ಲಕ್ಷ್ಮಣನ ಮಾತುಗಳಿಂದ ಸುಗ್ರೀವನು ಘೋರನಿದ್ರೆಯಿಂದ ಎಚ್ಚರಗೊಂಡ ಮನುಷ್ಯನಂತೆ ಅಡಬಡಿಸಿ, ಆತನೆದುರು ಬಂದು ತನ್ನ ಕಂಠದಲ್ಲಿಯ ಹೂಮಾಲೆಯನ್ನು ತೆಗೆದೊಗೆದು ವಿನಯದಿಂದ:—

"ಲಕ್ಷ್ಮಣ! ಶ್ರೀರಾಮ ಪ್ರಭುವಿನ ಕೃಪೆಯಿಂದ ನನ್ನ ಬಂಧುವಿನ ಹಸ್ತಗತವಾದ ಸತಿಯೂ, ರಾಜ್ಯವೂ ನನಗೆ ಮರಳಿ ದೊರೆತವು. ಈ ಆತನ ಉಪಕಾರವನ್ನು ನಾನೆಂದಿಗೂ ಮರೆಯಲಾರೆ. ಇಹ

ಜನ್ಮದಲ್ಲಿ ನಾನು ಆ ಭಾರವನ್ನು ಕೆಲವಂಶದಿಂದಲಾದರೂ ಇಳಿಸಲು ಸಮರ್ಥನಲ್ಲ. ಇನ್ನು ನಾನು ಕೈಕೊಳ್ಳುವ ಕೆಲಸವೆಂದರೆ ಸೀತಾ ಮಾತೆಯ ಶೋಧ. ಶ್ರೀರಾಮಪ್ರಭುವು ತನ್ನ ದಿವ್ಯಬಲದಿಂದಲೇ ರಾವಣನನ್ನು ವಧೆಮಾಡಿ ಸೀತೆಯನ್ನು ತರುವನು. ನಾನು ನಿಮಿತ್ತ ಮಾತ್ರ ಆತನಿಗೆ ಸಹಕಾರಿ ಮುಂದಾಳಾಗಿ ಆತನ ಆಜ್ಞೆಯನ್ನು ಶಿರಸಾ ವಹಿಸಿ ಕಾರ್ಯವನ್ನು ಆರಂಭಿಸುವೆನು. ರಾವಣನು ಯುದ್ಧಮಾಡದೆ ಅಣಿಯುವಂತಿಲ್ಲ. ಆದಕ್ಕಾಗಿ ನಾನು ಮೊದಲೇ ಯುದ್ಧದ ಸಲಕರಣೆಗಳನ್ನು ತೀವ್ರವೇ ಸರಿಪಡಿಸಿಕೊಂಡು ಶ್ರೀರಾಮಚಂದ್ರರ ಸನ್ನಿಧಿಗೆ ಬರುವೆ'' ಎಂದು ನುಡಿದನು. ಬಳಿಕ ಲಕ್ಷ್ಮಣನು ಸುಗ್ರೀವನ ಸೌಜನ್ಯಯುಕ್ತವಾದ ವರ್ತನವನ್ನು ಹೊಗಳಿ ಸುಗ್ರೀವ! ನಮಗೆ ನಿನ್ನ ಸಹಾಯವು ಮಹತ್ತರವಾದುದು. ನೀನು ಬರುವದರಿಂದ ಶೋಕಾರ್ತನಾಗಿರುವ ನಮ್ಮ ಅಣ್ಣನಿಗೆ ಸಮಾಧಾನವೆನ್ನಿಸುವದು. ಆದಕ್ಕಾಗಿ ಕಿಂಚಿತ್ತಾದರೂ ಕಾಲವನ್ನು ಅವಕಾಶಕ್ಕೆ ನೂಕದೆ ಈಗಲೇ ನನ್ನೊಡನೆ ಬರುವದು ಒಳಿತು" ಎಂದು ಹೇಳಲು ಸುಗ್ರೀವನು ಅದಕ್ಕೊಪ್ಪಿ ಹೊರಡಲಣಿಯಾದನು.

ಆ ಕೂಡಲೆ ಸುಗ್ರೀವ ರಾಜಾಜ್ಞೆಯಂತೆ ಸಚಿವ ಹನುಮಂತನು ರಾಜ್ಯದ ಎಲ್ಲ ನಿಟ್ಟುಗಳಲ್ಲಿಯ ಸೈನ್ಯಗಳನ್ನು ಒಟ್ಟಾಗಿಸುವದಕ್ಕಾಗಿ ಸರದಾರರನ್ನು ದಿಕ್ಕು ದಿಕ್ಕಿಗೆ ಕಳಿಸಿದನು. ಪಶ್ಚಿಮದಿಕ್ಕಿನ ಅಸ್ತಗಿರಿಯಿಂದ ಹತ್ತು ಕೋಟಿ ವಾನರ ಸೈನ್ಯವು ಹಾ! ಹಾ ಎನ್ನುವಷ್ಟರಲ್ಲಿ ಬಂದು ಪ್ರಸ್ರವಣ ಪರ್ವತಕ್ಕಿಳಿಯಿತು. ಕೈಲಾಸಗಿರಿಯಿಂದ ಬಲಾಢ್ಯವಾದ ಸೈನ್ಯವು ಸಹಸ್ರ ಕೋಟಿಯಾಗಿ ಬಂದು ಅದಕ್ಕೆ ಕೂಡಿಕೊಂಡಿತು. ಎಲ್ಲ ದಿಕ್ಕುಗಳಿಂದ ಬಂದ ಸೇನೆಯು ಸುಮಧುರಫಲಗಳನ್ನೂ ದುರ್ಮಿಳವಾದ ದಿವ್ಯ ವನಸ್ಪತಿಗಳನ್ನೂ ಸುಗ್ರೀವ ರಾಜನಿಗೆ ಕಾಣ್ಕೆಯಾಗಿ ತಂದಿತ್ತವು.

ಆ ಬಳಿಕ ಸುಗ್ರೀವನ ಕಟ್ಟಪ್ಪಣೆಯಂತೆ ಎಲ್ಲವಾನರ ಸೈನ್ಯವು ಆ ಪರ್ವತವ ತುಂಬೆಲ್ಲ ವ್ಯವಸ್ಥಿತವಾಗಿ ಕೈಜೋಡಿಸಿಕೊಂಡು ನಿಂತಿತು. ಆಗ ಸುಗ್ರೀವನು ಲಕ್ಷ್ಮಣನೊಡನೆ ಶ್ರೀರಾಮನ ಹತ್ತಿರ ಬಂದು 'ಸಿದ್ಧತೆಯು ಪೂರ್ಣವಾಗಿದೆ. ವ್ಯೂಹವನ್ನು ನಿರೀಕ್ಷಿಸುವನು' ಎಂದು ಬಿನ್ನಯಿಸಿದನು. ಕೂಡಲೇ ಶ್ರೀರಾಮನು ಗುಹೆಯಿಂದ ಹೊರಬಂದು ನೋಡುತ್ತಿರಲು ಆ ಕಪಿಸೈನ್ಯವೆಲ್ಲ ವಿಸ್ತೀರ್ಣ ಸರೋವರದಲ್ಲಿಯ ಹಲವು ವರ್ಣದ ಕಮಲ-ಕುವಲಯ-ಕಲ್ಹಾರ ಮೊದಲಾದ ಕುಸುಮಗಳ ಮೊಗ್ಗುಗಳಂತೆ ಕೈಮುಗಿದುಕೊಂಡು ನಿಂತಿರುವದನ್ನು ಕಂಡು ಒಮ್ಮೆಲೆ ಹರುಷವುಕ್ಕೇರಿ ಅತನು ಸುಗ್ರೀವ! ಸನ್ಮಿತ್ರಾ! ಇತ್ತಬಾರೆಂದು ಸೆಳೆದು ಬಿಗಿಯಾಗಿ ಅಪ್ಪಿದನು. ಹಾಗು ಆತನನ್ನು ತನ್ನ ಕೆಲದಲ್ಲಿ ಕುಳ್ಳಿರಿಸಿಕೊಂಡು—"ಧರ್ಮ, ಅರ್ಥ, ಕಾಮಗಳನ್ನು ಸರ್ವದಾಯಥಾವತ್ತಾಗಿ ಪಾಲಿಸುವ ರಾಜನು ಸರ್ವತ್ರ ವಿಜಯಿಯಾಗುವನು. ಕಾಮುಕವೃತ್ತಿಯಿಂದ ಜೀವಿಸಿ, ಪರರನ್ನು ವಂಚಿಸಿ, ಸ್ವಾರ್ಥವನ್ನೇ ಗುರಿಯಾಗಿಟ್ಟುಕೊಂಡ ರಾಜನು ರಾಕ್ಷಸನೇ ಹೊರತು ಅವನು ರಾಜನಲ್ಲ. ಅವನನ್ನು ಜಯಶ್ರೀಯು ಎಳ್ಳನಿತೂ ದೃಷ್ಟಿಸಲಾರಳು ನೀನು ಈ ಸುಷ್ಟು—ದುಷ್ಟಗಳ ತಾರತಮ್ಯವರಿತು ವಿಚಾರ ಪೂರ್ವಕವಾಗಿ ಮುಂದಿನ ಕೆಲಸವನ್ನು ಕೈಕೊಳ್ಳು" ಎಂದು ಧರ್ಮಬೋಧೆಯನ್ನುಸುರಿದನು.

ಶ್ರೀರಾಮನಿಂದ ನೈತಿಕ ಬೋಧೆಪಡೆದ ಸುಗ್ರೀವನು "ಹೇ ರಾಮಚಂದ್ರ! ಈ ಅಪಾರವಾದ ರಾಜೈಶ್ವರ್ಯವು ನಿಮ್ಮ ಕೃಪೆಯಿಂದಲೇ ನನಗೆ ಲಭಿಸಿತು. ಈ ನಿಮ್ಮ ಉಪಕಾರವನ್ನು ನಾನು ಇಹ ಜನ್ಮದಲ್ಲಿ ತೀರಿಸುವದಂತೂ ಒತ್ತಟ್ಟಿಗಿರಲಿ ನಾನು ಇಂಥ ಹಲವು ಜನ್ಮಗಳನ್ನು ತಳೆದರೂ ಕೂಡ ತೀರಿಸಲು ನನಗೆ ಅಸಾಧ್ಯವೆಂದೇ ಹೇಳಬಹುದು. ಆದರೂ ಚಿರಂತನವಾಗಿ ನಿಮ್ಮ ಸ್ಮರಣೆಯಿಂದಲೇ ಮಾತ್ರ ನನ್ನ ಕೃತ

ಜ್ಞತೆಯನ್ನು ವ್ಯಕ್ತಪಡಿಸುವೆನು. ಸದ್ಯ ನಾವು ಕೈಕೊಳ್ಳುವ ಸೀತಾ ಮಾತೆಯ ಶೋಧದ ಕಾರ್ಯವನ್ನು ನನ್ನ ಕಪಿ ಸೇನೆಯು ಮನಃ ಪೂರ್ವಕವಾಗಿ ಸ್ವೀಕರಿಸುವದು. ” ಎಂದು ಹೇಳಿದನು.

ಸುಗ್ರೀವನ ಮಾತುಗಳಿಂದ ಆನಂದಭರಿತನಾದ ರಾಮನು “ ಸುಗ್ರೀವ! ಈ ಪ್ರಥ್ವಿಗೆ ಮೋಡಗಳಿಂದ ಮಳೆಯೂ, ರವಿಕಿರಣ ಗಳಿಂದ ಪ್ರಕಾಶವೂ ಸಹಜವಾಗಿ ದೊರೆಯುವಂತೆ ನಿನ್ನಂತಹಸನ್ಮಿತ್ರ ನಿಂದ ಸಹಾಯ-ಸಹಕಾರಗಳು ಸ್ವಾಭಾವಿಕವಾಗಿ ದೊರೆಯುವವು. ಇದರಲ್ಲೇನು ಆಶ್ಚರ್ಯ? ” ಎಂದು ಪ್ರತಿಯಾಗಿ ಗೌರವಿಸಿದನು.

ಆ ಬಳಿಕ ಸುಗ್ರೀವನು ಶ್ರೀರಾಮನಿಗೆ ಎಲ್ಲ ಕಡೆಯಿಂದ ಬಂದ ಸೈನ್ಯದ ಹಾಗು ಸೇನಾನಿಗಳ ಪರಿಚಯ ಮಾಡಿಕೊಟ್ಟನು. ಇಡೀ ಸೇನಾಸಾಗರವನ್ನು ಆತನಿಗೆ ತೋರಿಸಿ– “ ಪ್ರಭು! ಇದೆಲ್ಲದರ ಆಧಿ ಪತ್ಯವು ತಮ್ಮದೇ ಆಗಿರುವದು. ಇನ್ನು ತಾವು ತಮ್ಮ ನಿಯಂತ್ರಣ ದಲ್ಲಿರಿಸಿಕೊಂಡು ಅನುವಾದಂತೆ ಅನುಜ್ಞೆಯನ್ನೀಯಬೇಕು ” ಎಂದು ಹೇಳಿದನು.

ಶ್ರೀರಾಮನು ‘ಸುಗ್ರಿವ ಇನ್ನು ಮೇಲೆ ನಮ್ಮ ಕಾರ್ಯದ ಸುಗ ಮತೆಯು ನಿಸ್ಸಂಶಯವಾಗಿ ನೆರವೇರುವದು. ನೀನೇ ಎಲ್ಲ ಸೇನೆಯ ವ್ಯವಸ್ಥೆಯನ್ನು ಕೈಕೊಳ್ಳು. ನಿನ್ನಮನಸ್ಸಿಗೆ ಬಂದಂತೆ ಈ ಸೇನೆ ಯನ್ನು ಮುಂದುವರಿಸು ’ ಎಂದು ಅಪ್ಪಣೆಯಿತ್ತನು. ಸುಗ್ರೀವನ ಬಲಕ್ಕೆ ಕೈಮುಗಿದುನಿಂತ ಹನುಮನನ್ನು ಕುರಿತು ರಾಮನು— “ ಹನುಮಾನ್ ನೀವೆಲ್ಲರು ಸುಗ್ರೀವರಾಜನ ಕಟ್ಟಪ್ಪಣೆಯನ್ನು ಪಾಲಿ ಸಿರಿ. ಸೀತಾಶೋಧದಕಾರ್ಯವು ನಿನ್ನಂಥ ವೀರರಿಂದಲೇ ಸಾಧ್ಯವು. ಇದುವರೆಗೆ ಕೇಳಿದ ಸಂಗತಿಗಳಿಂದ ರಾವಣನು ದಕ್ಷಿಣನಿಟ್ಟಿಗೆ ಹೋಗಿರ ಬಹುದೆಂಬ ಅನುಮಾನವು ದೃಢಪಡುವದು. ನೀನು

ಆ ದಿಸೆಯಲ್ಲಿ ಪ್ರಯಾಣ ಬಳಿಸಿ ಕಾರ್ಯವನ್ನುಮಾಡು. ಒಂದು ವೇಳೆ ಸೀತೆಯನ್ನು ನೀನು ಕಂಡಿರುವಿಯಾದರೆ ಇದುವರೆಗೆ ಆಕೆಯು ನಿನ್ನನ್ನು ಗುರುತಿಸುವದಿಲ್ಲ. ಆದರೂ ನೀನವಳಿಗೆ ನಮ್ಮ ಕುಶಲ ವಾರ್ತೆಯನ್ನು ತಿಳಿಸಿ ಧೈರ್ಯವನ್ನವಲಂಬಿಸಲು ತಿಳಿಸು. ನಿನ್ನ ಮಾತುಗಳ ಮೇಲೆ ಆಕೆಯ ವಿಶ್ವಾಸವು ಉಂಟಾಗದಿದ್ದರೆ ಅಷ್ಟರಿಂದ ನೀನು ವಿಕಲ್ಪವನ್ನು ಗ್ರಹಿಸದೆ ಖಿನ್ನನಾಗಬೇಡ ಈ ನನ್ನ ಮುದ್ರಿಕೆಯು ನಿನ್ನ ಜೊತೆಗಿರಲಿ ಇದನ್ನು ಅವಳು ಸಂಪೂರ್ಣ ಮಾನ್ಯಮಾಡುವಳು. ಆಕೆಯು ಜೀವಂತವಾಗಿ ಉಳಿದು ನಿನಗೆ ಭೆಟ್ಟಿಯಾದಲ್ಲಿ ಈ ಮುದ್ರಿಕೆಯ ಉಂಗುರದಿಂದ ಆಕೆಯಲ್ಲಿ ಧೈರ್ಯ-ವಿಶ್ವಾಸಗಳನ್ನು ಹುಟ್ಟಿಸಿ ಬರು " ಎಂದು ಹೇಳಿ ಆತನ ಕೈಗೆ ತನ್ನ ಉಂಗುರವನ್ನು ಕೊಟ್ಟನು.

ಹನುಮಂತನು ಮುದ್ರಿಕೆಯನ್ನು ಶಿರಸ್ಸಿನಲ್ಲಿ ಧರಿಸಿಟ್ಟುಕೊಂಡು ರಾಮನನ್ನು ವಂದಿಸಿ ಹೊರಡಲನುವಾದನು.

ಬಳಿಕ ಸುಗ್ರೀವನು ತನ್ನ ಸಚಿವ-ಅಮಾತ್ಯರಿಂದ ಕೂಡಿ ವಿಚಾರಿಸಿ ಸೀತಾಮಾತೆಯ ಶೋಧಕ್ಕಾಗಿ ಎಲ್ಲ ದಿಕ್ಕುಗಳಿಗೆ ಒಮ್ಮೆಲೆ ಸೈನ್ಯ ಕಳಿಸುವ ನಿರ್ಧಾರಮಾಡಿದರು. ಉತ್ತರದಿಕ್ಕಿನ ಶೋಧಕ್ಕೆ ಶತಬಲ ನೆಂಬ ವಾನರ ಸರದಾರನನ್ನೂ ಪೂರ್ವಕ್ಕೆ ಯೂಥಪಾಲನನ್ನೂ ಪಶ್ಚಿಮನಿಟ್ಟಿಗೆ ತಾರೆಯ ತಂದೆ ಹಾಗು ಸುಗ್ರೀವನ ಮಾವ ಸುಶೇಣನನ್ನು ಸಸೈನ್ಯವಾಗಿ ಕಳಿಸಿದನು. ಇನ್ನು ವೀರಾಧಿವೀರರಾದ ಹನುಮ, ನೀಲ, ಅಂಗದ, ಜಾಂಬವ ಮೊದಲಾದವರ ನೇತೃತ್ವದಲ್ಲಿ ಅಪರಂಪಾರವಾದ ಸೈನ್ಯವು ಅನುಮಾನಿತವಾದ ದಕ್ಷಿಣ ದಿಕ್ಕಿಗೆ ಗಮನಿಸಿತು.

ಎಲ್ಲ ಸೇನೆಗಳ ನಿರ್ಗಮನದ ವೇಳೆಗೆ ಸುಗ್ರೀವನು ಆ ಎಲ್ಲ ಮುಖ್ಯರನ್ನು— "ವಾನರವೀರರೇ ಇಂದಿನಿಂದ ಒಂದು ತಿಂಗಳಿನೊಳ

ಗಾಗಿ ನೀವು ಶೋಧನೆಯ ಕಾರ್ಯವನ್ನು ಮುಕ್ತಾಯಗೊಳಿಸಿಕೊಂಡು ಬರಲಿಕ್ಕೇಬೇಕು. ಮೀರಿದಲ್ಲಿ ಘೋರ ಶಾಸನೆಗೆ ಒಳಪಡಬೇಕಾದೀತು' ಎಂದು ಕಟ್ಟಪ್ಪಣೆ ಮಾಡಿದನು.

ಸುಗ್ರೀವಾಜ್ಞೆಯನ್ನು ಕೈಕೊಂಡು ಎಲ್ಲ ಕಪಿವೀರರು ತಮ ತಮಗೆ ನೇಮಿಸಿದ ದಿಕ್ಪ್ರದೇಶಗಳಲ್ಲಿಯ ಪ್ರತಿಯೊಂದು ಗ್ರಾಮ ನಗರಗಳನ್ನೂ-ವನತೋಟಗಳನ್ನೂ, ಗಿರಿ-ಕಂದರಗಳನ್ನೂ ಒಂದುಳಿಯದಂತೆ ಶೋಧಿಸುತ್ತ ಸಾಗಿದರು. ಪೂರ್ವೋತ್ತರ ಪಶ್ಚಿಮ ನಿಟ್ಟಿಗೆ ಹೋದವರು ತಮ್ಮ ತಮ್ಮ ಪ್ರದೇಶಗಳನ್ನು ಬಹು ಸೂಕ್ಷ್ಮ ಪರಿಶೋಧಿಸಿ ಸೀತಾಮಾತೆಯನ್ನು ಕಾಣದೆ ತಮಗೆ ನಿಯಮಿಸಿದವಧಿಯಲ್ಲಿಯೇ ಬಂದು ಸುಗ್ರೀವನಿಗೆ ತಮ್ಮ ಕಾರ್ಯದ ಸಂಗತಿಯನ್ನು ನಿವೇದಿಸಿದರು.

ಆದರೆ ದಕ್ಷಿಣ ದಿಸೆಗೆ ತೆರಳಿದ ವೀರರಲ್ಲೊಬ್ಬನೂ ಸಹ ಇದುವರೆಗೆ ಹಿಂತಿರುಗಲಿಲ್ಲ. ಅವರಾದರೂ ಮೂರೂ ನಿಟ್ಟಿನ ಸಮುದ್ರದವರೆಗೆ ವ್ಯಾಪಿಸಿದ ಪ್ರದೇಶದಲ್ಲೆಲ್ಲ ಸಂಚರಿಸಿದರು. ಆವೆಡೆಯಲ್ಲಿಯೂ ಸೀತಾಮಾತೆಯ ಶೋಧವಾಗಲಿಲ್ಲ. ಆದರೂ ತಿರುಗದೆ ಸೂಕ್ಷ್ಮ ರೀತಿಯಾಗಿ ಪುನ: ಪುನಃ ಪ್ರದೇಶಗಳನ್ನು ಹುಡುಕುತ್ತ ನಡೆದರು. ಮಲಯಾಚಲ ಮೊದಲಾದ ಪರ್ವತದ ಸಾಲುಗಳನ್ನು ದಾಟಿ ಅವನ್ನು ಹಿಂದುಳಿಸಿ ಮುಂದೆ ಮುಂದೆ ಸಾಗಿದರು. ಕಡೆಗೆ ಅವರೆಲ್ಲರು ಸುಗ್ರೀವನು ಗೊತ್ತು ಪಡಿಸಿದ ದಿನಾವಧಿಯ ಸ್ಮರಣೆಯಿಂದ ವಿಚಾರ ಮಾಡುತ್ತ ಮಹೇಂದ್ರ ಗಿರಿಯ ಒಂದು ಸ್ಥಳದಲ್ಲಿ ವಿಶ್ರಮಿಸಿದರು. ಬೇಸರಿಕೆ, ಹಸಿವು, ನೀರಡಿಕೆ ಇವೆಲ್ಲವು ಅವರನ್ನು ಬಾಧಿಸಿ ಮಾರ್ಗಾಯಾಸವನ್ನು ಹುಟ್ಟಿಸಿದವು. ಆದರೂ ಆ ಧೃತಿಗುಂದದ ಕಪಿವೀರರು ಇನ್ನುಳಿದ ಅಲ್ಪಾವಧಿಯನ್ನು ಸಹ ವ್ಯರ್ಥಗಳೆಯಬಾರದೆಂದು ಉದ್ದಿಷ್ಟ ಕಾರ್ಯಸಾಧನೆಗಾಗಿ ಮತ್ತೆ ಹೊರಡಲು ಅಣಿಯಾದರು.

ಇನ್ನು ಅಲ್ಲಿಂದ ಹೊರಡಬೇಕೆನ್ನುವಷ್ಟರಲ್ಲಿ ಅಲ್ಲಿಯೇ ಅವರ ದೃಷ್ಟಿಗೆ ವಿಶಾಲದ್ವಾರವುಳ್ಳ ಗುಹೆಯೊಂದು ಕಾಣಿಸಿಕೊಂಡಿತು. ಆ ಗವಿಯ ಅಂತರ್ಗತ ಪ್ರದೇಶದಿಂದ ಹಂಸ, ಸಾರಸ ಮೊದಲಾದ ಪಕ್ಷಿಗಣಗಳು ಒನಪಿನಿಂದ ಹಾರಿ ಹೊರ ಬರುತ್ತಿರುವದನ್ನು ಕಂಡು ಅವರಲ್ಲಿ ಕೆಲವೊಂದು ತರ್ಕ ವಿಚಾರವು ಪ್ರವಹಿಸಿತು, ' ಈ ಪಕ್ಷಿಗಳು ಈ ಗುಹೆಯಲ್ಲಿಂದ ಹಾರಿ ಬರುತ್ತಿರುವದನ್ನು ನಿರೀಕ್ಷಿಸಿದರೆ ಗುಹೆಯ ಒಳಗೆ ಎಲ್ಲಿಯೋ ಒಂದೆಡೆಗೆ ಜೀವನದಾಶ್ರಯ ವಿರಬಹುದು' ಎಂಬ ವಿಚಾರವ ವರ ಹೃದಯಕ್ಕಿಳಿದು ನಿರ್ಧಾರವಾಯಿತು.

ಮುಂದೆ ಹೊರಟಿರುವ ಅವರೆಲ್ಲರು ಈ ಗುಹೆಯಲ್ಲಿ ಸೇರಿ ನೀರನ್ನು ಕುಡಿದು ಮುಂದೆ ಸಾಗುವದನ್ನು ಗೊತ್ತುಮಾಡಿ ಧೈರ್ಯದಿಂದ ಆ ಕತ್ತಲು ಗವಿದಿದ್ದ ಗುಹೆಯಲ್ಲಿ ಪ್ರವೇಶಿಸಿದರು. ಘೋರಾಂಧಕಾರವು ಅವರನ್ನು ಗವಿಯಲ್ಲಿ ಮುಂದು ಬಿಡಲು ಆತಂಕ ಪಡಿಸಿದರೂ ನಿರ್ಧಾರವು ಅವರ ಹೆಜ್ಜೆಗಳನ್ನು ಹಿಂದಿಡಿಸಲಿಲ್ಲ. ಧೈರ್ಯವು ಹೃದಯದಲ್ಲಿದ್ದುಕೊಂಡು ಅತ್ತಿತ್ತ ಕದಲಲಿಲ್ಲ. ನೆಟ್ಟನೆ ಅವರು ಒಳಸೇರಲು ಹಿಂದು ಪ್ರಕಾಶಮಾನವಾದ ಸ್ಥಳದಲ್ಲಿ ಸುಂದರವಾದ ಚಿಕ್ಕ ವನವೊಂದು ಅವರ ದೃಷ್ಟಿಗೆ ಬಿದ್ದಿತು. ಆ ವನವು ಫಲ-ಪುಷ್ಪಗಳಿಂದ ತುಂಬಿದ ಗಿಡಬಳ್ಳಿಗಳಿಂದಲೂ, ಗಗನಾರ್ಧಕ್ಕೆ ಪುಟಿಯುವ ಕಾರಂಜಿಗಳುಳ್ಳ ಉದ್ಯಾನಗಳಿಂದಲೂ ತರತರದ ಕಮಲ ರಂಜಿತ ಸರೋವರಗಳಿಂದಲೂ ಒಳ್ಳೇ ಮನಹರವಾಗಿದ್ದಿತು.

ಇಂತು ರಮಣೀಯ ವನದ ದೃಶ್ಯವನ್ನು ಕಂಡು ಆ ಕಪಿಗಣಗಳ ಸೊಗಸು ಪರಿವರ್ಧಿಸಿತು. ಹನುಮಾದಿ ವೀರರು—'ಇಂತಹ ಶೋಭೆಯುಳ್ಳ ವನಕ್ಕೆ ಯಾರಾದರೂ ಒಡೆಯರಿದ್ದುದರಿಂದಲೇ ಇದಕ್ಕೆ ಇಷ್ಟು ಸೊಬಗುಂಟಾಗಿದೆ. ಅವರಾರಿರುವರು ? ಎಂಬುದನ್ನು

ಶೋಧಿಸಲೇಬೇಕು' ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಅತ್ತಿತ್ತ ತಮ್ಮ ವಾನರರೊಡನೆ ಶೋಧನಡೆಯಿಸಿದರು. ಆಗ ಅಲ್ಲಿಯೇ ಕೆಲವಂತರದಲ್ಲಿ ಚಿಕ್ಕ ಕುಟಿಯೊಂದರಲ್ಲಿ ತನ್ನ ಬೆಳಕಿನಿಂದ ಬೆಳಗುತ್ತಿರುವ 'ತಪಸ್ವಿನಿ' ಯೊಬ್ಬಳನ್ನು ಕಂಡು ಅವಳಿಗೆ ಸಾಷ್ಟಾಂಗವೆರಗಿದರು.

ಅಕಸ್ಮಾತ್ತಾಗಿ ಅಲ್ಲಿಗೆ ಬಂದ ಮರ್ಕಟ ವೀರರನ್ನು ಕಂಡು ತಪಸ್ವಿನಿಯು ಚಕಿತಳಾದಳು. ಹಾಗು ಅವಳು ಅವರನ್ನು ಸತ್ಕರಿಸಿ 'ವೀರರೇ ನೀವು ಇಲ್ಲಿಗೆ ಬರುವ ಸಾಹಸದ ಉದ್ದೇಶವೇನು? ಎಂದು ವಿಚಾರಿಸಿದಳು. ಆಗ ಹನುಮನು ಇದುವರೆಗಿನ ಎಲ್ಲ ಸಂಗತಿ ಯನ್ನಾಕೆಗೆ ಶ್ರುತಪಡಿಸಿ ತೃಷೆ ನಿವಾರಣೆಗಾಗಿ ಬಂದ ನಾವು ಈ ಗುಹೆಯಲ್ಲಿ ದಿಕ್ಕುಗಾಣದಾಗಿರುವೆವು. ಏನೊಂದು ಪರಿಯಿಂದ ನಾವು ಇಲ್ಲಿಂದ ಪಾರಾಗಲು ತಾವು ಪ್ರಯತ್ನಿಸಬೇಕು" ಎಂದು ವಿನಂತಿಯನ್ನು ಮಾಡಿಕೊಂಡನು. ಮತ್ತು ಆ ತಪಸ್ವಿನಿಯನ್ನು ಕುರಿತು—'ತಾಯಿ, ಈ ಸುಂದರವಾದ ವನದ ವಿಷಯವಾಗಿ ಇತ್ಥಂ ಭೂತ ಸಂಗತಿಯನ್ನು ಕೇಳುವ ಕುತೂಹಲವು ನಮ್ಮಲ್ಲಿ ಉಂಟಾಗಿದೆ. ತಿಳಿಸುವಿರಿ' ಎಂದು ಆಶಿಸುವೆವು ಎಂದೂ ಕೇಳಿಕೊಂಡನು.

ಅವರ ಆ ಮಾತನ್ನು ಕೇಳಿ ತಪಸ್ವಿನಿಯು ಈ ದಿವ್ಯವಾದ ಉಪ ವನವನ್ನು ಹಿಂದಕ್ಕೆ ಮಯಾಸುರನೆಂಬವನು ಕಟ್ಟಿಸಿದನು. ಅವನು ತನ್ನ ಹೇಮಾ ಎಂಬ ಅಪ್ಸರೆಯೊಡನೆ ಇಲ್ಲಿ ಇರುತ್ತಿದ್ದನು. ಒಂದು ದಿನ ಇಂದ್ರನು ತನ್ನ ವಜ್ರಾಯುಧದಿಂದ ಅವನನ್ನು ಕೊಂದನು. ಮುಂದೆ ಬ್ರಹ್ಮದೇವನು ಈ ವನದ ಆಧಿಪತ್ಯವನ್ನು ನನಗೆ ಕೊಟ್ಟನು. ಅಂದಿನಿಂದ ನಾನು ತಪಸ್ಸನ್ನಾಚರಿಸುತ್ತ ಇಲ್ಲಿರುವೆನು. ನನ್ನ ತಂದೆಯು ಹೆಸರು ಮೇರುಸಾವರ್ಣಿಯು. ನನ್ನ ಹೆಸರು ಸ್ವಯಂಪ್ರಭೆ. ನೀವು ಹೊರಗೆ ಹೋಗಬೇಕಾಗಿದ್ದರೆ ಗಟ್ಟಿಯಾಗಿ ಕಣ್ಣನ್ನು ಮುಚ್ಚಿಕೊಳ್ಳಿರಿ.

ಅಂದರೆ ನಾನು ನಿಮ್ಮನ್ನು ಹೊರಗೆ ಕಳುಹಿಸುವೆನು ಎಂದು ಹೇಳಿದಳು. ಆಕೆಯ ಮಾತಿನಂತೆ ಅವರೆಲ್ಲರೂ ಕಣ್ಣು ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ಅವಳು ಅವರನ್ನು ಗುಹೆಯಿಂದಂತರಿಸಿ ದ್ರುಮಕುಲ್ಯ† ವೆಂಬ ಒಂದು ಮರುಭೂಮಿಯಲ್ಲಿ ತಂದಿಳಿಸಿ ತಾನು ಮರಳಿ ತನ್ನ ಸ್ಥಾನಕ್ಕೆ ತೆರಳಿದಳು. ಬಳಿಕ ಅವರೆಲ್ಲರು ಸ್ವಯಂಪ್ರಭೆಯ ಮಹಿಮೆಯನ್ನು ಕೊಂಡಾಡುತ್ತ ದಾರೀ ನಡೆದು ಮಹೇಂದ್ರ ಪರ್ವತವನ್ನು ಬಂದು ಸೇರಿದರು.

ಮುಂದೆ ಅವರು ಆ ಪರ್ವತದಲ್ಲಿಂದಲೇ ದೂರದಲ್ಲಿ ಕಾಣುವ ಸಮುದ್ರವನ್ನು ಕಂಡರು. ಹಾಗು ಅವರು ಆ ಪರ್ವತ ಪ್ರದೇಶದಲ್ಲಿ ಶರದೃತುವಿನ ಚಿಹ್ನಗಳೆಲ್ಲ ಮಾಯವಾಗಿ ವಸಂತ ಋತುವಿನ ಪ್ರಾದುರ್ಭಾವವ ಚಿಹ್ನಗಳು ತೋರ ತೊಡಗಿದ್ದರಿಂದ 'ನಾವು ಆ ಗವಿಯಲ್ಲಿ ಎಷ್ಟು ದಿನ ಕಾಲಕಳೆದೆವೆಂಬದು ತಿಳಿಯಲಿಲ್ಲ. ಋತು ಚಿಹ್ನದಿಂದ ನೋಡಲು ಇನ್ನು ನಮ್ಮ ಅವಧಿಯು ತಿಂಗಳಿಗೆ ಮೂರೇ ದಿನಗಳು ಉಳಿದಿರಲಿಕ್ಕೆ ಬೇಕೆಂಬುದು ವ್ಯಕ್ತವಾಗುವದು. ಕಾರಣ ಸೀತಾಮಾತೆಯನ್ನು ಶೋಧಿಸದೆ ಹಾಗೆಯೇ ಹೋದಲ್ಲಿ ಸುಗ್ರೀವನು ನಮಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಡದೆ ಬಿಡಲಾರನು.

---

† ಶ್ರೀರಾಮನು ಲಂಕೆಗೆ ಹೋಗುವ ಮಾರ್ಗದಲ್ಲಿ ಸಮುದ್ರವು ಅಡ್ಡ ಬರಲು ರಾಮನು ಅದಕ್ಕೆ ಬಾಣ ಪ್ರಯೋಗಿಸಲುದ್ಯುಕ್ತನಾದನು. ಆಗ ಸಾಗರನಾಥನು ಅಂಜಿ ತನ್ನ ಮೇಲೆ ಬಾಣ ಪ್ರಯೋಗ ಮಾಡದಿರಲು ಬೇಡಿಕೊಂಡನು. ಆದಕ್ಕೆ ಶ್ರೀರಾಮನು "ನಾನು ಹೂಡಿದ ಬಾಣವು ವ್ಯರ್ಥವಾಗಲಾರದು" ಎನ್ನಲು ಸಾಗರನಾಥನು—"ದ್ರುಮಕುಲ್ಯ"ಎಂಬ ನನ್ನ ಪುಣ್ಯಭಾಗವು ಉತ್ತರ ನಿಟ್ಟಿಗಿದೆ. ಅಲ್ಲಿಯ 'ದಸ್ಯು' ಗಳಿಂದ ನಾನು ದೂಷಿತನಾಗಹತ್ತಿರುವೆ. ಈ ತೊಟ್ಟಬಾಣವನ್ನು ನನ್ನ ಆ ಭಾಗದಮೇಲೆ ಪ್ರಯೋಗಿಸಬೇಕು. ಎನ್ನಲು ಶ್ರೀರಾಮನು ಹಾಗೇ ಮಾಡಿದನು. ಆದರಿಂದ ಆ ಭಾಗದ ಸಮುದ್ರದನೀರೆಲ್ಲ ಶೋಷಿಸಿ ಮರುಭೂಮಿಯಾಯಿತು. ಅದೇ ಆಗಿನ ದ್ರುಮಕುಲ್ಯವು ಈಗಿನ ಮಾರವಾಡವು.

ಕಾರಣ ನಾವೆಲ್ಲರೂ ಮರಳಿ ಹೋಗುವದರ ಬದಲು ಪ್ರಾಯೋಪ ವೇಶನವನ್ನು ಕೈಕೊಂಡು ಪ್ರಾಣವನ್ನು ಬಿಡುವದೇ ಲೇಸು" ಎಂದು ನಿಶ್ಚಯಿಸಿ ಸಾಲು ಹಿಡಿದು ಕುಳಿತುಕೊಂಡು ಶ್ವಾಸ ನಿರೋಧಿಸಿ ಪ್ರಾಣಕೊಡಲು ಸಿದ್ಧರಾದರು. ಆವರ ಈ ನಿರ್ಧಾರವನ್ನು ಕಂಡು ಅಲ್ಲಿಯೇ ಒಂದು ಮರದಡಿಯಲ್ಲಿ ವಾಸಿಸುತ್ತಿರುವ ಒಂದು ಹದ್ದು ಅವರ ಸಮೀಪಕ್ಕೆ ಬಂದು ತನ್ನ ಮನದಲ್ಲಿ ಯೋಚಿಸುತ್ತ "ಅಹಹಾ! ಪರಮಾತ್ಮನು ಎಷ್ಟು ದಯಾವಂತನಾಗಿರುವನು ? ನನ್ನ ಸಲು ವಾಗಿಯೇ ಇವರೆಲ್ಲರನ್ನು ಇಲ್ಲಿಗೆ ಕಳಿಸಿರುತ್ತಾನೆ. ಅಂತೆಯೇ ಇವ ರೆಲ್ಲರೂ ಪ್ರಾಣ ಕೊಡಲು ಸಿದ್ಧರಾಗಿರುತ್ತಾರೆ. ಅವರು ಪ್ರಾಣ ಕೊಟ್ಟನಂತರ ನಾನು ಇವರ ಮಾಂಸವನ್ನು ತಿಂದು ಬಲುದಿನ ಆನಂದ ದಿಂದ ಕಾಲ ಕಳೆಯುವೆನು" ಎಂದು ನುಡಿಯಿತು. ಅದರ ಆ ಅತಿ ಭಯಂಕರವಾದ ಮಾತನ್ನು ಅಂಗದನು ಕೇಳಿ "ಹನುಮಂತಾ, ಜಟಾಯುವಿನಂತಹ ಹದ್ದು ಸೀತಾಮಾತೆಯ ಸಲುವಾಗಿ ಪ್ರಾಣವನ್ನು ಕೊಟ್ಟಿತು. ನಾವೂ ಅವಳ ಸಲುವಾಗಿ ಪ್ರಾಣಕೊಡಲು ಸಿದ್ಧರಾಗಿರು ವೆವು. ಆದರೆ ಈ ಹದ್ದು ಮಾತ್ರ ನಮ್ಮ ಮರಣದ ದಾರಿಯನ್ನೇ ಕಾಯುತ್ತಿರುವದು ! ಎಂದು ಆಡಿದ ಜಟಾಯುವಿನ ಹೆಸರನ್ನು ಕೇಳಿ ದೊಡನೆಅದು ಆಶ್ಚರ್ಯದಿಂದ ಇವರನ್ನು ಕಂಡು—"ಹೇ ಕಪಿಗಳಿರಾ, ಜಟಾಯುವು ಹೇಗೆ ಸತ್ತನು ?ಅವನು ನನ್ನ ತಮ್ಮನು.ನನ್ನ ಹೆಸರು ಸಂಪಾತಿಯು. ಜಟಾಯುವಿನ ಮರಣದ ಸಂಗತಿಯನ್ನು ನನಗೆ ತಿಳಿಸಿರಿ. ನನಗೆ ಬಹಳ ದುಃಖವಾಗಿರುತ್ತದೆ. ಸೀತಾಮಾತೆಯ ಸಲುವಾಗಿ ಪ್ರಾಣವನ್ನು ಕೊಡುತ್ತಿದ್ದರೆ ನೀವು ಕೊಡಬೇಡಿರಿ ಅವಳು ಇಲ್ಲಿಗೆ ಕಾಣುವ ಸಮುದ್ರ ಮಧ್ಯದಲ್ಲಿಯ ಲಂಕಾಪಟ್ಟಣದ ಅಶೋಕ ವನದಲ್ಲಿ ಇರುತ್ತಿರುವಳು. ಆ ನೂರು ಯೋಜನದಷ್ಟು ಅಗಲವಾದ ಸಮುದ್ರವನ್ನು ದಾಟಿದರೆ ನಿಮಗೆ ಲಂಕಾಪಟ್ಟಣವು ಹತ್ತುವದು.

ಅಲ್ಲಿ ಸೀತಾಮಾತೆಯು ನಿಮಗೆ ಸಿಗುವಳು'' ಹೀಗೆ ಹೇಳುತ್ತಿರುವಷ್ಟ ರಲ್ಲಿ ಸಂಪಾತಿಗೆ ಹೊಸದಾಗಿ ರೆಕ್ಕೆಗಳು ಒಡೆದವು. ಅವನ್ನು ಕಂಡು ಅವರೆಲ್ಲರೂ ಅತ್ಯಾಶ್ಚರ್ಯದಿಂದ ಅವನ ನಿಜಸಂಗತಿಯನ್ನು ಕೇಳಿ ದರು. ಆಗ ಸಂಪಾತಿಯು ''ನಾನು ಮತ್ತು ಜಟಾಯು ಇಬ್ಬರೂ ಅಣ್ಣ ತಮ್ಮಂದಿರು. ಒಮ್ಮೆ ನಾವಿಬ್ಬರು ಉಡ್ಡಾಣದಲ್ಲಿ ಅತಿ ಪರಾಕ್ರಮಿಗಳೆಂಬ ಗರ್ವದಿಂದ ಸೂರ್ಯನ ಸಂಗಡ ಹಾರುವ ಈರ್ಷೆ ಯಿಂದ ಹಿಮಾಲಯದಿಂದ ಆಕಾಶಕ್ಕೆ ಹಾರಿದೆವು. ನನ್ನ ತಮ್ಮ ನಾದ ಜಟಾಯುವು ಸೂರ್ಯನನ್ನು ಕಂಡು ಬೆದರಿದನು. ಆಗ ನಾನು ಅವನನ್ನು ನನ್ನ ರೆಕ್ಕೆಯಲ್ಲಿ ಮರೆಮಾಡಿಕೊಂಡು ಹೊರಟೆನು. ಆದರೆ ತುಸು ವೇಳೆಯಲ್ಲಿ ಸೂರ್ಯನ ಪ್ರಖರವಾದ ತೇಜದಿಂದ ನನ್ನ ರೆಕ್ಕೆ ಗಳು ಹುರಪಳಿಸಿ ಭಸ್ಮವಾದವು. ಕೂಡಲೇ ನಾನು ಹಾರಲಾರದೆ ಈ ಪರ್ವತದಲ್ಲಿ ಬಿದ್ದೆನು. ಜಟಾಯುವು ಮೊದಲೇ ಜನಸ್ಥಾನದಲ್ಲಿ ಹೋಗಿ ಬಿದ್ದಿದ್ದನು. ಮುಂದೆ ನನಗೆ ಹಾರಲು ಬಾರದ್ದರಿಂದ ಹಸಿವೆ ಯಿಂದ ಅತಿ ಬಳಲಿ ಪ್ರಾಣವನ್ನು ತ್ಯಜಿಸಬೇಕೆಂದು ನಿಶ್ಚಯಿಸಿದೆನು. ಅಷ್ಟರಲ್ಲಿ ಒಬ್ಬ ಮಹಾತಪಸ್ವಿಯು ನನ್ನನ್ನು ಕಂಡು ''ಸಂಪಾತೀ, ನೀನು ಪ್ರಾಣವನ್ನು ತ್ಯಜಿಸಬೇಡ. ಶ್ರೀರಾಮಚಂದ್ರನ ಕಾರ್ಯ ವನ್ನು ಮಾಡಿದೆಯೆಂದರೆ ನಿನಗೆ ಮೊದಲಿನಂತೆ ರೆಕ್ಕೆಗಳು ಪ್ರಾಪ್ತ ವಾಗುವವು. ಅದುವರೆಗೆ ನಿನ್ನ ಚರಿತಾರ್ಥವು ಹೇಗಾದರೂ ನಡೆಯು ವದು" ಎಂದು ಹೇಳಿದನು. ಅಂದಿನಿಂದ ನಾನು ಆ ತಪಸ್ವಿಯ ವಚ ನದ ದಾರಿಯನ್ನೇ ಕಾಯುತ್ತ ಇಲ್ಲಿ ಕುಳಿತಿರುವೆನು. ಆ ವೇಳೆಯು ಈಗ ಪ್ರಾಪ್ತವಾಯಿತು. ನಾನಿಲ್ಲಿದ್ದುಕೊಂಡು ಸೀತಾಮಾತೆಯನ್ನು ರಾವಣನು ಒಯ್ಯುತ್ತಿರುವಾಗ ಕಂಡಿರುವೆನು. ಅವಳು ''ಹೇ ರಾಮ ಚಂದ್ರಾ! ಹೇ ರಾಮಚಂದ್ರಾ!'' ಎಂದು ಒಂದೇ ಸವನೇ ಆಕ್ರೋಶ ಮಾಡಹತ್ತಿದ್ದಳು. ಲಂಕೆಯು ಆ ಸಮುದ್ರ ಮಧ್ಯದ ದ್ವೀಪವಾಗಿದ್ದು

ಅದು ಇಲ್ಲಿಂದ ನೂರು ಯೋಜನದಷ್ಟು ದೂರವಿರುತ್ತದೆ. ಆ ಸಮುದ್ರವನ್ನು ದಾಟ ಹೋದದ್ದಾದರೆ ಆ ಸೀತಾಮಾತೆಯು ದೊರೆಯುವಳು'' ಎಂದು ಹೇಳುವ ಸಂಪಾತಿಯ ಮಾತು ಕೇಳಿ ಅಂಗದಾದಿ ವೀರರೆಲ್ಲರೂ ಅತಿ ಆನಂದದಿಂದ ಕುಣಿದಾಡಿದರು. ಮುಂದೆ ಸಂಪಾತಿಯು ಅಲ್ಲಿಂದ ಶೃಂಗವೇರ ಪರ್ವತಕ್ಕೆ ಹಾರಿ ಹೋಯಿತು.

ಸಂಪಾತಿಯ ಹೇಳಿಕೆಯಂತೆ ನಿಜವಾಗಿಯೂ ಸೀತಾಮಾತೆಯು ರಾವಣನ ಅಂತಃಪುರದಲ್ಲಿರುವಳೆಂದು ಅವರಿಗೆ ನಂಬಿಕೆಯಾಯಿತು. ಅತಿ ಆನಂದದಿಂದ ಕುಣಿದಾಡುತ್ತ ಅಲ್ಲಿಂದ ಹೊರಟು ಸಮುದ್ರದ ದಡಕ್ಕೆ ಬಂದರು. ಆದರೆ ಆ ಅತಿಭಯಂಕರವಾದ ಸಮುದ್ರವನ್ನು ಕಂಡು ನಿರುತ್ಸಾಹಿತರಾದರು. ಇನ್ನೇನು ಮಾಡಬೇಕೆಂಬದರ ಸಲುವಾಗಿ ಅವರೆಲ್ಲರೂ ಅಂಗದನನ್ನು ಕೇಳತೊಡಗಿದರು. ಆಗ ಅಂಗದನು ಅವರೆಲ್ಲರನ್ನು ಸಮಾಧಾನಗೊಳಿಸಿ, " ಉತ್ಸಾಹವಿರಲಿ ಉದ್ವೇಗವು ಬೇಡ. ಉದ್ವೇಗದಿಂದ ಮನುಷ್ಯನು ವಿಕಾರವಶನಾಗಿ ಕರ್ತವ್ಯ ಜ್ಞಾನವನ್ನು ಕಳೆದುಕೊಂಡು ಅಂಗೀಕೃತ ಕಾರ್ಯದಲ್ಲಿ ಅಯಶಸ್ವಿಯಾಗುವನು. ಕಾರಣ ನೀವು ಹುರುಪಿನಿಂದ ಕೆಲಸ ಮಾಡಿರಿ. ಅಂದರೆ ಶ್ರೀರಾಮಚಂದ್ರನ ಕೃಪೆಯಿಂದ ಎಲ್ಲವೂ ಸರಿಹೋಗುವದು" ಎಂದು ಹೇಳಿದನು. ಮುಂದೆ ಅವರೆಲ್ಲರೂ ತಮ್ಮೊಳಗೆ ತಾವೇ ವಿಚಾರಿಸುತ್ತ " ನೀನೆಷ್ಟು ಯೋಜನ ಹಾರುವಿ ? ನಾನಿಷ್ಟು ಯೋಜನ ಹಾರುವೆ" ಎಂದು ತಮ್ಮ ತಮ್ಮೊಳಗೆ ಸ್ಪರ್ಧಿಸ ತೊಡಗಿದರು. ಆಗ ಒಬ್ಬನು " ನಾನು ಹತ್ತು ಯೋಜನ ಜಿಗಿಯುವೆ'' ಎಂದು ನುಡಿದರೆ ಇನ್ನೊಬ್ಬನು "ಇಪ್ಪತ್ತು ಯೋಜನದಷ್ಟು ಜಿಗಿಯುವೆನು" ಎಂದನು. ಮತ್ತೊಬ್ಬನು " ಮೂವತ್ತು ಯೋಜನದಷ್ಟು ಜಿಗಿಯುವೆನೆಂದನು'' ನಾಲ್ಕನೆಯವನು " ನಾಲ್ವತ್ತು ಯೋಜನದಷ್ಟು ಜಿಗಿಯುವೆನೆಂದನು" ಐದನೆಯವನು " ಐವತ್ತು ಯೋಜನ

ದಷ್ಟು ಜಿಗಿಯುವೆನೆಂದನು'' ಆರನೆಯವನು ''ಅರವತ್ತು ಯೋಜನದಷ್ಟು ಜಿಗಿಯುವೆನೆಂದನು'' ಏಳನೆಯವನು ''ಎಪ್ಪತ್ತು ಯೋಜನದಷ್ಟು ಜಿಗಿಯುವೆನೆಂದನು'' ಎಂಟನೆಯವನು '' ಎಂಭತ್ತು ಯೋಜನದಷ್ಟು ಜಿಗಿಯುವೆನೆಂದನು'' ಈ ರೀತಿಯಾಗಿ ಅವರೆಲ್ಲರೂ ತಮ್ಮ ಶಕ್ತಿ ಸಾಮರ್ಥ್ಯವನ್ನು ಹೇಳಿಕೊಳ್ಳಹತ್ತಿದರು. ಆಗ ಜಾಂಬುವಂತನು '' ನಾನು ಮುದುಕನಾದರೂ ಕೂಡ ತೊಂಭತ್ತು ಯೋಜನದಷ್ಟು ಜಿಗಿಯುವೆನೆಂದನು '' ಅಂಗದನು ಮುಂದೆ ಬಂದು '' ನೀವು ಹೆದರಬೇಡಿರಿ. ನಾನು ನೂರು ಯೋಜನ ಇರುವ ಸಮುದ್ರವನ್ನು ದಾಟಿ ಲಂಕೆಗೆ ಹೋಗಿ ಸೀತಾಮಾತೆಯ ಸಂಗತಿಯನ್ನು ತಿಳಿದುಕೊಂಡು ಬರುವೆನು '' ಎಂದು ಹೇಳಿದನು. ಈ ಮಾತು ಕೇಳಿ ಜಾಂಬುವಂತನು '' ನಮ್ಮ ಸೇನಾಪತಿಯಾದ ಅಂಗದನಿಗೆ ಇಂಥ ಕೆಲಸಕ್ಕೆ ಕಳಿಸುವದು ನಮ್ಮೆಲ್ಲರಿಗೆ ಯೋಗ್ಯವಾಗದು. ಆತನ ಎದುರಿನಲ್ಲಿದ್ದುಕೊಂಡು ನಾವು ಕಾರ್ಯಮಾಡಿ ಅವನನ್ನು ಸಂರಕ್ಷಿಸುವದು ನಮ್ಮ ಕರ್ತವ್ಯ. ಕಾರಣ ನಮ್ಮೆಲ್ಲರಲ್ಲಿ ಅಗ್ರಗಣ್ಯನಾದ ವೀರ ಹನುಮಂತನು ಈ ಕೆಲಸವನ್ನು ಮಾಡಲು ಯೋಗ್ಯನಾಗಿರುವನು. ಅಂತೆಯೇ ಅವನು ಏನೊಂದು ನುಡಿಯದೆ ಸುಮ್ಮನೇ ಕುಳಿತಿರುವನು. ಅವನೇ ನಮ್ಮನ್ನು ಈ ಸಂಕಟದಿಂದ ಪಾರುಮಾಡಿ ಶ್ರೀರಾಮಚಂದ್ರನ ದರ್ಶನವನ್ನು ಮಾಡಿಸುವನು" ಎಂದು ಹನುಮಂತನನ್ನು ಹೊಗಳಿದನು. ಹನುಮಂತನ ಸ್ವಭಾವವು ಗೊತ್ತಿರುವದರಿಂದಲೇ ಜಾಂಬುವಂತನು ಈ ರೀತಿಯಾಗಿ ಮಾತನಾಡಿ ''ಹೇ ವಾನರ ವೀರಾ, ನಿನ್ನ ಹೊರತು ಈ ಕೆಲಸವಾಗಲಾರದು. ನೀನು ಅತಿ ಪರಾಕ್ರಮಿಯು. ತಂದೆಯಂತೆ ಅತಿ ವೇಗವುಳ್ಳವನು. ನೀನು ಹುಟ್ಟಿದಾಗಲೇ ಸೂರ್ಯಬಿಂಬವನ್ನು ಕಂಡು ಮುನ್ನೂರು ಯೋಜನದಷ್ಟು ದೂರವಿರುವ ಸೂರ್ಯನನ್ನು ಭಕ್ಷಿಸಲು ಹಾರಿದೆ. ಅಂಥ ವಿಲಕ್ಷಣ

ಸಾಮರ್ಥ್ಯವು ನಿನ್ನಲ್ಲಿರುತ್ತದೆ. ಕಾರಣ ನೀನು ಈ ಕೆಲಸವನ್ನು ಮಾಡಿ ಎಲ್ಲರನ್ನು ಸಂಕಟದಿಂದ ಪಾರು ಮಾಡು" ಎಂದು ಪ್ರಾರ್ಥಿಸಿದನು. ಆ ವೃದ್ಧ ಜಾಂಬುವಂತನು ಮಾಡುವ ಸ್ತುತಿಯನ್ನು ಕೇಳಿ ಹನುಮಂತನ ತೇಜವು ಹೆಚ್ಚಿ ಅವನು "ನೀವು ಹೆದರಬೇಡಿರಿ. ಶತಯೋಜನವಾದ ಸಮುದ್ರವನ್ನು ದಾಟಿ ಸೀತಾಮಾತೆಯನ್ನು ಶೋಧಿಸಿಕೊಂಡು ಬರುವೆ. ಎಂದು ನಾನು ಎದೆತಟ್ಟಿ ಹೇಳುತ್ತೇನೆ. ಕಾರಣ ನೀವು ನಿಶ್ಚಿಂತೆಯನ್ನು ತಾಳಿರಿ" ಎಂದು ಹೇಳಿದನು. ಅವನ ಈ ಮಾತನ್ನು ಕೇಳಿ ಹೇ ಆಂಜನೇಯಾ, ಶ್ರೀರಾಮಚಂದ್ರನ ಕೃಪೆಯು ನಿನಗಿರಲಿ ! ಎಲ್ಲ ಗುರುಹಿರಿಯರ ಆಶೀರ್ವಾದವು ನಿನಗಿರಲಿ. ನೀನು ಮರಳಿ ಬರುವವರೆಗೂ ನಾವೆಲ್ಲರೂ ಒಂದೇ ಕಾಲಿನ ಮೇಲೆ ನಿಂತು ತಪಸ್ಸನ್ನಾಚರಿಸುವೆವು, ಎಂದು ಹೇಳಿದರು. ಆ ಮಾತು ಕೇಳಿ ಹನುಮಂತನಿಗೆ ಒಳ್ಳೇ ಸಂತೋಷವಾಯಿತು. ಕೂಡಲೇ ಅವನು ಆ ಶತಯೋಜನ ಸಮುದ್ರವನ್ನು ಉತ್ತರಿಸುವದಕ್ಕಾಗಿ ಎದ್ದು ನಡಕ್ಕೆ ವಸ್ತ್ರವನ್ನು ಗಟ್ಟಿಯಾಗಿ ಕಟ್ಟಿಕೊಂಡು ಸಿದ್ಧನಾದನು. ಪೂರ್ವದಿಕ್ಕಿನ ಕಡೆಗೆ ಮೋರೆ ಮಾಡಿ ವಾಯುದೇವನಿಗೆ ನಮಸ್ಕರಿಸಿ ತನ್ನ ದೇಹದಲ್ಲಿ ಅದ್ಭುತವಾಗಿ ಸಾಮರ್ಥ್ಯವನ್ನು ಬೆಳಿಸಿಕೊಂಡು "ಹೇ ಕಪಿಗಳಿರಾ, ನಾನು ಇನ್ನು ಹೋಗಿ ಬರುವೆನು. ನೀವು ಏನೊಂದು ಚಿಂತೆ ಮಾಡಬೇಡಿರಿ. ನಾನು ಶ್ರೀರಾಮಚಂದ್ರನ ಬಾಣದಂತೆ ನೆಟ್ಟಗೆ ಲಂಕೆಗೆ ಹೋಗುವೆನು" ಎಂದು ನುಡಿದು ಆ ಪರ್ವತದ ಮೇಲೆ ಕಾಲುಗಳನ್ನು ಬಲವಾಗಿ ಅಪ್ಪಳಿಸಿ ಜೀಕಿ ಜಿಗಿದನು. ಆತನ ಆ ಜಿಗಿಯುವಿಕೆಯಿಂದ ಆ ಪರ್ವತದಲ್ಲಿರುವ ಗಿಡಗಳೆಲ್ಲವೂ ಬೇರು ಸಹಿತವಾಗಿ ಕಿತ್ತಿ ಸಮುದ್ರದಲ್ಲಿ ಬಿದ್ದವು. ಪರ್ವತ ಪ್ರಾಯವಾದ ಆತನ ಶರೀರವು ಆಕಾಶದಲ್ಲಿ ಹೋಗುವಾಗ್ಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಅವನು ಮುಂದೆ ಚಾಚಿರುವ ಬಾಹುಗಳನ್ನು ಕಂಡು

ಆ ಪರ್ವತದಲ್ಲಿ ವಾಸಿಸುತ್ತಿರುವ ಅತಿಭಯಂಕರವಾದ ಸರ್ಪಗಳು ತಮ್ಮ ಹುತ್ತಿನಿಂದ ಹೊರಬಿದ್ದವು. ಅವನ ಕಣ್ಣುಗಳು ದೂರಿನ ಗುಡ್ಡಕ್ಕೆ ಬೇಗೆಯನ್ನು ಹಚ್ಚಿದಂತೆ ಕಾಣುತ್ತಿದ್ದವು. ಅವನ ಅತಿ ಉದ್ದವಾದ ಬಾಲವನ್ನು ನೋಡಿದರೆ ಆಕಾಶದಿಂದ ಒಂದು ಸರ್ಪವೇ ಇಳಿಬಿದ್ದಂತೆ ಕಾಣುತ್ತಿತ್ತು. ಅವನು ಹಾರಿ ಹೋಗುತ್ತಿರುವಾಗ ಸಮುದ್ರದ ಮೇಲೆ ಬಿದ್ದ ಅವನ ನೆರಳನ್ನು ಕಂಡು ಅದರಲ್ಲಿರುವ ಮೊಸಳೆ, ಮೀನದಂಥ ಜಲಚರ ಪ್ರಾಣಿಗಳೆಲ್ಲವೂ ಅದರ ಬೆನ್ನಹತ್ತಿದ್ದವು. ಆತನ ವಿಲಕ್ಷಣವಾದ ಸಾಮರ್ಥ್ಯವನ್ನು ಕಂಡು ದೇವ, —ದಾನವ,— ಗಂಧರ್ವರೆಲ್ಲರೂ ಆಕಾಶದಲ್ಲಿಂದ ಆತನ ಮೇಲೆ ಹೂಮಳೆಗರೆದರು.



ಹನುಮಂತನು ಲಂಕೆಗೆ ಹಾರಿದುದು

ಹನುಮಂತನು ಹೀಗೆ ಹೊರಟಿರುವಾಗ ದೇವತೆಗಳೆಲ್ಲರೂ ಆತನ ಪರೀಕ್ಷೆಗಾಗಿ "ಸುರಸಾ" ಎಂಬ ರಾಕ್ಷಸಿಯನ್ನು ಅವನಿಗೆದುರಾಗಿ ಕಳುಹಿದರು. ಕೂಡಲೇ ಅವಳು ಆ ಎಂದು ಬಾಯಿತೆಗೆದು ಆತನಮುಂದೆ ಬರಲು ಹನುಮಂತನು ಆಕೆಯ ತೆರೆದ ಬಾಯಿಯಲ್ಲಿಯೇ ಹೊಕ್ಕು ಅವಳ ಕಿವಿಯಿಂದ ಹೊರಬಿದ್ದನು. ಅವನ

ಬಲವನ್ನು ಕಂಡು ಅವಳು ಅವನನ್ನು ಆಶೀರ್ವದಿಸಿ ತಿರುಗಿ ದಳು. ಹೀಗೆ ಅವಳ ಕೈಯಿಂದ ಪಾರಾಗಿ ಹೋಗುತ್ತಿರುವಾಗ ಸಮುದ್ರರಾಜನು ಮೆಚ್ಚಿ ಅವನ ವಿಶ್ರಾಂತಿಗೋಸ್ಕರ ಮೈನಾಕಪರ್ವ ತವನ್ನು ಕಳಿಸಿದನು. ಅದನ್ನು ಕಂಡು "ಇದು ಏನೋ ವಿಘ್ನ ವುಂಟಾಗಿದೆ" ಎಂದು ತಿಳಿದು ಹನುಮಂತನು ತನ್ನ ಹಸ್ತದಿಂದ ಆ ಪರ್ವತವನ್ನು ತನ್ನಕೈಯಿಂದ ಛಪ್ಪರಿಸಿ ಹಾಗೆಯೇ ಮುಂದೆ ಸಾಗಿ ಮುಂದೆ ಲಂಬಗಿರಿ ಎಂಬ ಪರ್ವತದ ಮೇಲೆ ಬಂದಿಳಿದನು.

ಇಂಥ ಅಸಾಧ್ಯವಾದ ಸಮುದ್ರವನ್ನು ದಾಟಿ ಬಂದರೂ ಕೂಡ ಹನುಮಂತನಿಗೆ ಸ್ವಲ್ಪವೂ ಶ್ರಮವಾಗಿರಲಿಲ್ಲ. ಅವನು ಪ್ರಸನ್ನವ ದನನಾಗಿ ನಾಲ್ಕೂ ಕಡೆಯಲ್ಲಿ ದೃಷ್ಟಿಚಲ್ಲಿದನು. ಆಕಾಶದಲ್ಲಿ ತೇಲು ತ್ತಿರುವಂತೆ ಕಾಣುತ್ತಿರುವ ಆ ಸುವರ್ಣ ರಚಿತ ಲಂಕೆಯನ್ನು ಆತನು ಕಂಡನು. ಮುಂದೆ ಅವನು ಆ ಲಂಬಗಿರಿಯನ್ನು ದಾಟಿ ತ್ರಿಕೂಟ ಪರ್ವತದಲ್ಲಿರುವಂಥ ಲಂಕಾ ಪಟ್ಟಣಕ್ಕೆ ಬಂದನು. ಅತಿ ಸುಂದರ ವಾದ ಆ ಪಟ್ಟಣವನ್ನು ಕಂಡು ಆತನಿಗೆ ಪರಮಾನಂದವಾಯಿತು. ಆದರೆ ಅಲ್ಲಲ್ಲಿ ರಾಕ್ಷಸರು ಪಟ್ಟಣದ ಕಾವಲಾಗಿರುವದನ್ನು ಕಂಡು "ನಾನು ಇನ್ನು ಮುಂದೆ ಪಟ್ಟಣದೊಳಕ್ಕೆ ಹೇಗೆ ಪ್ರವೇಶಿಸಬೇಕು?" ಎಂದು ಆಲೋಚಿಸಿದನು. ಕಡೆಗೆ ಒಂದು ಸಣ್ಣ ಕಪಿ ರೂಪ ವನ್ನು ಧರಿಸಿ ಮುಂದಕ್ಕೆ ಹೊರಟನು. ಆ ಪಟ್ಟಣವನ್ನು ಕಾಯು ತ್ತಿರುವ "ಲಂಕಿಣಿ" ಎಂಬ ರಾಕ್ಷಸಿಯು ಆ ಚಿಕ್ಕ ಕಪಿರೂಪಿ ಹನುಮ ನನ್ನು ಕಂಡು 'ನನ್ನಆಜ್ಞೆಯಿಲ್ಲದೆ ಒಳಗೆ ಹೋಗುತ್ತಿರುವ ನೀನಾರು?' ಎಂದು ಗದ್ದರಿಸುತ್ತ ಬಂದು ಒಂದು ಏಟು ಹೊಡೆದಳು. ಕೂಡಲೇ ಹನುಮಂತನು ತನ್ನ ವಜ್ರಮುಷ್ಟಿಯಿಂದ ಆಕೆಯನ್ನು ಗುದ್ದಿ ನೆಲಕ್ಕೆ ಕೆಡವಿ. "ನಾನು ಶ್ರೀರಾಮಚಂದ್ರನ ದೂತನು. ಸೀತಾಮಾತೆಯ

ಶೋಧಿಸುವದರ ಸಲುವಾಗಿ ಇಲ್ಲಿಗೆ ಬಂದಿರುವೆನು.” ಎಂದು ಹೇಳಿದನು. ಮುಂದೆ ಅವಳು ಆತನಿಗೆ ಶರಣು ಬಂದು “ನೀನು ಸುಖರೂಪವಾಗಿ ಪಟ್ಟಣದೊಳಗೆ ಹೋಗಬಹುದು.” ಎಂದು ಹೇಳಿ ತಾನು ಗುಪ್ತಳಾದಳು. ಬಳಿಕ ಅವನು ಪುರದೊಳಕ್ಕೆ ಹೊಕ್ಕು ಅತಿ ಎತ್ತರವಾದ ಗೋಪುರ ವೊಂದರ ಮೇಲೆ ಹತ್ತಿ ಅಲ್ಲಿಂದ ಇನ್ನೊಂದಕ್ಕೆ ಇನ್ನೊಂದರಿಂದ ಮತ್ತೊಂದು ಗೋಪುರಕ್ಕೆ ಜಿಗಿಯುತ್ತ ಮುಂದೆ ಸಾಗಿದನು. ಹೋಗಹೋಗುತ್ತ ದಾರಿಯಲ್ಲಿರುವ ಸುಂದರ ಸ್ತ್ರೀಯರನ್ನು ಕಂಡು “ಇವರಲ್ಲಿ ಯಾದರೂ ಸೀತಾಮಾತೆಯು ಇರಬಹುದೇ ?” ಎಂದು ನಿರೀಕ್ಷಿಸುತ್ತ ಹಾಗೆಯೇ ರಾವಣನ ಅರಮನೆ ವರೆಗೆ ಸಾಗಿದನು. ಆಗ ಮಧ್ಯರಾತ್ರಿಯಾದದ್ದರಿಂದ ಎಲ್ಲ ಕಡೆಯಲ್ಲಿಯೂ ಶಾಂತತೆಯು ಪಸರಿಸಿತ್ತು. ಆ ವಾತಾವರಣವನ್ನು ಕಂಡು ಹನುಮಂತನು ರಾವಣನ ಅರಮನೆಯೊಳಗೆ ಹೊಕ್ಕನು. ಅಲ್ಲಿಯ ಎಲ್ಲ ಮಂದಿರಗಳನ್ನು ಅತಿ ಸೂಕ್ಷ್ಮರೀತಿಯಿಂದ ಶೋಧಿಸುತ್ತ ರಾವಣನು ಮಲಗಿರುವಲ್ಲಿಗೇ ಬಂದನು. ರಾವಣನ ಮಂಚವು ನಾನಾ ಪ್ರಕಾರದ ರತ್ನಗಳಿಂದ ಶೋಭಿಸುತ್ತಿತ್ತು. ಅದರ ಮೇಲೆ ತಿಳುವಾದ ರೇಶಿಮೆಯ ವಸ್ತ್ರವನ್ನು ಹಾಸಿತ್ತು. ಅಲ್ಲಲ್ಲಿ ಮುತ್ತಿನ ಝುಲ್ಲರಿಗಳಿಂದ ಶೋಭಿಸುತ್ತಿರುವ ಛತ್ರವು ಹುಣ್ಣಿಮೆಯ ಪೂರ್ಣಚಂದ್ರನಂತೆ ಮೇಲೆ ಶೋಭಿಸುತ್ತಿತ್ತು. ಇಂತು ಸಜ್ಜಾದ ಮಂಚದ ಮೇಲೆ ಕೃಷ್ಣ ಮೇಘದಂತೆ ಅತಿ ಪ್ರಚಂಡ ದೇಹವುಳ್ಳವನೂ, ಕರ್ಣಕುಂಡಲ, ಶ್ವೇತ ವಸ್ತ್ರಗಳನ್ನು ಧರಿಸಿದವನೂ, ಸುಗಂಧ ದ್ರವ್ಯವನ್ನು ಮೈಗೆ ಲೇಪಿಸಿಕೊಂಡಿರುವಂಥವನೂ ಆದ ರಾವಣನು ಮಲಗಿರುವದನ್ನು ಕಂಡನು. ಅಂಥ ಆ ರಾವಣನನ್ನು ಕಂಡು ಹನುಮಂತನು ಆಶ್ಚರ್ಯದಿಂದಲೂ, ಭಯದಿಂದಲೂ ಆತನನ್ನು ಸಂಪೂರ್ಣವಾಗಿ ಅವಲೋಕಿಸುತ್ತ ತನ್ನ ದೃಷ್ಟಿಯನ್ನು ಎರಡನೆಯ ಮಂದಿರದ ಕಡೆಗೆ ತಿರುವಿ

ದನು. ಅಲ್ಲಿ ಮಲಗಿರುವ ಎಂಟು ಹತ್ತುಜನ ಸುಂದರಿಯರನ್ನು ಕಂಡನು. ಅವರಲ್ಲಿ ಕನಕಲಕ್ಷ್ಮಿಯಂತೆ ರೂಪವುಳ್ಳ ಮಂಡೋದರಿಯನ್ನು ಕಂಡು ಇವಳೇ ಸೀತಾಮಾತೆಯಾಗಿರಬೇಕೆಂದು ತಿಳಿದು ಅತಿ ಆನಂದದಿಂದ ತಾನು ಕುಳಿತಿರುವಂಥ ಕನಕಸ್ತಂಭದ ಮೇಲಿಂದ ಜಿಗಿಯುತ್ತ ಪುನಃ ಪುನಃ ಅದರ ಮೇಲೆ ಹತ್ತುತ್ತ ಮನಬಂದಂತೆ ಕುಣಿದಾಡಹತ್ತಿದನು. ಆದರೆ ತುಸು ಹೊತ್ತಿನ ಮೇಲೆ ಆತನ ಮನಸ್ಸಿನಲ್ಲಿ ಒಂದು ಸಂಶಯವುಂಟಾಗಿ ಅವನ ಆನಂದವೆಲ್ಲವೂ ಅಳಿದು ಹೋಯಿತು. "ಛೀ, ಇವಳು ಸೀತಾಮಾತೆಯಾಗಿರಲಿಕ್ಕಿಲ್ಲ. ಸೀತಾಮಾತೆಯು ರಾಮವಿರಹದಿಂದ ಬಳಲುತ್ತಿರುವಳು. ಅವಳು ಹಸಿವೆ-ನೀರಡಿಕೆ-ನಿದ್ರೆಗಳನ್ನು ತೊರೆದು ಶ್ರೀರಾಮಚಂದ್ರನ ಧ್ಯಾನದಲ್ಲಿಯೇ ಮಗ್ನಳಾಗಿರಬಹುದು. ಈ ಸ್ತ್ರೀಯು ರಾವಣನ ಪಟ್ಟದ ರಾಣಿಯಾಗಿರಲಿಕ್ಕಿಲ್ಲವೇ ? ಅಂತೆಯೇ ಇವಳು ಇಷ್ಟು ಸುಖವಾಗಿ ನಿದ್ರಿಸುತ್ತಿರುವಳು. ಎಂದು ತಿಳಿದು ಅತಿ ದುಃಖದಿಂದ ಅಂತಃಪುರದಿಂದ ಹೊರಗೆ ಬಂದು ಅಲ್ಲಿರುವ ಸುಂದರವಾದ ವನಗಳನ್ನೂ, ಉಪವನಗಳನ್ನೂ ಶೋಧಿಸುತ್ತ ಹೊರಟನು. ಆದರೆ ಸೀತಾಮಾತೆಯು ಎಲ್ಲಿಯೂ ದೊರಕಲಿಲ್ಲ. ಆಗ ಅವನಿಗೆ "ನಾನು ಇಷ್ಟು ವಿಸ್ತೀರ್ಣವಾದ ಸಮುದ್ರವನ್ನು ದಾಟಿ ಬಂದುದು ವ್ಯರ್ಥವಾಗುವದೇನೋ" ಎಂದು ದುಃಖವಾಯಿತು. "ರಾವಣನು ಕೊಡುತ್ತಿರುವ ಕಷ್ಟಗಳಿಂದ ಪ್ರಾಣವನ್ನು ತ್ಯಜಿಸಿರಬಹುದೇ ? ಇಲ್ಲವಾದರೆ ಮತ್ತೆಲ್ಲಿಯಾದರೂ ಆ ರಾವಣನು ಮುಚ್ಚಿಟ್ಟಿರಬಹುದೇ ?" ಎಂದು ಆಲೋಚಿಸುತ್ತಿರುವಷ್ಟರಲ್ಲಿ ಆತನಿಗೆ ಸಂಪಾತಿಯು ಹೇಳಿರುವದು ನೆನಪಾಯಿತು. "ಆ ಮಾತು ನಿಜವಿರಲೇಬೇಕು. "ಪ್ರಯತ್ನಾಂತೇ ಪರಮೇಶ್ವರ'-ಎಂಬಂತೆ ನಾನು ಇನ್ನುಳಿದ ಸ್ಥಳಗಳನ್ನು ಶೋಧಿಸುವೆನು." ಎನ್ನುತ್ತ ಹಾಗೆಯೇ ಮುಂದಕ್ಕೆ ನಡೆದನು ಅಷ್ಟರಲ್ಲಿ ಅವನಿಗೆ ಒಂದು

ಅಶೋಕವನವು ಕಂಡಿತು. ಮುಂದೆ ಅವನು ಮನಸ್ಸಿನಲ್ಲಿ ಶ್ರೀರಾಮ ಚಂದ್ರನನ್ನು ಧ್ಯಾನಿಸುತ್ತ ಆ ಅಶೋಕವನದಲ್ಲಿ ಹೊಕ್ಕು ಅಲ್ಲಿರುವ ಒಂದು ಉನ್ನತ ವೃಕ್ಷದ ಮೇಲೆ ಹತ್ತಿದನು. ಗಿಡದಿಂದ ಗಿಡಕ್ಕೆ ಜಿಗಿಯುತ್ತ ಹೋಗುತ್ತಿರುವಾಗ ಗಿಡಗಳ ಮೇಲೆ ಮಲಗಿರುವ ಪಕ್ಷಿಗಳು ಎಚ್ಚತ್ತು ಕಿಲಬಿಲ ಧ್ವನಿ ಮಾಡುತ್ತ ಹಾರಾಡಹತ್ತಿದವು. ಆ ವನವು ಅಲ್ಲಲ್ಲಿ ಅತಿ ಎತ್ತರವಾದ ಕಾರಂಜಿಗಳಿಂದಲೂ ಬಣ್ಣಬಣ್ಣದ ಹೂವಿನ ಗಿಡಬಳ್ಳಿಗಳಿಂದಲೂ ಅಂದವಾಗಿ ಕಾಣುತ್ತಿತ್ತು. ಹೀಗೆ ನಿರೀಕ್ಷಿಸುತ್ತ ಅವನು ಅಲ್ಲಿಯೇ ಸಮೀಪದಲ್ಲಿರುವ ಶಿಂಶಪವೆಂಬ ವೃಕ್ಷದ ಮೇಲೆ ಬಂದು ಕುಳಿತನು. ಆ ವೃಕ್ಷವೆಲ್ಲವೂ ಪುಷ್ಪದಿಂದ ಆಚ್ಛಾದಿತವಾದುದರಿಂದ ಅವನು ಅದರಲ್ಲಿ ಕುಳಿತಿದ್ದು ಯಾರಿಗೂ ಕಂಡು ಬರುವಂತಿರಲಿಲ್ಲ. ಅಲ್ಲಿಂದ ಅವನು ಅತಿ ಸೂಕ್ಷ್ಮವಾಗಿ ಎಲ್ಲ ಕಡೆಯಲ್ಲಿಯೂ ದೃಷ್ಟಿ ಚಲ್ಲಿದನು. ಆಗ ಅವನಿಗೆ ಒಂದು ಅಶೋಕ ವೃಕ್ಷದ ಕೆಳಗೆ ಕುಳಿತು ಅತಿ ಮ್ಲಾನವದನೆಯೊಬ್ಬ ಸ್ತ್ರೀಯಳನ್ನು ಕಂಡನು. ಅವಳ ಸುತ್ತಲು ರಾಕ್ಷಸಿಯರ ಕಾವಲಿರುವಂತೆ ತೋರಿತು. ಅವಳು ಮಲಿನವಾದಂಥ ಪೀತವಸ್ತ್ರವನ್ನು ಧರಿಸಿದ್ದಳು. ಅವಳು ಉಪವಾಸದಿಂದ ಕೃಶಳಾಗಿದ್ದರೂ ಕೂಡ ಶುಕ್ಲಪಕ್ಷದಲ್ಲಿಯ ಚತುರ್ಥಿಯ ಚಂದ್ರಮನಂತೆ ಕಳೆಯುಳ್ಳವಳಾಗಿದ್ದಳು. ತನ್ನ ಪ್ರೀತಿಯ ಜನರ ವಿರಹ ಸಂತಾಪದಿಂದ ಒಂದೇ ಸವನೆ ಕಣ್ಣೀರು ಸುರಿಸುತ್ತ ಉಸಿರ್ಗರೆಯುತ್ತ ಕುಳಿತಿದ್ದಳು. ಅವಳ ಮುಡಿಬಿಚ್ಚಿದ ಹೆಳಲು ಅಲೆಯುವ ಕೃಷ್ಣಸರ್ಪದಂತೆ ಅವಳ ಬೆನ್ನಮೇಲೆ ಶೋಭಿಸುತ್ತಿತ್ತು. ನೆಲದ ಮೇಲೆ ಕುಳಿತು ‘ ರಾಮ ’ ‘ ರಾಮ ’ ಎಂದು ತನ್ನ ಪ್ರಿಯನನ್ನೇ ಧ್ಯಾನಿಸುತ್ತಿದ್ದಳು. ಇಷ್ಟು ದುಃಖದಲ್ಲಿದ್ದ ಸೌಭಾಗ್ಯ ಸುಂದರಿಯನ್ನು ಕಂಡು ಹನುಮಂತನು ‘ ಇವಳೇ ಸೀತಾಮಾತೆಯಾಗಿರಬಹುದು ಎಂದು ಊಹಿಸಿದನು. ಶ್ರೀರಾಮಚಂದ್ರನ ಅಪ್ರ

ತಿಮವಾದ ಚಲುವಿಕೆಯಂತೆಯೇ ಇವಳ ಸೌಂದರ್ಯವಿರುವದು. ಇವ
ರಿಬ್ಬರ ಅನ್ಯೋನ್ಯಪ್ರೀತಿಯು ಇವಳ ಹಾಗೂ ಆತನ ವಿಪನ್ನಾವಸ್ಥೆ
ಯಿಂದ ಸ್ಪಷ್ಟವಾಗಿ ವ್ಯಕ್ತವಾಗುವದು. ನಿಜವಾಗಿಯೂ ಶ್ರೀರಾಮನು
ಸೀತಾವಿಯೋಗದಿಂದ ಇದುವರೆಗೆ ಇದ್ದುದು ಪರಮ ಆಶ್ಚರ್ಯವು!
ಏಕೆಂದರೆ ಇಂಥ ಸ್ತ್ರೀ ರತ್ನವು ಪೃಥ್ವಿಯ ಮೇಲೆ ಸಿಗುವದು ಪರಮ
ದುರ್ಲಭವು. ಹೀಗೆ ಹನುಮಂತನು ಹಲವಾರು ವಿಚಾರಗಳಿಂದ
ತುಂಬಿ ಶ್ರೀರಾಮನನ್ನು ಧ್ಯಾನಿಸುತ್ತ ಆ ಶಿಂಶಪ ವೃಕ್ಷದಲ್ಲಿ ಕುಳಿ
ತಿದ್ದನು.

ಅಂದು ಹುಣ್ಣಿವೆಯಿದ್ದುದರಿಂದ ಪೂರ್ಣಚಂದ್ರನ ಬೆಳದಿಂಗಳು
ಪೃಥ್ವೀತಲದ ತುಂಬೆಲ್ಲ ಪಸರಿಸಿತ್ತು. ಆಗ ಸೀತೆಯನ್ನು ಸುತ್ತುಗಟ್ಟಿ
ಕುಳಿತಿರುವ ರಾಕ್ಷಸಿಯರ ಮುಖಗಳು ಅತಿಸ್ಪಷ್ಟವಾಗಿ ಹನುಮಂತ
ನಿಗೆ ಕಂಡು ಬರುತ್ತಿದ್ದವು. ಆ ಭಯಂಕರ ಸ್ವರೂಪದ ರಾಕ್ಷಸಿಯರು
ಕೈಯಲ್ಲಿ ಅತಿ ತೀಕ್ಷ್ಣವಾದ ಖಡ್ಗಗಳನ್ನು ಹಿಡಿದುಕೊಂಡು ಸೀತಾ
ಮಾತೆಯ ಸುತ್ತಲು ಕಾವಲು ಮಾಡುತ್ತಿದ್ದರು ಅದನ್ನು ಕಂಡು ಹನು
ಮಂತನಿಗೆ ಪರಮ ದುಃಖವೆನಿಸಿತು. ಅಷ್ಟರಲ್ಲಿ ಅತಿ ದೂರದಲ್ಲಿ ಕೈ
ದೀವಟಿಗೆಗಳ ಪ್ರಕಾಶದಲ್ಲಿ ಅತಿ ಭವ್ಯವಾದ ಆಕೃತಿಯೊಂದು
ಕೆಲವು ಜನ ಸ್ತ್ರೀಯರೊಡನೆ ಇತ್ತ ಕಡೆಗೆ ಬರುವದನ್ನು ಕಂಡನು.
ಬರುವಾಗ್ಗೆ ಕೆಲಸ್ತ್ರೀಯರು ಬೀಸಣಿಕೆಯಿಂದ ಆ ಆಕೃತಿಗೆ ಗಾಳಿ
ಯನ್ನು ಬೀಸುತ್ತಿದ್ದರು. ಕೆಲವರು ಅವನ ಮಸ್ತಕದ ಮೇಲೆ ಶ್ವೇತ
ಛತ್ರ ಹಿಡಿದುಕೊಂಡು ಬರುತ್ತಿದ್ದರು. ಬೆಳಗು ಜಾವದಲ್ಲಿ ಅತಿ
ಕಾಮಾಂಧನಾಗಿ ಆ ರಾವಣನು ಅಶೋಕವನಕ್ಕೆ ಸೀತಾಮಾತೆ
ಯನ್ನು ವಶಪಡಿಸಿಕೊಳ್ಳಲು ಬಂದನು. ಅವನನ್ನು ಕಂಡು ಸೀತಾ
ಮಾತೆಯು ಗದಗದನೆ ನಡುಗುತ್ತ ತನ್ನ ಎರಡೂ ಕಾಲುಗಳನ್ನು ತನ್ನ

ಕೈಗಳಿಂದ ಬಿಗಿಯಾಗಿ ಹಿಡಿದುಕೊಂಡು ಭೂದೇವಿಯ ಕಡೆಗೇ ದೃಷ್ಟಿ ಯನ್ನು ಇಟ್ಟುಕೊಂಡು ಕುಳಿತುಕೊಂಡಳು. ಅವಳ ಸರ್ವಾಂಗವು ಮಲೀನವಾಗಿದ್ದರೂ ಕೂಡ ಅವಳು ಕೆಸರಿನಲ್ಲಿ ಬೆಳೆದ ಕಮಲಿನಿ ಯಂತೆ ಶೋಭಿಸುತ್ತಿದ್ದಳು. ಅಂತಹ ಅನಾಥಳಾದ ಸೀತಾಮಾತೆ ಯನ್ನು ಕಂಡು ರಾವಣನ ಮೋಹವು ಮತ್ತಷ್ಟು ಹೆಚ್ಚಿತು. ಕೂಡಲೇ ಅವನು ಮುಂದೆ ಬಂದು "ಹೇ ಸುಂದರಿ, ನೀನು ನನ್ನ ಅಂಜಿಕೆಯಿಂದ ಎಲ್ಲ ಶರೀರವನ್ನು ಮುದುಡಿಕೊಂಡು ಕುಳಿತಿರುವೆ. ನಾನು ನಿನ್ನ ದೃಷ್ಟಿಗೆ ಬೀಳಬಾರದೆಂದು ನಿನಗೆನ್ನಿಸುತ್ತದೆ. ಈ ರೀತಿಯಾಗಿ ನೀನು ವ್ಯರ್ಥವಾಗಿ ಅಂಜಿ ದುಃಖಿಸಬೇಡ. ನಿನ್ನ ಮೇಲೆ ನನ್ನ ಪ್ರೇಮವು ಅತ್ಯಂತವಾಗಿರುವದು. ರಾಜ್ಯವನ್ನು ಕಳೆದುಕೊಂಡು ವನ—ಪರ್ವತಗಳನ್ನು ಅಲೆಯುತ್ತಿರುವ ಆ ರಾಮನಿಂದ ನಿನಗೆ ಸುಖ ವಾಗಲಾರದು. ಅವನು ಇದುವರೆಗೆ ಜೀವದಿಂದ ಸಹ ಇರ ಲಾರನು. ಇದ್ದರೂ ಕೂಡನಿನ್ನನ್ನು ನನ್ನ ಕೈಯಿಂದ ಬಿಡಿಸಿಕೊಂಡು ಹೋಗುವದು ಅವನಿಗೆ ಅಸಾಧ್ಯವಾದ ಮಾತು. ಕಾರಣ ನೀನು ನನ್ನನ್ನು ವರಿಸಿ ಸುಖವಾಗಿ ಬಾಳು" ಎಂದು ಪರಿಪರಿಯಾಗಿ ಹೇಳಿ ದನು. ಆ ಮಾತು ಕೇಳಿ ಸೀತೆಯು ಅತಿಕ್ರೋಧದಿಂದಲೂ ದುಃಖ ದಿಂದಲೂ "ಎಲೈ ರಾವಣನೇ, ನೀನು ಪರಸ್ತ್ರೀಯಳ ಮೇಲೆ ಮನಸ್ಸು ಮಾಡಿದರೆ ನಿನಗೆಂದೂ ಸುಖವಾಗಲಾರದು. ಆ ನಿನ್ನ ವಾಸನೆಯನ್ನು ನಿನ್ನ ಸ್ತ್ರೀಯಳಲ್ಲಿರಿಸು. ಅಂದರೆ ನಿನಗೆ ಹಿತವಾಗುವದು. ನೀನು ಹೇಗೆ ನಿನ್ನ ಪತ್ನಿಯನ್ನು ರಕ್ಷಿಸುವಿಯೋ ಅದರಂತೆ ಪ್ರತಿಯೊಬ್ಬರು ತಮ್ಮ ತಮ್ಮ ಸತಿಯನ್ನು ರಕ್ಷಿಸಿಯೇ ತೀರುವರು. ಪಾಪಿ ಮನು ಷ್ಯನು ಎಂದಿಗೂ ಯಶಸ್ಸನ್ನು ಪಡೆಯಲಾರನು. ಕಾರಣ ನೀನು ನನ್ನ ವ್ಯಾಮೋಹವನ್ನು ಬಿಟ್ಟು ಸುಖವಾಗಿ ಬಾಳು. ಇಲ್ಲವಾದರೆ ನಿನ್ನ ನಾಶವಾಗುವದಲ್ಲದೆ ನಿನ್ನ ಕುಲಕ್ಷಯವೂ ಆಗುವದು. ರಾಜನು

ಸ್ವತಃ ಆತ್ಮಸಂಯಮನವನ್ನು ಬಿಟ್ಟು ಅನ್ಯಾಯಕ್ಕೆ ಪ್ರವೃತ್ತನಾದರೆ ಆತನ ಸಂಗಡ ಅವನ ರಾಷ್ಟ್ರವೂ ನಾಶಹೊಂದುತ್ತದೆ. ನಿನ್ನೊಬ್ಬನ ಅಪರಾಧದ ಪರಿಣಾಮವಾಗಿ ಈ ಸಮೃದ್ಧವಾದ ಲಂಕಾ ಪಟ್ಟಣವು ಬೇಗನೇ ನಾಶವಾಗುವದು. ಕಾರಣ ನೀನು ನನ್ನನ್ನು ಶ್ರೀರಾಮಚಂದ್ರನ ಬಳಿಗೆ ಕಳಿಸಿ ಸುಖವಾಗಿ ಬಾಳು. ಶ್ರೀರಾಮ ಚಂದ್ರನು ಶರಣು ಬಂದವರನ್ನು ರಕ್ಷಿಸುವನು. ನೀನು ಆತನಿಗೆ ಶರಣು ಹೋಗು'' ಎಂದು ಪರಿಪರಿಯಾಗಿ ಹೇಳಿದಳು. ಅವಳ ಮಾತನ್ನು ಕೇಳಿ ರಾವಣನು ಕ್ರೋಧಾನ್ವಿತನಾಗಿ ''ಹೇ ಜಾನಕಿ, ಇದುವರೆಗೆ ನಾನು ನಿನ್ನ ಮೇಲಿನ ಪ್ರೇಮಕ್ಕಾಗಿ ನಿನ್ನನ್ನು ಬಿಟ್ಟಿರು ವೆನು. ಇಲ್ಲದಿದ್ದರೆ ನಿನ್ನನ್ನು ಎಂದೋ ಹರಿದು ತಿನ್ನುತ್ತಿದ್ದೆನು. ಆದರೂ ಇನ್ನೂ ನಿನಗೆ ಎರಡು ತಿಂಗಳ ಅವಕಾಶವನ್ನು ಕೊಟ್ಟಿರುವೆನು. ಅಷ್ಟರಲ್ಲಿ ನೀನು ನನಗೆ ವಶವಾಗದಿದ್ದರೆ ನಿನ್ನನ್ನು ತುಂಡು ತುಂಡಾಗಿ ಮಾಡಿ ನಿನ್ನ ಮಾಂಸವನ್ನು ತಿನ್ನುವೆನು.'' ಎಂದು ಹೇಳಿ, ಎಲ್ಲ ರಾಕ್ಷಸಿ ಯರಿಗೂ ಅವಳ ಮೇಲೆ ಬಲವಾಗಿ ಕಾವಲಿಡಲು ಅಪ್ಪಣೆ ಕೊಟ್ಟು ಹೊರಟು ಹೋದನು.

ರಾವಣನು ಅಂತಃಪುರಕ್ಕೆ ಹೋದನಂತರ ಎಲ್ಲ ರಾಕ್ಷಸಿಯರು ಸೀತೆಯನ್ನು ಪರಿಪರಿಯಾಗಿ ಪೀಡಿಸುತ್ತ ''ಹೇ ಅಧಮಳೇ, ಯಾವನ ಆಜ್ಞೆಯಂತೆ ಚಂದ್ರಸೂರ್ಯರೂ ಸಹ ನಡೆಯುವರೋ ಅಂಥ ರಾವಣನ ಪತ್ನಿಯಾಗಲು ನೀನು ಒಪ್ಪುವದಿಲ್ಲವೇ ?'' ಎಂದು ಕರ್ಣ ಕಠೋರವಾದ ನುಡಿಗಳನ್ನಾಡಹತ್ತಿದರು. ಅವರ ಮಾತನ್ನು ಕೇಳಿ ''ಎಲೈ ರಕ್ಕಸಿಯರೇ, ಈ ರೀತಿಯಾಗಿ ಪೀಡಿಸುವದರ ಬದಲು ನೀವೇ ನನ್ನನ್ನು ತಿಂದು ಬಿಡಿರಿ. ಅಂದರೆ ನಾನು ನಿಮ್ಮ ಪೀಡೆಯಿಂದ ಒಮ್ಮೆ ಮುಕ್ತಳಾಗುವೆನು. ಶ್ರೀರಾಮಚಂದ್ರನನ್ನು ಬಿಟ್ಟು ಅನ್ಯರನ್ನು ನಾನು ಕಣ್ಣೆತ್ತಿಸಹ ನೋಡಲಾರೆನು. ರಾಮಚಂದ್ರನು ರಾಜ್ಯಭ್ರಷ್ಟನಾಗಿ

ದ್ದರೂ ಕೂಡ ಅವನೇ ನನ್ನ ಪತಿಯಾಗಿರುವನು.” ಎಂದು ಹೇಳಿ ಅಲ್ಲಿಂದ ಎದ್ದು ಶ್ರೀರಾಮಚಂದ್ರನನ್ನು ಧ್ಯಾನಿಸುತ್ತ ಶಿಂಶುಪ ವೃಕ್ಷದ ಕೆಳಗೆ ಬಂದು ಕುಳಿತಳು. ಆಗ ವಿನತಾ ಎಂಬ ರಾಕ್ಷಸಿಯು ಅವಳೆಡೆಗೆ ಬಂದು ‘‘ಸೀತೆ, ಸಾಕುಮಾಡು ನಿನ್ನ ಹಟವನ್ನು. ಇಂದಿನ ವರೆಗೆ ನೀನು ನಿನ್ನ ಪತಿಯುಮೇಲೆ ಬಹಳ ಪ್ರೇಮವನ್ನು ತೋರಿಸಿದೆ. ಆದರೆ ‘‘ ಅತಿ ಸರ್ವತ್ರವರ್ಜಯೇತ್ ’’ ಎಂಬಂತೆ ಯಾವದೇ ಮಾತನ್ನುಹೆಚ್ಚಾಗಿ ಬಳಿಸಿದರೆ ಅದು ದುಃಖಕ್ಕೆ ಕಾರಣವು ಇದನ್ನರಿತು ನೀನು ರಾಕ್ಷಸರಾಜನಾದ ರಾವಣನನ್ನು ವರಿಸಿ ಸುಖವಾಗಿ ಬಾಳು. ಇಲ್ಲದಿದ್ದರೆ ಈ ನನ್ನ ಹದನವಾದ ಶಸ್ತ್ರದಿಂದ ನಿನ್ನನ್ನು ಕೊಲ್ಲುವೆನು’’ ಎಂದು ಹೇಳಿ ತನ್ನ ಆಯುಧವನ್ನು ಸೀತೆಯ ಮುಂದೆ ಝಳಪಿಸಿದಳು. ಅದನ್ನು ಕಂಡು ಸೀತೆಯ ಸರ್ವಾಂಗವು ಗದಗದನೆ ನಡುಗಿತು. ಮತ್ತು ‘‘ ಹಾ ರಾಮಾ ! ಹಾ ಲಕ್ಷ್ಮಣಾ ! ’’ ಎಂದು ಶೋಕಿಸುತ್ತ ‘‘ ಸಾವು ಕರೆದರೆ ಬರುವದಿಲ್ಲ. ಅದು ಕಾಲಾನುಸಾರವಾಗಿಯೇ ಬರುವದು. ಶ್ರೀರಾಮಚಂದ್ರನನ್ನು ಬಿಟ್ಟು ನಾನು ಇನ್ನೂವರೆಗೆ ಬದುಕಿದುದೇ ಆಶ್ಚರ್ಯವಾಗಿದೆ ! ಇಂಥ ಈ ಕ್ರೂರರಾದ ರಕ್ಕಸಿಯರು ನನ್ನನ್ನು ಈ ರೀತಿ ಪೀಡಿಸುತ್ತಿದ್ದರೂ ಕೂಡ ನನಗೆ ಮೃತ್ಯುವು ಬರಲೊಲ್ಲದು. ಪೂರ್ವ ಜನ್ಮದಲ್ಲಿ ನಾನು ಯಾವ ಘೋರವಾದ ಪಾತಕವನ್ನು ಮಾಡಿದ್ದೆನೋ ಏನೋ ! ಅಂತೆಯೇ ಈ ದುಃಖ ಅನುಭವಿಸುತ್ತಿರುವೆನು. ಇನ್ನೆಂತು ಶ್ರೀರಾಮಚಂದ್ರರು ನನ್ನ ದೃಷ್ಟಿಗೆ ಬೀಳುವರು ? ಇನ್ನು ನಾನು ಈ ತಾಪವನ್ನು ಸಹಿಸಲಾರೆ. ಈ ರಕ್ಕಸಿಯರ ಕಾಟವನ್ನು ತಪ್ಪಿಸಿಕೊಳ್ಳಲು ಪ್ರಾಣಕೊಡುವ ಒಂದೇ ಮಾರ್ಗವು ಉಳಿದಿದೆ” ಎಂದು ಹಲುಬಿ ಶ್ರೀರಾಮನನ್ನು ಸ್ಮರಿಸಿದಳು. ‘‘ಹೇ ರಾಮಚಂದ್ರಾ, ನನ್ನ ಈ ಸ್ಥಿತಿಯು ನಿಮಗೆ ಗೊತ್ತಾಗುವ ಬಗೆ ಯೆಂತು ? ನಿಮಗೆ ಗೊತ್ತಾಗಿದ್ದರೆ ನನ್ನನ್ನು ಈ ದುಃಖದಿಂದ ಪಾರು

ಮಾಡದೆ ಎಂದೂ ಇರುತ್ತಿರಲಿಲ್ಲ. ಒಂದುವೇಳೆ ನೀವೇ ನನ್ನ ವಿರಹ ದುಃಖದಿಂದ ಈ ಲೋಕವನ್ನು ಬಿಟ್ಟಿರಬಹುದೇ ? ಛೀ, ಈ ಕಲ್ಪನೆಯೂ ಕೂಡ ಅಸಾಧ್ಯವಾಗಿ ತೋರುತ್ತದೆ. ಧರ್ಮಶೀಲರಾದ ನೀವೇ ನನ್ನಪತಿದೇವರು, ಹಾಗೆಂದಿಗೂ ಮಾಡಲಾರರಿ" ಹೀಗೆ ನಾನಾ ರೀತಿಯಾಗಿ ಶೋಕಿಸಿ ಕೊನೆಗೆ ಅವಳು ಪ್ರಾಣಕೊಡಲು ಸಿದ್ಧಳಾದಳು. ಆಗ ಅಲ್ಲಿರುವ ರಕ್ಕಸಿಯರೆಲ್ಲರೂ ಗಾಬರಿಯಾಗಿ ಈ ಸಂಗತಿಯನ್ನು ರಾವಣನಿಗೆ ತಿಳಿಸಲು ಹೋದರು. ಮುಂದೆ ತ್ರಿಜಟಾಎಂಬ ರಾಕ್ಷಸಿಯು ಅಲ್ಲಿಗೆ ಬಂದು ಅಲ್ಲಿ ಉಳಿದ ರಕ್ಕಸಿಯರಿಗೆ "ನೀವು ಇವಳಿಗೆ ಕಷ್ಟ ಕೊಡಬೇಡಿರಿ. ಇವಳ ಕ್ಷಮೆಯನ್ನು ಬೇಡಿರಿ. ನಾನು ಇಂದು ಒಂದು ಸ್ವಪ್ನವನ್ನು ಕಂಡಿರುವೆನು. 'ರಾಮ-ಲಕ್ಷ್ಮಣರು ಬಂದು ಸೀತಾ ಮಾತೆಯನ್ನು ಕರೆದುಕೊಂಡು ಹೋದರು. ಎದುರು ಬರುತ್ತಿದ್ದ ರಾವಣನು ನೆಲಕ್ಕುರುಳಿದನು.' ಈ ಸ್ವಪ್ನದ ಮೇಲಿಂದ ರಾಮ-ಲಕ್ಷ್ಮಣರು ಇಲ್ಲಿಗೆ ಬಂದು ರಾವಣನನ್ನು ಸಂಹರಿಸಿ ಸೀತಾಮಾತೆಯನ್ನು ಬಿಡಿಸಿಕೊಂಡು ಹೋಗುವರು. ಆ ವೇಳೆಯಲ್ಲಿ ಸೀತಾ ಮಾತೆಯ ಹೊರತಾಗಿ ಯಾರು ಕಾಯುವರು ? ಕಾರಣ ನಾವೆಲ್ಲರೂ ಅವಳಿಗೆ ದುಃಖವನ್ನು ಕೊಡದೆ ಇಲ್ಲಿಂದ ಹೊರಟು ಎರಡನೇಯ ಕಡೆಗೆ ಹೋಗುವಾ" ಎಂದು ಹೇಳಿದಳು. ಈ ಮಾತು ಕೇಳಿ "ನಿನ್ನ ಬಾಯಲ್ಲಿ ಸಕ್ಕರೆ ಬೀಳಲಿ" ಎಂದು ಸೀತೆಯು ಅವಳಿಗೆ ಹರಸಿದಳು.

ಮರದಲ್ಲಿ ಮರೆಯಾಗಿಕುಳಿತ ಹನುಮಂತನು ಇದೆಲ್ಲವನ್ನು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿದನು. ಮತ್ತು ಸೀತಾಮಾತೆಗೆ ಭೆಟ್ಟಿಯಾಗಲು ಇದೇ ಸುಸಮಯವೆಂದರಿತು ಶ್ರೀರಾಮಚರಿತ್ರೆಯ ಗೀತೆಯನ್ನು ಹಾಡುತ್ತ ಕುಳಿತನು. ಮತ್ತು ಹನುಮಂತನೆಂಬ ವೀರನು ಸೀತಾಮಾತೆಯನ್ನು ಹುಡುಕುವದರಸಲವಾಗಿ ಶ್ರೀರಾಮ ಚಂದ್ರನ ಆಜ್ಞೆಯಂತೆ ಇಲ್ಲಿಗೆ ಬಂದಿರುವನು' ಎಂದು ಗಟ್ಟಿಯಾಗಿ

ನುಡಿದು ಸುಮ್ಮನಾದನು. ಅಕಸ್ಮಾತ್ತಾಗಿ ಈ ಮಾತನ್ನು ಕೇಳಿ ಸೀತಾ ಮಾತೆಗೆ ಬಹಳ ಚಮತ್ಕಾರವೆನಿಸಿತು. ನಾನು ಸ್ವಪ್ನವನ್ನು ಕಾಣು ತ್ತಿರುವೆನೋ ಏನೋ ಎಂಬಂತೆ ಅವಳಿಗೆ ಭಾಸವಾಯಿತು. ಕೂಡಲೇ ಅವಳು ಅತಿ ಆಶ್ಚರ್ಯದಿಂದಲೂ, ಸಂಶಯದಿಂದಲೂ ತನ್ನ ಮುಖ ಮೇಲಕ್ಕೆತ್ತಿ "ಈ ವೃಕ್ಷದಲ್ಲಿ ಯಾರಾದರೂ ಕುಳಿತಿರಬಹುದೋ ಏನೋ?" ಎಂದು ಸೂಕ್ಷ್ಮವಾಗಿ ನಿರೀಕ್ಷಿಸಿದಳು. ಆಗ ಅವಳ ದೃಷ್ಟಿಗೆ ಸುಂದರ ಕಪಿಯೊಂದು ಕಂಡಿತು. ಆ ಕಪಿಯ ಕಣ್ಣುಗಳು ಬಂಗಾರ ದಂತೆ ಲಕಲಕ ಹೊಳೆಯುತ್ತಿದ್ದವು. ಮತ್ತು ಅದು ಅತಿ ನಮ್ರತೆ ಯಿಂದ ಕುಳಿತಿತ್ತು. ಅದನ್ನು ಕಂಡು ಅವಳಿಗೆ ಅತಿಶಯ ವಿಸ್ಮಯ ವೆನಿಸಿ ನೋಡುತ್ತಿರುವಾಗಲೇ ಇದು ಏನಾದರೂ ರಾಕ್ಷಸರ ಮಾಯೆ ಯಿರಬಹುದೆಂಬ ಭೀತಿಯಿಂದ "ಹಾ! ರಾಮಚಂದ್ರಾ, ನನ್ನನ್ನು ರಕ್ಷಿ ಸಿರಿ" ಎಂದು ಕೂಗಿ ಗಟ್ಟಿಯಾಗಿ ಕಣ್ಣನ್ನು ಮುಚ್ಚಿದಳು. ಇಷ್ಟರಲ್ಲಿ ಹನುಮಂತನು ಕೆಳಗಿಳಿದು ಬಂದು ಕರುಣಾಪೂರ್ಣವಾದ ಮುದ್ರೆ ಯಿಂದಲೂ, ವಿನಯದಿಂದಲೂ ಅವಳಿಗೆ ಸಾಷ್ಟಾಂಗವೆರಗಿ ಕೈ ಮುಗಿದು ನಿಂತನು. "ಹೇ ದೇವಿ, ನಾನು ಶ್ರೀರಾಮಚಂದ್ರನ ದೂತನಿರುವೆನು. ಆತನ ಆಜ್ಞೆಯಂತೆ ನಿಮ್ಮ ಬಳಿಗೆ ಬಂದಿರುವೆನು. ವೈದೇಹೀ, ಶ್ರೀರಾಮಚಂದ್ರನು ಕುಶಲನಿರುವನು. ಆದರೂ ನಿನ್ನ ವಿರಹ ದುಃಖದಿಂದ ಮೇಲಿಂದಮೇಲೆ "ಹಾ-ಸೀತೆ, ಹಾ! ಸೀತೆ" ಎಂದು ಕೊರಗುತ್ತಿರುವನು. ಮತ್ತು ನಿನ್ನ ಕುಶಲತೆಯನ್ನು ಕೇಳಿರು ವನು. ಶ್ರೀರಾಮಚಂದ್ರನ ತಮ್ಮನಾದ ಲಕ್ಷ್ಮಣನು ಶೋಕಸಂತ್ರಸ್ತ ನಾಗಿರುವನು. ಅವನು ನಿನಗೆ ಶಿರಸಾವಂದನೆ ಹೇಳಿರುವನು" ಎಂದು ಹೇಳಿದನು. ಅವರಿಬ್ಬರ ಕುಶಲವಾರ್ತೆಯನ್ನು ಕೇಳಿ ಸೀತಾಮಾತೆಗೆ ಆನಂದದ ರೋಮಾಂಚನಗಳೆದ್ದವು. ಆಗ ಅವಳು "ಮನುಷ್ಯನು ಜೀವದಿಂದ ಬದುಕಿದ್ದರೆ ಅತಿ ಕಷ್ಟದಲ್ಲಿದ್ದರೂ ಸಹ ಒಂದಿಲ್ಲೊಂದು

ದಿನ ಸುಖಗಳನ್ನು ಕಾಣುವನು ಎಂಬದು ಸತ್ಯವು" ಎಂದು ಸಮಾಧಾನದಿಂದ ನುಡಿದಳು. ಈ ಮಾತು ಕೇಳಿ ಹನುಮಂತನು ತುಸು ಮುಂದಕ್ಕೆ ಬರಹತ್ತಿದನು. ಆಗ ಅವಳು ಇವನು ರಾವಣನೇ ಆಗಿರಬಹುದೆಂದು ಅತಿಭಯದಿಂದ ಆತನ ಕಡೆಯ ದೃಷ್ಟಿಯನ್ನು ಬೇರೆ ಕಡೆಗೆ ಹೊರಳಿಸಿ "ಎಲೈ ರಾವಣನೇ, ಈ ರೀತಿ ಮಾಯಾರೂಪವನ್ನು ಧರಿಸಿ ಪುನಃ ಪುನಃ ನನಗೆ ದುಃಖವನ್ನು ಕೊಡುವದು ನಿನಗೆ ಶೋಭಿಸುವದಿಲ್ಲ. ಹಿಂದಕ್ಕೆ ನೀನು ನಿನ್ನ ನಿಜರೂಪವನ್ನು ಬಿಟ್ಟು ಸನ್ಯಾಸಿ ರೂಪವನ್ನು ಧರಿಸಿ ನನ್ನನ್ನು ಎತ್ತಿಕೊಂಡು ಬಂದೆ; ನೀವು ರಾಕ್ಷಸರು. ಬೇಕಾದಾಗ ಬೇಕಾದ ರೂಪವನ್ನು ಧರಿಸುವಿರಿ. ಕಾರಣ ನಾನು ನಿನ್ನ ಸಂಗಡ ಇನ್ನು ಮುಂದೆ ಒಂದು ಮಾತನ್ನು ಸಹ ಆಡಲಾರೆ" ಎಂದು ಸುಮ್ಮನೆ ಕುಳಿತುಬಿಟ್ಟಳು. ಆವಳ ಆ ನಿಶ್ಚಯಯುಕ್ತವಾದ ಮಾತನ್ನು ಕೇಳಿ ಹನುಮಂತನಿಗೆ ಅಸಮಾಧಾನವಾಯಿತು. ಕೂಡಲೇ ಕೈ ಜೋಡಿಸಿ ಅತಿ ಮಧುರವಾಣಿಯಿಂದ "ದೇವೀ, ವೈದೇಹಿ, ನೀನು ತಿಳಿಯುತ್ತಿರುವ ಆ ದುಷ್ಟನಾದ ಮಾಯಾವಿ ರಾವಣನಾನಲ್ಲ. ನಾನು ನನ್ನ ಪರಾಕ್ರಮದ ಬಲದಿಂದ ಈ ಶತಯೋಜನ ಅಗಲಾದ ಸಮುದ್ರೋಲ್ಲಂಘನ ಮಾಡಿ ನಿನ್ನನ್ನು ಕಾಣಲು ಬಂದ ಶ್ರೀರಾಮಚಂದ್ರನ ದೂತನು. ನಿನ್ನನ್ನು ರಾವಣನು ಆಕಾಶಮಾರ್ಗವಾಗಿ ಒಯ್ಯುತ್ತಿರುವಾಗ ನೀನು ಚಲ್ಲಿರುವ ಅಲಂಕಾರಗಳನ್ನು ನಾನೇ ತೆಗೆದಿಟ್ಟು ಶ್ರೀರಾಮಚಂದ್ರನಿಗೆ ಅವುಗಳನ್ನು ತೋರಿಸಲು ಅವನು "ಹಾ ಸೀತೇ," ಎಂದು ಬಹುಪರಿಯಾಗಿ ಶೋಕಿಸಿದನು. ಆ ಶೋಕದ ವರ್ಣನೆಯನ್ನು ಮಾಡುವದು ಅಸಾಧ್ಯ." ಎಂದು ಹೇಳಿ "ನೀನು ನನ್ನನ್ನು ಗುರುತಿಸುವದರ ಸಲುವಾಗಿ ರಾಮಚಂದ್ರನು ತನ್ನಮುದ್ರಿಕೆಯನ್ನು ನನ್ನ ಕೈಯಲ್ಲಿ ಕೊಟ್ಟಿರುವದನ್ನು ಸ್ವೀಕರಿಸಿರಿ" ಎಂದು ಅದನ್ನು ಅವಳ ಕೈಗೆನೀಡಿದನು. ಸೀತೆಯು

ಆ ಮುದ್ರಿಕೆಯನ್ನು ಕಂಡು ಪರಮಾನಂದ ಭರಿತಳಾದಳು. ಪ್ರತ್ಯಕ್ಷ ಶ್ರೀರಾಮಚಂದ್ರನ ಭೆಟ್ಟಿಯಾದಂತಾಗಿ ಅವಳ ಮುಖಕಮಲವು ಅರಳಿತು. ತನ್ನ ಪತಿಯ ಸಂದೇಶವನ್ನು ತಂದ ಆ ವೀರ ಹನುಮಂತ ನನ್ನು ಮರ್ಯಾದೆಯಿಂದಲೂ, ಪ್ರೀತಿಯಿಂದಲೂ ಹೊಗಳಿದಳು. "ಹೇ ಕಪಿಶ್ರೇಷ್ಠನಾದ ಹನುಮಂತನೇ, ನಿನಗೆ ಯತ್ಕಿಂಚಿತ್ತಾದರೂ ರಾವಣನ ಅಂಜಿಕೆಯಿಲ್ಲಷೇ? ನೀನು ಪ್ರಾಕೃತ ಕಪಿಯಲ್ಲ. ಶ್ರೀರಾಮಚಂದ್ರರು ನಿನ್ನ ಯೋಗ್ಯತೆಯನ್ನು ಅರಿತೇ ನಿನ್ನನ್ನು ನನ್ನ ಕಡೆಗೆ ಕಳುಹಿಸಿರುವರು. ವನವಾಸ ದುಃಖದಿಂದ ನನ್ನ ಪತಿಯು ನನ್ನನ್ನು ಮರೆತಿರಲಿಕ್ಕಿಲ್ಲವೇ? ನನ್ನನ್ನು ಈ ಭಯಂಕರವಾದ ಬಂಧನ ದಿಂದ ನಾನು ಮುಕ್ತಳಾಗಬಹುದೇ? ಸುವರ್ಣಕಾಂತಿಯಂತೆ ಹೊಳೆಯುತ್ತಿರುವ ಶ್ರೀರಾಮಚಂದ್ರರ ಮುಖಕಮಲವು ನನ್ನ ವಿರಹ ದಿಂದ ಬೆಂದು ಬಾಡಿರಬಹುದಲ್ಲವೇ? ನನ್ನ ಮೈದುನ ಶೂರಲಕ್ಷ್ಮಣನು ತನ್ನ ಅಮೋಘಾಸ್ತ್ರದಿಂದ ರಾವಣನನ್ನು ಸಂಹರಿಸಬಹುದಲ್ಲವೆ?" ಈ ರೀತಿಯಾಗಿ ಅವಳ ಹಲವುಪ್ರಶ್ನೆಗಳಿಂದ ಹನುಮಂತನು "ಮಾತೇ! ನೀನು ಇಲ್ಲಿರುವೆ ಎಂಬುದು ಶ್ರೀರಾಮಚಂದ್ರನಿಗೆ ಮೊದಲೇ ಗೊತ್ತಾ ಗಿದ್ದರೆ ಅವನು ನಿನ್ನನ್ನು ಈ ಮೊದಲೇ ಬಿಡಿಸದೆ ಇರುತ್ತಿರಲಿಲ್ಲ. ಇನ್ನು ಮುಂದೆ ನಾನು ನಿಮ್ಮ ಸಂದೇಶವನ್ನು ಅವರಿಗೆ ನೀಡಿದನಂತರ ಪ್ರಚಂಡವಾದ ವಾನರಸೇನೆಯನ್ನು ತೆಗೆದುಕೊಂಡು, ಸಮುದ್ರಕ್ಕೆ ಸೇತುವೆಗಟ್ಟಿ, ಇಲ್ಲಿಗೆಬಂದು, ರಾವಣನನ್ನು, ಸಂಹರಿಸಿ ನಿನ್ನನ್ನು ಬಿಡಿಸಿಕೊಂಡು ಹೋಗುವನು. ಅದು ವರೆಗೆ ನೀನು ಧೈರ್ಯವನ್ನು ತಾಳು" ಎಂದು ಹೇಳಿದನು. ಅವನ ಮಾತನ್ನು ಕೇಳಿ ದುಃಖದಲ್ಲಿಯೂ ಕೂಡ ಅವಳಿಗೆ ಎಷ್ಟೋ ಆನಂದವಾಯಿತು. ಆದರೆ ಹನುಮಂತಾ, ರಾವಣನು ನನಗೆ ಎರಡು ತಿಂಗಳ ಅವಧಿ ಕೊಟ್ಟಿರುವನು. ಆಗುವ ಕೆಲಸಗಳೆಲ್ಲವೂ ಈ ಎರಡು ತಿಂಗಳಲ್ಲಿಯೇ ಆಗಬೇಕು. ಜನಸ್ಥಾನದಲ್ಲಿ

ರುವಾಗ ಯಾರ ಸಹಾಯವಿಲ್ಲದೆ ಹದಿನಾಲ್ಕು ಸಾವಿರ ರಾಕ್ಷಸರನ್ನು ಶ್ರೀರಾಮರು ತಾವೊಬ್ಬರೇ ಸಂಹರಿಸಿದರು. ಅಂಥ ಶ್ರೀರಾಮಚಂದ್ರ ರನ್ನು ಎದುರಿಸಲು ಯಾರಿಗೆ ತಾನೇ ಧೈರ್ಯವಾದೀತು ? ಆದರೆ ಎಲ್ಲ ಮಾತುಗಳು ದೈವಾಧೀನವಾಗಿರುತ್ತವೆ. ನನ್ನ ದೈವದಲ್ಲಿ ಇಂಥ ಶೂರಪತಿಯಿದ್ದರೂ ಕೂಡ ಈ ರೀತಿಯಾಗಿ ದುಃಖಕ್ಕೆ ಗುರಿಯಾಗ ಬೇಕೆಂದು ಬರೆದಿರಬಹುದು. ಅಂತೆಯೇ ಈಗ ಈ ಕಷ್ಟವನ್ನು ಅನುಭೋಗಿಸುತ್ತಿರುವೆನು '' ಎಂದು ಹೇಳಿದಳು.

ಅವಳ ಮಾತನ್ನು ಕೇಳಿ ದೇವೀ, ನೀವು ಚಿಂತಿಸಬೇಡಿರಿ ನಾನು ಈಗಲೇ ನಿಮ್ಮ ಚಿಂತೆಯನ್ನು ದೂರಮಾಡುವೆನು. ನೀವು ನನ್ನ ಬೆನ್ನಮೇಲೆ ಕುಳಿತುಕೊಳ್ಳಿ. ಕೂಡಲೇ ನಿಮ್ಮನ್ನು ಶ್ರೀರಾಮಚಂದ್ರನ ಬಳಿಗೆ ಮುಟ್ಟಿಸುವೆನು. ನಾನು ಚಿಕ್ಕವನಿರುವೆನೆಂದು ಅನುಮಾನಿಸ ಬೇಡಿರಿ ಇಗೋ ನನ್ನ ಪ್ರಚಂಡವಾದ ಈ ರೂಪವು '' ಎಂದು ಉನ್ನತ ರೂಪವನ್ನು ಧರಿಸಿ ನಿಂತುಕೊಂಡನು. ಅದನ್ನು ಕಂಡು ಸೀತಾ ಮಾತೆಯು ಹನುಮಂತಾ, ನೀನು ಅತಿ ವಿಸ್ತೀರ್ಣವಾದ ಸಮುದ್ರ ವನ್ನು ದಾಟಬಂದುದರಿಂದಲೇ ನಿನ್ನ ಪರಾಕ್ರಮವನ್ನುನಾನು ಅರಿತಿರು ವೆನು. ಇಂಥ ಅದ್ಭುತಕೆಲಸವು ಅನ್ಯರಿಂದಾಗದು. ನನಗೆ ಶ್ರೀರಾಮಚಂದ್ರನ ಹೊರತಾಗಿ ಅನ್ಯರ ಸ್ಪರ್ಶವು ಆಗಲಾರದು. ರಾವಣನು ಮೋಸದಿಂದ ನನ್ನನ್ನು ಸ್ಪರ್ಶಿಸಿದನು. ಅದರಲ್ಲಿ ನನ್ನ ಅಪರಾಧವೇನು? ನನ್ನಪತಿಯು ಆ ವೇಳೆಯಲ್ಲಿ ನನ್ನ ಹತ್ತಿರ ಇರಲಿಲ್ಲ. ಅದಕ್ಕೆ ಉಪಾಯವಿಲ್ಲ. ಎಲ್ಲಕ್ಕೂ ಹೆಚ್ಚಿನ ಸಂಗತಿಯೆಂದರೆ ಶ್ರೀರಾಮ –ಲಕ್ಷ್ಮಣರು ಇಲ್ಲಿಗೆ ಬಂದು ರಾವಣನನ್ನು ಸೋಲಿಸಿ ನನ್ನನ್ನು ಬಿಡಿಸಿಕೊಂಡು ಹೋದರೆ ಅವರಿಗೇ ಹೆಚ್ಚಿಗೆ ಕೀರ್ತಿಬರುವದು.'' ಎಂದು ಹೇಳಿದಳು. ಆ ಮಾತು ಕೇಳಿ ಹನುಮಂತನಿಗೆ ಪರಮ ಸಂತೋಷವಾಯಿತು. ''ಸೀತಾಮಾತೇ, ನಿನ್ನ ಮಾತು ಸರ್ವಥೈವ

ವಾಗಿ ಯೋಗ್ಯವಾಗಿರುತ್ತದೆ. ಪತಿವ್ರತೆಯರಿಗೆ ಶೋಭಿಸುವಂತಹ ಮಾತಾಗಿದೆ. ಆದರೆ ನಾನು ತಮ್ಮ ಭೆಟ್ಟಿಯಾದದ್ದರ ಸಲುವಾಗಿ ಏನಾದರೂ ಗುರುತನ್ನು ಕೊಡುವಿರಾ? ಎಂದು ಕೇಳಿದನು. ಕೂಡಲೇ ಅವಳು ತನ್ನ ಹೆರಳಿನಲ್ಲಿಯ ರತ್ನಚೂಡಕವನ್ನು ತೆಗೆದು ಕೊಟ್ಟಳು. ರಾಮನಿಗೆ ನನ್ನ ಕುಶಲವಾರ್ತೆಯನ್ನು ಹೇಳಿ ಸಾಷ್ಟಾಂಗ ನಮಸ್ಕಾರವನ್ನು ತಿಳಿಸು" ಎಂದು ಹೇಳುವಾಗಲೆ ಅವಳ ಕಂಠವು ಬಿಗಿದು ಕಣ್ಣಿನಿಂದ ಅಶ್ರುಗಳು ಧಾರೆಯಾಗಿ ಪ್ರವಹಿಸಹತ್ತಿದವು. "ನೀನು ಒಂದು ದಿವಸದ ಮಟ್ಟಿಗೆ ಇಲ್ಲಿ ನಿಂತು ವಿಶ್ರಾಂತಿಯನ್ನು ತೆಗೆದುಕೊಂಡು ಈ ಅಶೋಕವನದಲ್ಲಿರುವ ಕಂದಮೂಲಗಳನ್ನು ಭಕ್ಷಿಸಿ ಹೋಗಬಹುದು" ಎಂದು ಹೇಳಿದಳು. ಆ ಮಾತು ಕೇಳಿ ಹನುಮಂತನು ಅವಳಿಗೆ ನಮಸ್ಕರಿಸಿ "ತಾಯಿ! ನಾನು ಹೋಗಿಬರುತ್ತೇನೆ. ನೀನು ಚಿಂತಿಸಬೇಡ" ಎಂದು ಹೇಳಿ ಅಲ್ಲಿಂದ ಹೊರಟು ದೂರದಲ್ಲಿರುವ ಒಂದು ವೃಕ್ಷದ ಮೇಲೆ ಕುಳಿತು ಯೋಚಿಸಹತ್ತಿದನು. "ನಾನು ಬಂದ ಕೆಲಸವಂತೂ ಆಯಿತು. ಆದರೆ ನನ್ನ ಪರಾಕ್ರಮದ ಬಲವನ್ನು ತೋರಿಸಬೇಕಲ್ಲವೇ?" ಎನ್ನುತ್ತ ಅಲ್ಲಿರುವ ದೊಡ್ಡ ದೊಡ್ಡ ವೃಕ್ಷಗಳನ್ನು ಕಿತ್ತೊಗೆದು ಆ ವನವನ್ನು ನಾಶಗೊಳಿಸಿದನು. ಆಗ ಆ ವನದಲ್ಲಿರುತ್ತಿರುವ ಪಶುಪಕ್ಷಿಗಳು ಒಂದೇ ಸವನೇ ಒದರುತ್ತ ಹೊರಗೆ ಓಡಹತ್ತಿದವು. ಅದನ್ನು ಕಂಡು ಅಲ್ಲಿ ನಿದ್ರಿಸುತ್ತಿದ್ದ ರಾಕ್ಷಸಿಯರು ಅತಿ ಗಾಬರಿಯಿಂದ ಓಡುತ್ತ ಹೋಗಿ ರಾವಣನ ಮುಂದೆ ಕಪಿಯಿಂದಾದ ವನದ ದುಸ್ಥಿತಿಯನ್ನು ಹೇಳಿದರು. ಕೂಡಲೇ ರಾವಣನು ಅತಿಕೋಪಾಯಮಾನನಾಗಿ ಪ್ರತೀಕಾರಕ್ಕಾಗಿ ಸೇನಾಪತಿಯ ಪುತ್ರನಾದ ಜಂಬುಮಾಲಿಯನ್ನು ಕಳುಹಿಸಿದನು. ಹನುಮಂತನು ವನವನ್ನು ನಾಶಗೊಳಿಸಿ ಸುಮ್ಮನೇ ಕೂಡದೆ ರಾವಣನ ಅರಮನೆಯನ್ನು ನಾಶಗೊಳಿಸಹತ್ತಿದನು. ಅಷ್ಟರಲ್ಲಿ ಜಂಬುಮಾಲಿಯು

ಆತನ ಮೇಲೆ ಏರಿ ಹೋದನು. ಆಗ ಹನುಮಂತನು " ಜಯ ರಾಜಾಧಿರಾಜ ಶ್ರೀರಾಮಚಂದ್ರಕಿ ಜಯ" ಎಂದು ತನ್ನ ಹತ್ತರಿರುವ ಪರೀಘವೆಂಬ ಅಸ್ತ್ರವನ್ನು ಜಂಬುಮಾಲಿಯ ಮೇಲೆ ಜೋರಿನಿಂದ ಬಿಸುಟಿದನು. ಅದರ ಪ್ರಹಾರದಿಂದ ಜಂಬುಮಾಲಿಯು ಆ ಕೂಡಲೆ ನಾಶಹೊಂದಿದನು.

ಅದನ್ನು ಕಂಡು ರಾವಣನು ತನ್ನ ಜೇಷ್ಠಪುತ್ರನಾದ ಇಂದ್ರ ಜಿತುವನ್ನು ಹನುಮಂತನನ್ನು ಹಿಡಿದು ತರಲು ಕಳುಹಿದನು. ಕೂಡಲೇ ಇಂದ್ರಜಿತುವು ಬ್ರಹ್ಮಾಸ್ತ್ರದಿಂದ ಹನುಮಂತನನ್ನು ಬಿಗಿದು ಕಟ್ಟಿ ಸಭೆಗೆ ತಂದನು. ಆಗ ರಾವಣನು ಹನುಮಂತನನ್ನು ಕಂಡು "ಇವನು ಸಾಕ್ಷಾತ್ ನಂದಿಯಾಗಿರಲಿಕ್ಕಿಲ್ಲವೆ ?" ಎಂದು ಮನದಲ್ಲಿ ಯೋಚಿಸುತ್ತ "ನಾನು ಹಿಂದಕ್ಕೆ ಕೈಲಾಸಪರ್ವತಕ್ಕೆ ಹೋಗುತ್ತಿರುವಾಗ ವಾನರರೂಪವನ್ನು ಧರಿಸಿ ಕುಳಿತಿರುವ ನಂದಿಯನ್ನು ಕಂಡು ನಕ್ಕೆನು. ಆಗ ಅವನು ನನಗೆ ಶಾಪವಿತ್ತನು. ಅವನೇ ಇವನಾಗಿರಲಿಕ್ಕಿಲ್ಲವೇ ?" ಹೀಗೆ ರಾವಣನು ವಿಚಾರಮಗ್ನನಾಗಿ ಕುಳಿತಿರುವಾಗ ಹನುಮಂತನು "ಎಲೈ ರಾವಣನೇ, ನನ್ನ ಹೆಸರು ಹನುಮಂತ. ವಾನರರಾಜನಾದ ಸುಗ್ರೀವನ ಆಜ್ಞೆಯಿಂದ ನಾನು ಇಲ್ಲಿಗೆ ಬಂದಿರುವೆನು. ಮತ್ತು ಅವನು ಸಂದೇಶವನ್ನು ಕೊಟ್ಟಿರುವನು. "ಶ್ರೀರಾಮಚಂದ್ರನ ಪತ್ನಿಯನ್ನು ನೀನು ಅಪಹರಿಸಿ ತಂದುದಕ್ಕೆ ನೀನು ಮೃತ್ಯುವನ್ನು ಬಿಗಿದಪ್ಪಿಕೊಂಡಂತೆ ಆಗಿರುವದು. ನಿನಗೆ ಜೀವಿಸಬೇಕಾಗಿದ್ದರೆ ಅವಳನ್ನು ಶ್ರೀರಾಮಚಂದ್ರನಿಗೆ ಒಪ್ಪಿಸಿ ಅವನ ಕ್ಷಮೆಯನ್ನು ಬೇಡು ಎಂದು ಹೇಳಿರುವನು" ಎಂದು ಹೇಳಿದನು. ಆ ಮಾತು ಕೇಳಿ ರಾವಣನು ಅತಿ ಕೋಪದಿಂದ ಅವನನ್ನು ಕೊಲ್ಲಲು ಆಜ್ಞೆಯಿತ್ತನು. ಕೂಡಲೇ ವಿಭೀಷಣನು ಮುಂದೆ ಬಂದು "ದೂತನನ್ನು ಕೊಲ್ಲುವದು ರಾಜನೀತಿಯಲ್ಲ. ಬೇರೆಯಾವದಾದರೂ ಶಿಕ್ಷೆಯನ್ನು ಕೊಡಬಹುದು"

ಎಂದು ಹೇಳಿದನು. ಮುಂದೆ ಅಲ್ಲಿರುವ ಎಲ್ಲ ರಾಕ್ಷಸರು ಹಳೆಯ ಅರಿವೆಗಳನ್ನು ತಂದು ಹನುಮಂತನ ಬಾಲಕ್ಕೆ ಸುತ್ತಿ ಎಣ್ಣೆಯನ್ನು ಸುರುವಿ ಬೆಂಕಿಯನ್ನು ಹಚ್ಚಿ ಅತಿ ಆನಂದದಿಂದ ಕುಣಿದಾಡಹತ್ತಿದರು.

ಆಗ ಹನುಮಂತನು ಅಲ್ಲಿರುವ ರಾಕ್ಷಸರನ್ನು ಗುದ್ದಿ ಅವರನ್ನು ಕೊಂದು ಮಾಳಿಗೆಯ ಮೇಲೆ ಹತ್ತಿ ಅಲ್ಲಿರುವ ಮನೆಗಳಿಗೆಲ್ಲ ಬೆಂಕಿಯನ್ನು ಹಚ್ಚಿದನು ಈ ರೀತಿಯಾಗಿ ಲಂಕಾಪಟ್ಟಣವು ಧಗಧಗನೆ ಉರಿಯಹತ್ತಿತು. ಅದನ್ನು ಕಂಡು ರಾಕ್ಷಸರು ಗಾಬರಿಯಾಗಿ ಓಡತೊಡಗಿದರು. ಹೀಗೆ ಹನುಮಂತನು ತಾನು ಬಂದ ಕಾರ್ಯವನ್ನು ಮುಗಿಸಿ, ಅಲ್ಲಿಂದ ಹೊರಟು, ಸಮುದ್ರಕ್ಕೆ ಬಂದು ಉರಿಯುತ್ತಿರುವ ತನ್ನ ಬಾಲವನ್ನು ನಂದಿಸಿದನು.

ಕೂಡಲೇ ಅಲ್ಲಿಂದ ಹೊರಟು ಅರಿಷ್ಟವೆಂಬ ಪರ್ವತದ ಮೇಲೆ ಹತ್ತಿ "ಜೈ ಶ್ರೀರಾಮಚಂದ್ರ" ಎಂದೆನ್ನುತ್ತ ಜೋರಿನಿಂದ ಅದನ್ನು ಚಪ್ಪರಿಸಿ ಸಮುದ್ರೋಲ್ಲಂಘನ ಮಾಡಿ ಈಚೆಯ ದಂಡೆಗೆಬಂದು ತಲುಪಿದನು.

ಮುಂದೆ ಅಂಗದಾದಿ ವೀರರೆಲ್ಲರೂ ಆತನನ್ನು ಆನಂದದಿಂದ ಸ್ವಾಗತಿಸಿ ಎಲ್ಲ ಸಂಗತಿಯನ್ನು ತಿಳಿದುಕೊಂಡರು. ಆಗ ಅವರೆಲ್ಲರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಕೆಲವರು ಗರ್ಜಿಸುತ್ತ ಹಾರಾಡಹತ್ತಿದರು. ಕೆಲವರು ಕಿಲಕಿಲ ಶಬ್ದವನ್ನು ಮಾಡಿ ತಮ್ಮ ತಮ್ಮ ಬಾಲಗಳನ್ನು ನೆಲಕ್ಕಪ್ಪಳಿಸುತ್ತ ಥೈ ಥೈ ಕುಣಿದಾಡಿದರು. ಮತ್ತೆ ಕೆಲವರು ತಮ್ಮ ಬಾಲಗಳನ್ನು ಗಿಡಕ್ಕೆ ಬಿಗಿದು ಕಟ್ಟಿ, ತಲೆ ಕೆಳಗೆ ಕಾಲು ಮೇಲೆ ಮಾಡಿ ಜೋತಾಡಿದರು. ಈ ರೀತಿಯಾಗಿ ಅವರೆಲ್ಲರೂ ತಮ್ಮ ಆನಂದವನ್ನು ವ್ಯಕ್ತಗೊಳಿಸಿದರು. ಆನಂತರ ಅವರೆಲ್ಲರೂ ಹನುಮಂತನ ಸಮೇತವಾಗಿ ಋಷ್ಯ ಮೂಕ ಪರ್ವತದ ಹತ್ತಿರದಲ್ಲಿರುವ ಸುಗ್ರೀವನ ಮಧುವನಕ್ಕೆ ಬಂದು ತಲ್ಪಿ

ದರು. ಆ ವನದಲ್ಲಿರುವ ಹಣ್ಣು-ಹಂಪಲಗಳನ್ನೆಲ್ಲ ತಿಂದು ಮನಸೇಚ್ಛೆಯಾಗಿ ಜಿಗಿದಾಡಿದರು. ವನಗಾವಲಾಗಿದ್ದ ಸುಗ್ರೀವನ ಮಾವ ದಧಿಮುಖನು ವನದಲ್ಲಿ ಕಪಿಗಳು ನಡೆಯಿಸಿರುವ ಪುಂಡಾಟಿಕೆಯನ್ನು ಸುಗ್ರೀವನಿಗೆ ಅರುಹಿದನು. ಆದರೆ ಅದರಿಂದ ಸುಗ್ರೀವನಿಗೆ ಸಿಟ್ಟು ಬಾರದೆ ಮತ್ತಿಷ್ಟು ಆನಂದವೇ ಆಯಿತು. ಅಂಗದಾದಿ ವೀರರೆಲ್ಲರೂ ನಿಶ್ಶಂಕ ಮನಸ್ಸಿನಿಂದ ನನ್ನ ಮಧುವನದಲ್ಲಿ ಪ್ರವೇಶ ಮಾಡಿರುವರೆಂದರೆ ಅವರು ತಮ್ಮ ಸ್ವೀಕೃತ ಕಾರ್ಯವನ್ನು ಯಶಸ್ವಿಯಾಗಿ ಕೊನೆಗಾಣಿಸಿರುವರೆಂಬದು ವ್ಯಕ್ತವಾಗುತ್ತದೆ. ತನ್ನ ಕಾರ್ಯವನ್ನು ಸರಿಯಾಗಿ ಮಾಡುವವನಿಗೆ ಅವನು ಮಾಡಿರುವ ಅಪರಾಧಗಳು ಸಹ ಕೆಲವೊಂದು ಪ್ರಸಂಗದಲ್ಲಿ ಕ್ಷಮ್ಯವೆನಿಸುವವು. ಹನುಮಂತನು ಪರಾಕ್ರಮಿಯೂ, ಸಾಹಸಿಯೂ, ಬುದ್ಧಿವಂತನೂ ಅಹುದು. ಅವನು ನಿಶ್ಚಯವಾಗಿ ದಕ್ಷಿಣ ದಿಕ್ಕಿನಿಂದ ಸೀತಾಮಾತೆಯ ಶೋಧ ಮಾಡಿಕೊಂಡು ಬಂದಿರಬಹುದು'' ಎಂದಾಡಿದ ಸುಗ್ರೀವನ ಮಾತು ಕೇಳಿ ರಾಮ—ಲಕ್ಷ್ಮಣರಿಗೆ ಪರಮಾನಂದವಾಯಿತು. ಅವರು ಹನುಮಂತನು ಬರುವ ದಾರಿಯನ್ನೇ ಕಾಯುತ್ತ ಕುಳಿತಿದ್ದರು. ಸುಗ್ರೀವನು ದಧಿಮುಖನನ್ನು ಕರೆದು ''ಅಂಗದಾದಿ ವೀರರನ್ನು ಕರೆದುಕೊಂಡು ಬರಬೇಕು'' ಎಂದು ಹೇಳಿ ಕಳುಹಿದನು. ಅವರೆಲ್ಲರೂ ಮಧುವನದಿಂದ ಹೊರಟು ಋಷ್ಯಮೂಕಕ್ಕೆ ಬಂದು ತಲ್ಪಿದರು. ಮತ್ತು ಶ್ರೀರಾಮ—ಲಕ್ಷ್ಮಣರಿಗೆ ನಮಸ್ಕರಿಸಿ ಸೀತಾಮಾತೆಯನ್ನು ಶೋಧಿಸಿಕೊಂಡು ಬಂದ ಆನಂದದ ಸುದ್ದಿಯನ್ನು ವಿದಿತಪಡಿಸಿದರು. ಆ ಮಾತುಕೇಳಿ ಶ್ರೀರಾಮಚಂದ್ರನು ಒಳ್ಳೇ ಉತ್ಸುಕತೆಯಿಂದ ''ಹನುಮಂತಾ, ನೀನು ಸೀತೆಯನ್ನು ಎಲ್ಲಿ ನೋಡಿದಿ ? ಅವಳು ಹೇಗಿರುವಳು ? ನಮಗೆ ಏನಾದರೂ ಹೇಳಿರುವಳೇ ?'' ಎಂದು ಕೇಳಿದನು. ಅದನ್ನು ಕೇಳಿ ಹನುಮಂತನು ''ನೂರು ಯೋಜನದ ಅಗ

ಲಾದ ಸಮುದ್ರವನ್ನುದಾಟಿ ನಾನು ದಕ್ಷಿಣದಂಡೆಯ ಮೇಲಿನ ಲಂಕೆಗೆ ಹೋದೆನು. ಆ ಪಟ್ಟಣವು ತ್ರಿಕೂಟ ಪರ್ವತದ ಪಕ್ಕದಲ್ಲಿರುವದು. ಬಳಿಕ ಅಲ್ಲಿರುವ ಅಶೋಕವನದಲ್ಲಿ ಸೀತಾಮಾತೆಯನ್ನು ನಾನು ಕಂಡೆನು. ಅವಳು ಮೇಲಿಂದ ಮೇಲೆ ನಿಟ್ಟುಸಿರು ಬಿಡುತ್ತ ತಮ್ಮನ್ನೇ ಧ್ಯಾನಿಸುತ್ತ ಕುಳಿತಿರುವಳು. ರಾವಣನು ತನ್ನನ್ನು ವರಿಸಲು ಆಕೆಗೆ ಎರಡು ತಿಂಗಳ ಅವಕಾಶ ಕೊಟ್ಟಿರುವನು. ಅಷ್ಟರಲ್ಲಿ ತಾವು ಬಂದು ನನ್ನನ್ನು ಬಂಧಮುಕ್ತಮಾಡಬೇಕೆಂದು ಅವಳು ಹೇಳಿರುವಳು.'' ಎಂದು ಹೇಳಿ ಶ್ರೀರಾಮಚಂದ್ರನ ಪಾದಾರವಿಂದಗಳಲ್ಲಿ ಸೀತೆಯಿಂದ ತಂದ ಆ ಚೂಡಾಮಣಿಯನ್ನಿಟ್ಟು ಅತಿ ಭಕ್ತಿ ಭಾವದಿಂದ ಕೈಮುಗಿದು ನಿಂತುಕೊಂಡನು.

ಇಂತು ಈ ಹನುಮಂತನಿಂದ-ಸೀತಾ ಶೋಧದ ವರ್ತಮಾನ ವನ್ನು ಕೇಳಿ ಅಂದು ಎಲ್ಲರಿಗೂ ಆನಂದವಾಯಿತು.

## ೧೮. ಯುದ್ಧದ ಸಿದ್ಧತೆ

ಹನುಮಂತನಿಂದ ಲಂಕೆಯ ಎಲ್ಲ ಸಂಗತಿಯನ್ನು ಕೇಳಿಕೊಂಡು ರಾಮ-ಲಕ್ಷ್ಮಣರು ಪರಮಾನಂದಪಟ್ಟರು. ಅವರು ಹನುಮಂತ ನನ್ನು ಮನವಾರೆಹೊಗಳಿ ''ಹನುಮಂತಾ, ನೀನು ಮಾಡಿದ ಮಹತ್ವದ ಕೆಲಸವು ಇನ್ನೊಬ್ಬರಿಂದ ಎಂದಿಗೂ ಸಾಧ್ಯವಾಗುತ್ತಿರಲಿಲ್ಲ. ಶತ ಯೋಜನ ಅಗಲವಾದ ಸಮುದ್ರವನ್ನು ಉಲ್ಲಂಘಿಸುವ ಸಾಮರ್ಥ್ಯವು ನಿನ್ನ ಹಾಗು ಗರುಡನ ಹೊರತು ಬೇರೆಯವರಲ್ಲಿ ಇರುವದಿಲ್ಲ. ನಿನ್ನ ಈ ಸಾಹಸದ ಕೆಲಸಕ್ಕೆ ಯೋಗ್ಯವಾದ ಪಾರಿತೋಷಕವನ್ನು ಕೊಡಲು ಸದ್ಯನನ್ನಹತ್ತರ ಏನೂ ಇರುವದಿಲ್ಲ. ಅದಕ್ಕೆ ನನಗೆ ಕೆಡಕೆನಿಸುತ್ತದೆ. ಇರಲಿ, ಎಲ್ಲ ವಸ್ತುಗಳಿಗಿಂತ ಶ್ರೇಷ್ಠವಾದ ನನ್ನ ಹೃದಯವನ್ನೇ ನಿನಗೆ ಅರ್ಪಿಸುತ್ತೇನೆ'' ಎಂದು ನುಡಿದು ಶ್ರೀರಾಮಚಂದ್ರನು ಆತನನ್ನು

ಪ್ರೀತಿಯಿಂದ ಆಲಿಂಗಿಸಿದನು. ಆ ಸಮಯದಲ್ಲಿ ಅಲ್ಲಿರುವವರೆಲ್ಲರೂ ಜಯಘೋಷವನ್ನು ಮಾಡಿದರು. ಕೂಡಲೇ ರಾಮಚಂದ್ರನು ಸುಗ್ರೀವನನ್ನು ಕುರಿತು—“ ಸುಗ್ರೀವಾ, ಇಂದು ಹನುಮಂತನು ಯಾರಿಗೂ ಸಾಧ್ಯವಾಗದ ಕೆಲಸವನ್ನು ಮಾಡಿರುತ್ತಾನೆ. ಆದರೆ ಮುಂದಿನ ಕಾರ್ಯಕ್ಕಾಗಿ ಚಿಂತೆಯುಂಟಾಗಿದೆ. ಹನುಮಂತನು ಸಮುದ್ರವನ್ನು ದಾಟಿಹೋಗಲು ಸಮರ್ಥನಹುದು. ಆದರೆ ಈ ಎಲ್ಲ ಸೇನೆಯು ದಾಟುವ ಬಗೆ ಹೇಗೆ?” ಎಂದು ನುಡಿಯಲು ಸುಗ್ರೀವನು ಎದ್ದು ನಿಂತು ಕೈಜೋಡಿಸಿ “ ಶ್ರೀರಾಮಚಂದ್ರಾ, ನೀವು ಮನಸ್ತಾಪವನ್ನು ಬದಿಗಿರಿಸಿ ಈ ಪ್ರಸಂಗದಲ್ಲಿ ಕ್ರೋಧವನ್ನು ಅವಲಂಬಿಸಿದರೆ ಸರ್ವ ಕಾರ್ಯವೂ ಸರಿಯಾಗುವದು. ಎಂಥ ಶೂರ ಮನುಷ್ಯನಿದ್ದರೂ ಕೂಡ ದುಃಖದಿಂದ ನಿಸ್ತೇಜನೂ, ನಿರುತ್ಸಾಹಿಯೂ, ನಿರ್ವೀರ್ಯನೂ, ಆಗುತ್ತಾನೆ. ಆದರೆ ಅವನೇ ಸ್ವಲ್ಪ ಕ್ರೋಧವನ್ನು ಅಂಗೀಕರಿಸಿದರೆ ಜನರು ಅವನಿಗೆ ಹೆದರುವರು. ಕಾರಣ ನೀವು ವ್ಯರ್ಥ ಚಿಂತಿಸಬೇಡಿರಿ.” ಎಂದು ತನ್ನ ಸಲಹೆಯನ್ನಿತ್ತನು. ಸುಗ್ರೀವನ ಈ ಉತ್ಸಾಹಯುಕ್ತ ಭಾಷಣವನ್ನು ಕೇಳಿ ಶ್ರೀರಾಮಚಂದ್ರನಿಗೆ ಪರಮಾನಂದವಾಯಿತು. ಅವನು “ ಸುಗ್ರೀವಾ, ಇಂದು ಉತ್ತರಾಫಾಲ್ಗುಣ ನಕ್ಷತ್ರವಿದೆ. ಸೈನ್ಯದ ವಿಜಯಪ್ರಯಾಣಕ್ಕೆ ಈ ದಿನವು ಶುಭವಾಗಿರುತ್ತದೆ. ಕಾರಣ ನಾವೆಲ್ಲರೂ ಇಂದೆಯೇ ಹೊರಡುವದು ಯುಕ್ತವು ” ಎಂದು ಹೇಳಿದನು. ಅವನ ಮಾತನ್ನು ಕೇಳಿ ಸುಗ್ರೀವನು ಎಲ್ಲ ಸೇನಾಪತಿಗಳಿಗೆ ನಿಮ್ಮ ನಿಮ್ಮ ಸೇನೆಸಹಿತವಾಗಿ ಇಂದು ಮಧ್ಯಾಹ್ನದ ನಂತರವೇ ಹೊರಡಬೇಕೆಂದು ಕಟ್ಟಪ್ಪಣೆಮಾಡಲು ಸಮಸ್ತ ವಾನರ ಸೈನ್ಯವು ಮಾರ್ಗ ಕ್ರಮಿಸಲು ಅಣಿಯಾಯಿತು.

ಆ ಸೈನ್ಯದ ಮುಂದುಗಡೆಯಲ್ಲಿ ಸೇನಾನಿಗಳಾದ ನೀಲ, ವೃಷಭ ಮತ್ತು ಕುಮುದ ಮೊದಲಾದ ವೀರರು ತಮ್ಮ ತಮ್ಮ ಸೇನಾಸಮೇತ

ವಾಗಿ ಮಾರ್ಗವನ್ನು ಕ್ರಮಿಸಹತ್ತಿದರು. ಅವರೆಲ್ಲರ ಹಿಂದೆ ವಾನರರಾಜ ನಾದ ಸುಗ್ರೀವನೂ, ಅವನ ಹಿಂದಿನಿಂದ ಹನುಮಂತನ ಹೆಗಲಮೇಲೆ ಶ್ರೀರಾಮಚಂದ್ರನೂ, ಅಂಗದನ ಹೆಗಲಮೇಲೆ ಲಕ್ಷ್ಮಣನೂ ಕುಳಿತು ಕೊಂಡು ಸಾಗಿದ್ದರು. ಈ ರೀತಿಯಾಗಿ ಆ ಎಲ್ಲ ಸೈನ್ಯವು ತಮ್ಮ ವಾನರ ಸ್ವಭಾವಕ್ಕೆ ಅನುಸರಿಸಿ ಗಿಡದಿಂದ ಗಿಡಕ್ಕೆ ಜಿಗಿಯುತ್ತ, ನಾನಾತರಹದ ಚೇಷ್ಟೆಗಳನ್ನು ಮಾಡುತ್ತ, ವೀರಾವೇಶದಿಂದ ಗರ್ಜಿ ಸುತ್ತ ಸಹ್ಯಾದ್ರಿಯನ್ನೂ ಮಲಯ ಪರ್ವತವನ್ನೂ ದಾಟುತ್ತ, ದಕ್ಷಿಣ ದಿಕ್ಕಿಗಿದ್ದ ಮಹೇಂದ್ರ ಪರ್ವತಕ್ಕೆ ಬಂದು ತಲುಪಿತು. ಅಲ್ಲಿಂದ ಮುಂದೆ ಸಾಗಿ ಅತಿ ಭಯಂಕರವಾಗಿ ಗರ್ಜಿಸುತ್ತಿರುವ ಸಮುದ್ರ ನಾಥನನ್ನು ಕಂಡು ಅವರೆಲ್ಲರೂ ಅದರ ದಂಡೆಯಮೇಲೆ ತಳವೂರಿದರು. ಮುಂದೆ ಶ್ರೀರಾಮಚಂದ್ರನು ಸುಗ್ರೀವನನ್ನು ಕುರಿತು, “ಸುಗ್ರೀವಾ, ನಾವೆಲ್ಲರೂ ಇಲ್ಲಿಗೆ ಬಂದು ತಲುಪಿದೆವು. ಆದರೆ ಈ ಮೊದಲು ನಮಗುಂಟಾಗಿದ್ದ ಆ ಚಿಂತೆಯೇ ಮುಂದೆ ಬಂದು ನಿಂತಿತು. ಇನ್ನು ನಾವು ಇಲ್ಲಿ ಕೆಲದಿವಸದಮಟ್ಟಿಗಾದರೂ ಇರಬೇಕಾಗುವದು” ಎಂದು ಹೇಳಿದನು. ಆಗ ಸುಗ್ರೀವನು ಪದ್ಧತಿಯಂತೆ ವ್ಯವಸ್ಥಿತವಾಗಿ ನಿಲ್ಲಲು ಸೈನ್ಯಕ್ಕೆ ಆಜ್ಞೆ ಕೊಟ್ಟನು. ಮುಂದೆ ಕಾಣುವ ಗಂಭೀರವಾದ ಸಮುದ್ರ ನಾಥನನ್ನು ಕಂಡು ಅವರೆಲ್ಲರು ವ್ಯಸನಾಕ್ರಾಂತರಾದರು. ಸಾಗರನಾಥ ನಲ್ಲಿ ಒಂದರಹಿಂದೊಂದು ಬಿಟ್ಟುಬಿಡದೆ ಬರುತ್ತಿರುವ ದೊಡ್ಡದೊಡ್ಡ ತೆರೆಗಳನ್ನು ಕಂಡು ಅವನು ತಮ್ಮನ್ನು ನೋಡಿ ನಗುತ್ತಿರುವನೋ ಏನೋ ಎಂಬಂತೆ ಅವರಿಗೆ ಭಾಸವಾಗಹತ್ತಿತು. ಮೇಲೆ ನೋಡಿದರೆ ಅಸಂಖ್ಯ ತಾರೆಗಳಿಂದ ಯುಕ್ತವಾದ ಅಪರಂಪಾರವಾದ ಆಕಾಶವು; ಎದುರು ನೋಡಿದರೆ ಮುತ್ತುರತ್ನಾದಿಗಳನ್ನು ಒಡಲಲ್ಲಿರಿಸಿಕೊಂಡ ಅತಿ ಭಯಂಕರವಾದ ಸಾಗರವು. ಈ ರೀತಿಯಾಗಿ ಅವೆರಡರ ಶೋಭೆಯು ಅಪೂರ್ವವಾಗಿ ಕಾಣುತ್ತಿತ್ತು. ಆದರೂ ಅವರು “ನಾವು ಇನ್ನು

ಮುಂದೆ ಈ ಸಾಗರವನ್ನು ದಾಟಿ ಹೋಗುವ ಬಗೆ ಹೇಗೆ ? ” ಎಂದು ಆಲೋಚಿಸುತ್ತ ಅಲ್ಲಿ ಕುಳಿತರು.

ಇತ್ತ ರಾವಣನು ಹನುಮಂತನು ಲಂಕೆಗೆ ಬೆಂಕಿಯನ್ನು ಹಚ್ಚಿ ಹೋದಂದಿನಿಂದ ಬಹಳ ಚಿಂತಾತುರನಾಗಿ, ಎಲ್ಲ ಮಂತ್ರಿಗಳನ್ನು ಕರೆ ಕಳುಹಿ, ಮುಂದೇನು ಮಾಡಬೇಕೆಂದು ಆಲೋಚಿಸಹತ್ತಿದನು. “ಗುಪ್ತಚಾರರಿಂದ ಶ್ರೀರಾಮಚಂದ್ರನು ಲಂಕೆಯ ಮೇಲೆ ಏರಿ ಬರುತ್ತಿರುವನೆಂದು ತಿಳಿದು ಬಂದಿದೆ. ಅಂದಮೇಲೆ ನಾವು ಇನ್ನು ಮುಂದೆ ಹೇಗೆ ಮಾಡಬೇಕು. ? ಎಂಬುದರ ಬಗ್ಗೆ ನೀವೆಲ್ಲ ಸರದಾರರು ನನಗೆ ಯೋಗ್ಯವಾದ ಸಲಹೆಯನ್ನು ಕೊಡಬೇಕು” ಎಂದು ಹೇಳಿದನು. ಈ ಮಾತನ್ನು ಕೇಳಿ ಪ್ರಹಸ್ತ ಮತ್ತು ವಜ್ರದಂಷ್ಟ್ರ ಮುಂತಾದ ಸರದಾರರು ಕೈಜೋಡಿಸಿ “ಮಹಾರಾಜಾ ನೀನು ಅಂಜುವ ಕಾರಣವಿಲ್ಲ. ಪ್ರತ್ಯಕ್ಷ ಇಂದ್ರನನ್ನೇ ಸೋಲಿಸಿದಂಥ ನಿಮ್ಮ ಮಗ ಇಂದ್ರಜಿತುವೊಬ್ಬನೇ ಆ ರಾಮ—ಲಕ್ಷ್ಮಣರನ್ನು ನಾಶಗೊಳಿಸುವನು. ನಿಮ್ಮ ಆಜ್ಞೆಯಾದರೆ ನಾವು ಪೃಥ್ವಿಯ ಮೇಲಿರುವ ಎಲ್ಲ ವಾನರರನ್ನು ನಾಶಗೊಳಿಸುವೆವು” ಹೀಗೆ ಅವರೆಲ್ಲರೂ ರಾವಣನಿಗೆ ಯುದ್ಧಕ್ಕೆ ತಮ್ಮ ತಮ್ಮ ಅನುಮತಿಯನ್ನಿತ್ತರು. ಆದರೆ ವಿಭೀಷಣನು ಮಾತ್ರ ಅದಕ್ಕೊಪ್ಪಲಿಲ್ಲ. ಅವನು “ ಅಣ್ಣಾ, ಶ್ರೀರಾಮಚಂದ್ರನ ಮುಂದೆ ನಮ್ಮ ಆಟವು ಸಾಗಲಾರದು. ಅವನಿಗೆ ದೈವವು ಅನುಕೂಲವಿರುತ್ತದೆ. “ ಯತೋ ಧರ್ಮಸ್ತತೋ ಜಯಃ ” ಎಂಬಂತೆ ಶ್ರೀರಾಮಚಂದ್ರನು ಧರ್ಮದಿಂದ ಯುದ್ಧ ಮಾಡುತ್ತಿರುವನು. ಅಂದಮೇಲೆ ನೀನು ಅಧರ್ಮದಿಂದ ಅಪಹರಿಸಿ ತಂದಿರುವ ಸೀತಾಮಾತೆಯನ್ನು ಆತನಿಗೆ ಒಪ್ಪಿಸಿ, ಈ ಯುದ್ಧದ ಮೂಲವನ್ನೇ ಕಡಿದು ಹಾಕಬೇಕು. ಇದೇ ನನಗೆ ಯೋಗ್ಯ ತೋರುತ್ತದೆ” ಎಂದು ಸ್ಪಷ್ಟವಾಗಿ ಹೇಳಿದನು. ಆಗ

ರಾವಣನು ಸುಮ್ಮನಾಗಿ, ಅಂದಿನ ಸಭೆಯನ್ನು ಮುಗಿಸಿ ತನ್ನ ಅಂತಃಪುರಕ್ಕೆ ಹೊರಟು ಹೋದನು. ಮರುದಿವಸ ಸುವರ್ಣ ಯುಕ್ತವಾದ ರಥವನ್ನು ಏರಿ ರಾಜಸಭೆಗೆ ಬಂದನು. ರತ್ನ ಖಚಿತ ವಾದ ಸಿಂಹಾಸನದಲ್ಲಿ ಕುಳಿತು "ಹೇ ಸಭಿಕರೇ, ರಾಜನಿಗೆ ಧರ್ಮ, ಅರ್ಥ, ಕಾಮಗಳ ಬಗ್ಗೆ ಎಷ್ಟೋ ಕಠಿಣ ಪ್ರಸಂಗಗಳು ಮೇಲಿಂದ ಮೇಲೆ ಬರುತ್ತವೆ. ಆದರೆ ರಾಜನ ಹಿತಾಹಿತಗಳು ಪ್ರಜೆಗಳ ಮೇಲೆಯೇ ಅವಲಂಬಿಸಿರುತ್ತವೆ. ಇಂದು ಸುದೈವದಿಂದ ನನ್ನ ಪ್ರಿಯ ತಮ್ಮನಾದ ಕುಂಭಕರ್ಣನು ಆರು ತಿಂಗಳ ನಿದ್ರೆಯಿಂದ ಎಚ್ಚತ್ತು ಇಲ್ಲಿಗೆ ಬಂದಿರುವನು. ನಿಮ್ಮೆಲ್ಲರ ಸಹಾಯದಿಂದ ನಾನು ದೇವತೆಗಳನ್ನು ಸಹ ಗೆದ್ದಿರುವೆನು. ಅಂಥಮೇಲೆ ಮಾನವರಾದ ರಾಮ-ಲಕ್ಷ್ಮಣರ ಪಾಡೇನು ?" ಎಂದು ಹೇಳಿದನು. ಹಿಂದಕ್ಕೆ ಒಂದು ಕಪಿಯು ಇಲ್ಲಿಯ ವರೆಗೆ ಬಂದು ಲಂಕೆಯನ್ನು ನಾಶಗೊಳಿಸಿ ಹೋಗಿರುತ್ತದೆ. ಕಾರಣ ಮುಂದೆ ಯುದ್ಧ ಪ್ರಸಂಗವು ಹೇಗಾಗುತ್ತ ದೆಂಬುದನ್ನು ಹೇಳಲಿಕ್ಕೆ ಬರುವಂತಿಲ್ಲ. ಅದಕ್ಕಾಗಿ ನೀವೆಲ್ಲರೂ ನನಗೆ ಯೋಗ್ಯವಾದ ಸಲಹೆಯನ್ನು ಕೊಡಿರಿ" ಎಂದು ಹೇಳಿದನು. ಈ ಮಾತು ಕೇಳಿ ಕುಂಭಕರ್ಣನು ಅತಿ ಸಂತಪ್ತನಾಗಿ "ರಾಜಾ, ನೀನು ಈ ದುಷ್ಕರ್ಮವನ್ನು ಮಾಡುವ ಮೊದಲೇ ನಮ್ಮನ್ನು ವಿಚಾರಿಸ ಬೇಕಾಗಿತ್ತು. ಇಂಥ ನಿಂದ್ಯ ಕೃತ್ಯವನ್ನು ಮಾಡುತ್ತಿರುವಾಗ ಶ್ರೀರಾಮಚಂದ್ರನು ನಿನ್ನನ್ನು ಜೀವದಿಂದ ಬಿಟ್ಟಿರುವದು ನಿನ್ನ ಸುದೈವ ವೆಂದೇ ತಿಳಿ. ನೀತಿಯಿಂದಲೂ, ನ್ಯಾಯದಿಂದಲೂ ರಾಜ್ಯವಾಳುವ ಅರಸನಿಗೆ ಎಂದಿಗೂ ಪಶ್ಚಾತ್ತಾಪವುಂಟಾಗುವ ಕಾರಣವಿಲ್ಲ ಆದ ದ್ದಾಯಿತು. ಇನ್ನು ನೀನು ಚಿಂತಿಸಬೇಡ, ನನ್ನ ಈ ಪ್ರಚಂಡವಾದ ತ್ರಿಶೂಲಿನ ಮುಂದೆ ಯಾವನೂ ನಿಲ್ಲಲು ಸಾಧ್ಯವಿಲ್ಲ." ಎಂದು ಹೇಳಿದನು. ಕುಂಭಕರ್ಣನ ಈ ವೀರಾವೇಶದ ಮಾತನ್ನು ಕೇಳಿ

ವಿಭೀಷಣನು ರಾವಣನ ಮುಂದೆ ಬಂದು ಕೈಜೋಡಿಸಿ “ ಮಹಾ ರಾಜಾ, ನೀವು ಇವರ ಮಾತನ್ನು ನಂಬಬೇಡಿರಿ ಶ್ರೀರಾಮಚಂದ್ರನು ಸತ್ಯದಿಂದಲೂ, ಧರ್ಮದಿಂದಲೂ ಯುದ್ಧಮಾಡುವನು. ಕಾರಣ ಆತನ ಮುಂದೆ ಕುಂಭಕರ್ಣನದಾಗಲಿ, ಇಂದ್ರಜಿತುವಿನದಾಗಲಿ ಯಾರ ಆಟವೂ ಸಾಗಲಾರದು. ಈ ಯುದ್ಧಾಗ್ನಿಯ ಬೇಗೆಯು ಪಸರಿಸುವ ಮೊದಲೇ ಶ್ರೀರಾಮನ ಪತ್ನಿಯನ್ನು ಅವನಿಗೊಪ್ಪಿಸು ವದು ವಿಹಿತವೆನಿಸುತ್ತದೆ” ಎಂದು ಸ್ಪಷ್ಟವಾದ ಹಿತೋಕ್ತಿಗಳನ್ನು ಆಡಿದನು. ಆದರ ವಿಭೀಷಣನಾಡಿದ ನುಡಿಗಳು ರಾವಣನಿಗಷ್ಟೇ ಅಲ್ಲದೆ ಅವನ ಮಗ ಇಂದ್ರಜಿತುವಿಗೂ ಕೂಡ ಸರಿಬಾರಲಿಲ್ಲ. ಅವನು ಅತಿ ಕ್ರೋಧದಿಂದಲೂ, ಗರ್ವದಿಂದಲೂ ವಿಭೀಷಣನಿಗೆ—ಚಿಕ್ಕಪ್ಪನೇ, ನನ್ನ ಪರಾಕ್ರಮವು ನಿಮಗೆ ಗೊತ್ತಿರಲಿಲ್ಲವೇ ? ನಾನು ಪ್ರತ್ಯಕ್ಷ ಇಂದ್ರನನ್ನೂ ಸಹ ಬಂಧಿಸಿದೆನು. ಅಂದಮೇಲೆ ಯಃಕಶ್ಚಿತ ಮಾನವ ರಾಮನ ಪಾಡೇನು ? ಎಂದು ಹೇಳಿದನು. ಅವನ ಮಾತನ್ನು ಕೇಳಿ ವಿಭೀಷಣನು ಮೂರ್ಖನೇ, ನೀನು ಮಗನ ರೂಪದಿಂದ ನಿನ್ನ ತಂದೆಗೆ ಶತ್ರುವಾಗಿ ಜನಿಸಿರುವಿ. ನೀನು ಇನ್ನೂ ಚಿಕ್ಕವನಿರುವೆ. ನಿನಗೆ ಸಲಹೆ ಕೊಡಲು ಅಧಿಕಾರವಿಲ್ಲ. ಖರದೂಷಣರ ಗತಿಯೇನಾಯಿತೋ ಅದೇ ನಮ್ಮ ಗತಿಯಾಗುವದು” ಎಂದು ಹೇಳಿದನು. ಈ ಮಾತನ್ನು ಕೇಳಿ ರಾವಣನು ಅತಿ ಸಂತಪ್ತನಾಗಿ ವಿಭೀಷಣಾ ನೀನು ಒಂದುವೇಳೆ ಅತಿ ದ್ವೇಷಿಸುವಂತಹ ಶತ್ರುವಿನ ಸಂಗಡಲೂ ಮಿತ್ರತ್ವವನ್ನು ಮಾಡ ಬಹುದು. ಆದರೆ ಬಹಿರಂಗವಾಗಿ ಮಿತ್ರತ್ವವನ್ನು ತೋರಿಸಿ ಒಳ ಗಿಂದೊಳಗೇ ಶತ್ರುತ್ವವನ್ನು ಸಾಧಿಸುವ ನಿನ್ನಂಥ ಜನರ ಸಹವಾಸವು ಕಠಿಣವಾಗುತ್ತದೆ. ಒಬ್ಬನು ಸಂಕಟ ಸಮಯದಲ್ಲಿರುವಾಗ ಆತನನ್ನು ಕಂಡು ಆನಂದಬಡುತ್ತಿರುವಂಥವನು ಯಾವ ದುಷ್ಟ ಕೆಲಸಕ್ಕೂ ಹಿಂಜರಿಯಲಾರನು. ಆದರೆ ಸ್ವಾರ್ಥಕ್ಕಾಗಿ ಅಂತಃಕರುಣದಲ್ಲಿ ಅತಿ

ಘೋರವಾದ ದ್ವೇಷವನ್ನು ತಾಳಿ ಎರಡನೆಯವನನ್ನು ನಾಶಗೊಳಿಸಲು ಯತ್ನಿಸುತ್ತಿರುವ ನಮ್ಮ ಜ್ಞಾತಿ ಬಂಧುಗಳಿಂದಲೇ ನನಗೆ ಹೆದರಿಕೆ ಇರುತ್ತದೆ. ಅನಾರ್ಯರ ಮೇಲೆ ಮಾಡಿರುವ ಉಪಕಾರವು ಕಮಲ ಪತ್ರದ ಮೇಲೆ ಬಿದ್ದಿರುವ ಜಲಬಿಂದುವಿನಂತೆ ಸಹಜವಾಗಿ ಬಿದ್ದು ಹೋಗಬಹುದು. ವಿಭೀಷಣಾ, ನೀನು ನನ್ನ ತಮ್ಮನಿರುವಿ ಯೆಂದು ನಾನು ನೀನಾಡಿದ ನುಡಿಗಳಿಗಾಗಿ ನಿನ್ನನ್ನು ಕ್ಷಮಿಸಿರುವೆ. ನೀನಲ್ಲದೆ ಇನ್ನೊಬ್ಬರು ಯಾರಾದರೂ ಈ ಶಬ್ದಗಳನ್ನಾಡಿದ್ದನ್ನು ನಾನು ಕೇಳಿದ್ದರೆ ಕೂಡಲೇ ಅವರ ಶಿರಚ್ಛೇದಮಾಡಿ ಬಿಡುತ್ತಿದ್ದೆ." ಎಂದು ಅತಿ ಧಿಃಕಾರದ ನುಡಿಯನ್ನಾಡಿದನು. ಆಗ ವಿಭೀಷಣನು ಸಭೆ ಯೊಳಗಿಂದೆದ್ದು ತನ್ನ ನಾಲ್ಕು ಜನ ಮಿತ್ರರನ್ನು ಸಂಗಡ ಕರೆದು ಕೊಂಡು ಆಕಾಶಕ್ಕೆ ಹಾರಿದನು. ಮತ್ತು ಹೋಗುವಾಗ "ರಾಜಾ, ಸವಿನುಡಿಗಳನ್ನಾಡುವ ಜನರು ಬೇಕಾದಷ್ಟು ಸಿಗಬಹುದು. ಆದರೆ ನಿಷ್ಠುರ ಮಾತುಗಳನ್ನಾಡಿ ಸತ್ಯದ ದಾರಿಯನ್ನು ತೋರಿಸುವವರು ಬಹಳ ಕಡಿಮೆ. ಇನ್ನು ನನ್ನನ್ನು ಬಿಟ್ಟು ನೀನು ಸುಖವಾಗಿರು" ಎಂದು ಹೇಳಿ ಅಲ್ಲಿಂದ ಶ್ರೀರಾಮಚಂದ್ರನಿರುವ ಸ್ಥಳಕ್ಕೆ ಹೊರಟನು.

ಇತ್ತ ಆಕಾಶಮಾರ್ಗವಾಗಿ ಬರುತ್ತಿರುವ ಐದು ಜನ ರಾಕ್ಷಸ ರನ್ನು ಕಂಡು ವಾನರ ಸೈನ್ಯದಲ್ಲಿ ಗೊಂದಲವೆದ್ದಿತು. ಎಲ್ಲರೂ ಅತಿ ಕ್ರೋಧದಿಂದ ಆಕಾಶದ ಕಡೆಗೆ ದೃಷ್ಟಿಯನ್ನಿಟ್ಟರು. ಆಗ ವಿಭೀಷಣನು "ಎಲೈ ಕಪಿಗಳಿರಾ, ದುಷ್ಟನಾದ ರಾವಣನ ಚಿಕ್ಕತಮ್ಮನು ನಾನು; ನನ್ನ ಹೆಸರು "ವಿಭೀಷಣನು" ಈ ನಾಲ್ಕು ಜನ ರಾಕ್ಷಸರು ನನ್ನ ಮಿತ್ರರು. ಶ್ರೀರಾಮಚಂದ್ರನ ಧರ್ಮಪತ್ನಿಯನ್ನು ಆತನಿಗೆ ಒಪ್ಪಿಸಲು ನನ್ನ ಅಣ್ಣ ರಾವಣನಿಗೆ ನಾನು ಪರಿಪರಿಯಾಗಿ ಹೇಳಿದೆನು. ಆದರೆ ಮರಣೋನ್ಮುಖನಾದವನಿಗೆ ಔಷಧವು ಹೇಗೆ ರುಚಿಸುವದಿಲ್ಲವೋ ಹಾಗೆಯೇ ರಾವಣನಿಗೆ ನಾನು ಹೇಳಿದ ಮಾತು ಸರಿದೋರಲಿಲ್ಲ.

ಅವನು ನನ್ನನ್ನು ಹೀಯಾಳಿಸಿದ್ದರಿಂದ ನಾನು ಶ್ರೀ ರಾಮಚಂದ್ರನಿಗೆ ಶರಣು ಬಂದಿರುತ್ತೇನೆಂದು ಅವನಿಗೆ ಅರುಹಿರಿ" ಎಂದು ಒದರಿ ಹೇಳಿದನು. ಅವನ ಮಾತನ್ನು ಕೇಳಿ ಸುಗ್ರೀವನು "ಶ್ರೀ ರಾಮಚಂದ್ರನೇ ಇವನು ಶತ್ರು ಪಕ್ಷದವನಿರುವದರಿಂದ ಇವನ ಮೇಲೆ ನಾವು ವಿಶ್ವಾಸ ವಿಡಲು ಸಾಧ್ಯವಿಲ್ಲ. ಮೇಲಾಗಿ ರಾಕ್ಷಸರು ಬಹು ಮಾಯಾವಿಗಳು. ಅವರ ಮೇಲೆ ವಿಶ್ವಾಸವಿಟ್ಟರೆ ಕಾಗೆಯ ಹಿಂಡಿನಲ್ಲಿ ಗೂಗೆಯು ಸೇರಿ ಅದರ ವಂಶವನ್ನೇ ಹಾಳುಮಾಡಿದಂತಾಗುವದು. ಹೀಗೆ ನನಗೆ ಎನಿಸುತ್ತದೆ" ಎಂದು ಹೇಳಿದನು. ಅವನ ಮಾತನ್ನು ಕೇಳಿ ಶ್ರೀರಾಮಚಂದ್ರನು "ಸುಗ್ರೀವಾ, ವಿಭೀಷಣನು ನನ್ನ ಸಂಗಡ ಮಿತ್ರತ್ವವನ್ನು ಬಯಸಿ ಬಂದಿರುತ್ತಾನೆ. ಆದ್ದರಿಂದ ಭೀತಿಗೇನೊಂದು ಆಸ್ಪದವಿಲ್ಲ" ಎಂದು ಹೇಳಿದನು. ಆಗ ಸುಗ್ರೀವನು "ಇವನ ಗೆಳೆತನವು ನನಗೆ ಸರಿದೋರುವದಿಲ್ಲ. ಯಾವ ತಮ್ಮನು ಸಂಕಟಸಮಯದಲ್ಲಿರುವ ತನ್ನ ಅಣ್ಣನನ್ನು ಬಿಟ್ಟು ಶತ್ರುಪಕ್ಷವನ್ನು ಸ್ವೀಕರಿಸುವನು ? ಇಂಥವರನ್ನು ನಂಬಿದರೆ ನಾವೇ ಹಗ್ಗಕೊಟ್ಟು ಕೈಕಟ್ಟಿಸಿಕೊಂಡಂತಾಗುವದಿಲ್ಲವೇ ?" ಎಂದು ಹೇಳಿದನು. ಅವನ ಈ ಚತುರವಾದ ಮಾತನ್ನು ಕೇಳಿ ಶ್ರೀರಾಮಚಂದ್ರನು "ಸುಗ್ರೀವಾ, ನೀನು ಹೇಳುವದು ನಿಜವಿರುತ್ತದೆ. ಜಗತ್ತಿನಲ್ಲಿ ಮುಖ್ಯವಾಗಿ ಶತ್ರುಗಳು ಎರಡು ಪ್ರಕಾರ ದವರಿರುತ್ತಾರೆ. ಅವರಾರೆಂದರೆ ಒಬ್ಬರು ನಮ್ಮ ಅಣ್ಣ ತಮ್ಮಂದಿರು, ಮತ್ತೊಬ್ಬರು ನೆರೆಹೊರೆಯವರು. ನಾವು ಇವೆರಡಕ್ಕೂ ಒಳಪಟ್ಟವರಲ್ಲ. ಅಂದ ಮೇಲೆ ಹೆದರುವ ಕಾರಣವೇನು ? ಒಂದು ವೇಳೆ ಅವನು ಹಾಗೇನಾದರೂ ಮಾಡಿದರೆ ನಾನು ಅವನನ್ನು ಒಂದು ಕ್ಷಣದಲ್ಲಿಯೇ ನಾಶಗೊಳಿಸುವೆನು. ಶರಣಾಗತರನ್ನು ರಕ್ಷಿಸುವದು ನನ್ನ ಕರ್ತವ್ಯವಾಗಿರುತ್ತದೆ. ಕಾರಣ ನಾನು ವಿಭೀಷಣನ ಸಂಗಡ ಮಿತ್ರತ್ವದಿಂದಲೇ ನಡೆದುಕೊಳ್ಳುವೆನು" ಎಂದು ಹೇಳಿದನು. ಅವನ

ಮಾತನ್ನು ಕೇಳಿ ಸುಗ್ರೀವನು ಶುದ್ಧಾಂತಃಕರಣದಿಂದ “ ಹೇ ಶ್ರೀ ರಾಮಚಂದ್ರನೇ ನೀವು ಮೂರು ಲೋಕದ ಒಡೆಯರು. ಅಂದಮೇಲೆ ನೀವು ಉದಾರ ಅಂತಃಕರಣದವರಾಗಿರುವಿರಿ. ಇದರಲ್ಲಿ ಆಶ್ಚರ್ಯ ವೇನು ? ವಿಭೀಷಣನ ಹಸನ್ಮುಖವನ್ನು ಕಂಡರೆ ಅವನು ಮಿತ್ರತ್ವಕ್ಕೆ ಯೋಗ್ಯ ನಿರುವನೆಂದೆನಿಸುತ್ತದೆ ” ಎಂದು ಹೇಳಿದನು. ಅವನ ಆ ಅಭಯವಚನವನ್ನುಕೇಳಿ ವಿಭೀಷಣನು ಕೆಳಗಿಳಿದು ಬಂದು ಶ್ರೀರಾಮ ಚಂದ್ರನಪಾದಕ್ಕೆ ನಮಸ್ಕರಿಸಿ “ ಹೇ ರಾಮಚಂದ್ರಾ, ನಾನು ರಾವಣನ ತಮ್ಮನು. ಅವನು ನನ್ನನ್ನು ಅಪಮಾನಗೊಳಿಸಿದುದಕ್ಕೆ ಪಂಚಮಹಾ ಭೂತಗಳು ಆಧೀನರಾದ ನಿಮಗೆ ನಾನು ಶರಣು ಬಂದಿರುತ್ತೇನೆ. ನನ್ನ ಎಲ್ಲ ಸುಖ ದುಃಖಗಳು ನಿಮ್ಮನ್ನವಲಂಬಿಸಿರುತ್ತವೆ. ” ಎಂದು ಹೇಳಿದನು. ಆಗ ಶ್ರೀರಾಮಚಂದ್ರನು ಅವನನ್ನು ಕರುಣಾಪೂರ್ಣ ದೃಷ್ಟಿಯಿಂದ ಅವಲೋಕಿಸಿ “ ವಿಭೀಷಣಾ, ರಾಕ್ಷಸರ ಬಲವೆಷ್ಟಿರು ತ್ತದೆ ? ಅವರು ಯಾವ ರೀತಿಯಿಂದ ಯುದ್ಧಮಾಡುವರು ? ಎಂದು ಕೇಳಿದನು. ಆಗ ವಿಭೀಷಣನು “ ಹೇ ರಾಮಚಂದ್ರನೇ, ರಾವಣನು ತನಗೆ ಯಾರಿಂದಲೂ ಸೋಲು ಉಂಟಾಗಬಾರದೆಂದು ಬ್ರಹ್ಮದೇವ ನಿಂದ ವರವನ್ನು ಪಡೆದಿರುವನು. ಅವನಂತೆಯೇ ತಮ್ಮನಾದ ಕುಂಭಕರ್ಣನೂ ಮಗ ಇಂದ್ರಜಿತುವೂ ಮಹಾನ್ ಪರಾಕ್ರಮಿಗಳು.

ಇಂದ್ರಜಿತುವು ಯಾವದೊಂದು ಯುದ್ಧವನ್ನಾರಂಭಿಸಿದ ಕೂಡಲೆ ಅಗ್ನಿದೇವನನ್ನು ಆರಾಧಿಸಿ ಅವಧ್ಯವಾದ ಕವಚವನ್ನು ಮೈಮೇಲೆ ಧರಿಸಿ ಧನುಷ್ಯಬಾಣಗಳನ್ನು ಹಿಡಿದು ಅದೃಶ್ಯನಾಗು ತ್ತಾನೆ. ಆಗ ಅವನನ್ನು ಸೋಲಿಸುವದು ಯಾರಿಗೂ ಸಾಧ್ಯವಾಗುವ ದಿಲ್ಲ. ಈ ರೀತಿಯಾಗಿ ಅವನು ಯುದ್ಧಮಾಡುವನು. ಮತ್ತು ಎಷ್ಟೋ ಜನ ಶೂರರಾದ ಸೇನಾಪತಿಗಳು ಅವನ ಹತ್ತಿರ ಇರುವರು. ಅದರಿಂದಲೇ ಅವನು ದೇವತೆಗಳನ್ನು ಸಹ ಗೆದ್ದಿರುವನು. ” ಎಂದು

ಹೇಳಿದನು. ಕೂಡಲೇ ರಾಮಚಂದ್ರನು “ ವಿಭೀಷಣಾ, ರಾವಣನ ಸಾಮರ್ಥ್ಯವು ನನಗೆ ಗೊತ್ತಿರುವದು. ಆದರೆ ನಾನು ರಾವಣನನ್ನು ಕೊಂದು ಆ ಬಳಿಕ ನಿನ್ನನ್ನು ಲಂಕೆಗೆ ಕರೆದೊಯ್ದು ಪಟ್ಟಕ್ಕೆ ಕುಳ್ಳಿರಿಸುವೆನು. ಈ ಮಾತು ನಿಜವೆಂದು ತಿಳಿ ” ಎಂದು ಹೇಳಿ ಲಕ್ಷ್ಮಣನ ಕಡೆಯಿಂದ ಸುವರ್ಣಕಲಶದಲ್ಲಿ ಸಮುದ್ರಜಲವನ್ನು ತರಿಸಿ ಅಲ್ಲಿಯೇ ವಿಭೀಷಣನಿಗೆ ಆ ಜಲದಿಂದ ರಾಜ್ಯಾಭಿಷೇಕವನ್ನು ಮಾಡಿದನು. ಆಗ ಎಲ್ಲ ವಾನರರು “ ಧನ್ಯ ರಾಜಾ ರಾಮಚಂದ್ರ ಧನ್ಯ ” ಎಂದು ಆತನನ್ನು ಹೊಗಳಿದರು. ಮುಂದೆ ವಿಭೀಷಣನು “ ನಾನು ನಿಮಗೆ ಯುದ್ಧದಲ್ಲಿ ಶಕ್ಯವಾದಷ್ಟು ಸಹಾಯ ಮಾಡುವೆನು ” ಎಂದು ಹೇಳಿದನು. ಕೂಡಲೇ ಅವರೆಲ್ಲರೂ “ ಇನ್ನು ಮುಂದೆ ಈ ಅಪರಂಪಾರ ಸಮುದ್ರವನ್ನು ದಾಟುವ ಬಗೆ ಹೇಗೆ? ” ಎಂದು ವಿಚಾರಿಸುತ್ತ ಕುಳಿತರು.

ವಿಚಾರಾಂತ್ಯದಲ್ಲಿ ವಿಭೀಷಣನು ಶ್ರೀರಾಮನನ್ನು ಕುರಿತು “ ಹಿಂದಕ್ಕೆ ನಿಮ್ಮ ಪೂರ್ವಜರು ನೆಲವನ್ನಗಿದು ಸಮುದ್ರವನ್ನು ಹುಟ್ಟಿಸಿದರು. ಆದ್ದರಿಂದ ಈಗ ಸಮುದ್ರನಾಥನು ನಿಮಗೆ ದಾರಿಯನ್ನು ಕೊಟ್ಟೇ ಕೊಡುವನು. ಅದಕ್ಕಾಗಿ ನೀವು ಆತನನ್ನು ಪ್ರಾರ್ಥಿಸಬೇಕೆಂದು ಹೇಳಿದನು. ಈ ಮಾತು ಸರ್ವರಿಗೂ ಒಪ್ಪಿಗೆಯಾದುದರಿಂದ ರಾಮಚಂದ್ರನು ಪೂರ್ವಾಭಿಮುಖನಾಗಿ ದರ್ಭವನ್ನು ಹಾಸಿ ಸಮುದ್ರನಾಥನನ್ನು ಪ್ರಾರ್ಥಿಸಿ ಅದರ ಮೇಲೆ ಮೂರು ರಾತ್ರಿಯ ವರೆಗೆ ಶಯನ ಮಾಡಿದನು. ಆದರೂ ಸಾಗರನಾಥನ ದರ್ಶನವಾಗಲಿಲ್ಲ. ಆಗ ಶ್ರೀರಾಮಚಂದ್ರನು ಅತಿ ಕೋಪಾಯಮಾನನಾಗಿ “ ಈ ಉನ್ಮತ್ತನಾದ ಸಾಗರನಿಗೆ ದಂಡೋಪಾಯವೇ ಇನ್ನು ಯೋಗ್ಯವೆಂದು ನುಡಿದು ಕೂಡಲೇ ಧನುಷ್ಯ ಬಾಣವನ್ನು ತೆಗೆದುಕೊಂಡು ಬ್ರಹ್ಮಾಸ್ತ್ರವನ್ನು ಬಿಡಲು ಸಿದ್ಧನಾದನು. ಆಗ ಪೃಥ್ವೀ

ದೇವಿಯು ಗಡಗಡನೆ ನಡುಗಹತ್ತಿದಳು. ಚಂದ್ರಸೂರ್ಯರು ಕಳಚಿ
ಬೀಳುವಂತಾಗಿ ನಾಲ್ಕೂ ದಿಕ್ಕುಗಳಲ್ಲಿ ಕತ್ತಲೆ ಕವಿಯಿತು.
ಅಷ್ಟರಲ್ಲಿ ಸಮುದ್ರದ ಮಧ್ಯದಿಂದ ಅತಿ ದೈದೀಪ್ಯನಾದ ಪುರುಷ
ನೊಬ್ಬನು ಹೊರಗೆ ಬಂದು ಕೈಜೋಡಿಸಿ "ಹೇ ರಾಮಚಂದ್ರನೇ,
ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಈ ಪಂಚಮಹಾಭೂತಗಳೆಲ್ಲ
ಪರಮೇಶ್ವರನ ನಿಯಂತ್ರಣಕ್ಕೊಳಪಟ್ಟಿರುವವು. ಅದರಿಂದ ನಾನು
ಆತನ ನಿಯಮಕ್ಕೆ ಆಧೀನನು. ಕಾರಣ ನೀವು ಕ್ರೋಧವನ್ನು
ತಾಳಿ ನನ್ನ ಜಲವನ್ನು ಶೋಷಿಸಬೇಡಿರಿ. ನಾನು ನಿಮಗೆ ಲಂಕೆಗೆ
ಹೋಗಲು ಮಾರ್ಗ ಕೊಡುವೆನು. ನಿಮ್ಮಲ್ಲಿರುವ ವಿಶ್ವಕರ್ಮನ
ಪುತ್ರನಾದ ನಲನಿಂದ ಸೇತುವೆಯನ್ನು ಕಟ್ಟಿಸಬೇಕು. ಅದನ್ನು ನಾನು
ನನ್ನ ದೇಹದಮೇಲೆ ಧರಿಸುವೆನು" ಎಂದು ಹೇಳಿದನು. ಆಗ
ಶ್ರೀರಾಮಚಂದ್ರನು "ಎಲೈ ಸಾಗರನಾಥನೇ, ಈ ಹೂಡಿರುವ ನನ್ನ
ಬಾಣವನ್ನು ನಾನು ಯಾವ ಕಡೆಗೆ ಬಿಡಲಿ ?" ಎಂದು ಕೇಳಿದನು.
ಆಗ ಮಹಾಸಾಗರನು "ಹೇ ರಾಮಚಂದ್ರಾ, ಉತ್ತರದ ಕಡೆಗೆ
"ಮರುತ್" ಎಂಬ ರಾಕ್ಷಸನು ನನ್ನಲ್ಲಿರುವ ಜಲಚರಗಳನ್ನು
ಭಕ್ಷಿಸಿ ನನಗೆ ತೊಂದರೆಗಳನ್ನು ಕೊಡುತ್ತಿರುವನು. ಕಾರಣ ನೀವು
ಈ ಬಾಣವನ್ನು ಆತನ ಮೇಲೆ ಬಿಡಬಹುದು" ಎಂದು ಹೇಳಿ ಅಂತ
ರ್ಧಾನನಾದನು. ಆಗ ರಾಮಚಂದ್ರನು ತನ್ನ ಬಾಣವನ್ನು ಆ
ಮರುತ್ ರಾಕ್ಷಸನ ಮೇಲೆ ಬಿಟ್ಟನು. ಕೂಡಲೆ ಆ ರಾಕ್ಷಸನು
ಮರಣಹೊಂದಿದನು. ಅಲ್ಲಿರುವ ಜಲವೆಲ್ಲವೂ ಒಣಗಿ ಬಾಣತಾಕಿದ
ಸ್ಥಳಕ್ಕೆ ಒಂದು ತಗ್ಗು ಬಿದ್ದಿತು. ಮುಂದೆ ಆ ತಗ್ಗು ನೀರಿನಿಂದ
ತುಂಬಿತು.*

---

*ಮರುತ್ತ ರಾಕ್ಷಸನು ನಾಶವಾದಂದಿನಿಂದ ಆ ದೇಶಕ್ಕೆ ಮಾರವಾಡವೆಂದು
ಹೆಸರು ಬಿದ್ದಿತು. ಮಾರವಾಡ ದೇಶವು ಜಲಹೀನವಿದ್ದರೂಕೂಡ ಸುಖಸಂಪನ್ನವಿರ
ಲೆಂದು ಶ್ರೀರಾಮಚಂದ್ರನು ವರವಿತ್ತನು. ಅಂದಿನಿಂದ ಇಂದಿನವರೆಗೆ ಮಾರವಾಡವು
ಸಂಪನ್ನವಾಗಿ ಉಳಿದಿದೆ.

ಒಂದು ದಿನ ಶ್ರೀರಾಮಚಂದ್ರನು ಶುಭಮುಹೂರ್ತದಲ್ಲಿ ನವ ಗ್ರಹಗಳನ್ನು ಸ್ಥಾಪಿಸಿ ಅವನ್ನು ಪೂಜಿಸಿ ಆನಂತರ ಸೇತುವೆಕಟ್ಟಲು ಆಜ್ಞೆಯಿತ್ತನು.†

ಆಗ ನಲನು ಎಲ್ಲ ವಾನರ ಸೇನೆಗೆ ಸೇತುವೆಗಾಗಿ ಸಾಮಗ್ರಿಗಳನ್ನು ತರಲು ಹೇಳಿ ತಾನು ಸೇತುವೆಕಟ್ಟಲು ಸಿದ್ಧನಾಗಿ ಕುಳಿತನು. ಮುಂದೆ ಅವರೆಲ್ಲರೂ ದೊಡ್ಡ ದೊಡ್ಡ ವೃಕ್ಷಗಳನ್ನೂ, ಪಾಷಾಣಗಳನ್ನು ಸಮುದ್ರದ ದಂಡೆಯಮೇಲೆ ರಾಶಿ ರಾಶಿಯಾಗಿ ತಂದು ಒಟ್ಟಿದರು. ಕೂಡಲೇ ನಲನು ಆ ಸಾಮಗ್ರಿಗಳೆಲ್ಲವನ್ನು ತೆಗೆದುಕೊಂಡು ಒಂದೇ ದಿನದಲ್ಲಿ ಹತ್ತು ಯೋಜನದಷ್ಟು ಉದ್ದವಾದ ಸೇತುವೆಯನ್ನು ಸಿದ್ಧಪಡಿಸಿದನು. ಅದರಿಂದ ಅವನಿಗೆ ನಾನು ನೀರಿನಮೇಲೆ ಪಾಷಾಣಗಳನ್ನು ತೇಲಿಸುವೆನೆಂಬ ಅಹಂಕಾರವು ಮೊಳೆಯಿತು. ಆಗ ಅದೇ ರಾತ್ರಿಯಲ್ಲಿ ಒಂದು ಪ್ರಚಂಡವಾದ ಮೀನವು ಆ ಸೇತುವೆಯನ್ನು ನುಂಗಿಬಿಟ್ಟಿತು. ಮರುದಿವಸ ನೋಡುವಷ್ಟರಲ್ಲಿ ಸೇತುವೆಯು ಮಾಯದ್ದರಿಂದ ರಾಕ್ಷಸರ ಕೃತಿಯಿಂದ ನಾಶವಾಗಿರಬಹದೇ ? ಎಂದು ವಾನರ ಸೇನೆಯಲ್ಲಿ ಹಾ! ಹಾ! ಕಾರವೆದ್ದಿತು. ಕೂಡಲೇ ರಾಮಚಂದ್ರನು ಶರಭನ ಕಡೆಯಿಂದ ತಿಮಿಂಗಲನೆಂಬ ಮೀನವನ್ನು ಕರೆಕಳುಹಿದನು. ಆಗ ಅದು “ ನಾನು ತಮ್ಮ ದರ್ಶನಕ್ಕೆ ಬರುತ್ತಿರುವಾಗ ನನ್ನ ಮಗನು ತಿಳಿಯದೇ ಆ ಸೇತುವೆಯನ್ನು ನುಂಗಿರುವನು.

---

†ಶ್ರೀರಾಮಚಂದ್ರನು ನವಗ್ರಹಗಳನ್ನು ಪೂಜಿಸಿದ ಸ್ಥಳಕ್ಕೆ ನವಪಾಷಾಣವೆನ್ನುತ್ತಾರೆ. ಅವು ಈಗಲೂ ಉಳಿದಿರುತ್ತವೆ. ನವಪಾಷಾಣದಿಂದ ದರ್ಭಶಯನವು ಹತ್ತು ಮೈಲಿನಷ್ಟು ದೂರವಿರುತ್ತದೆ. ರಾಮೇಶ್ವರಕ್ಕೆ ಹೋಗುವ ಜನರು ನವಪಾಷಾಣಗಳನ್ನು ಪೂಜಿಸಿ ದರ್ಭಶಯನನ ದರ್ಶನವನ್ನು ತೆಗೆದುಕೊಂಡು ಧನುಷ್ಯ ಕೋಟಿಗೆ ಹೋಗಿ ಆನಂತರ ರಾಮೇಶ್ವರಕ್ಕೆ ಹೋಗುವರು. ಈ ರೀತಿಯಾಗಿ ಆ ಸ್ಥಳಗಳು ಇನ್ನೂ ಪ್ರಸಿದ್ಧವಾಗಿ ಉಳಿದಿರುತ್ತವೆ.

ಕಾರಣ ಆತನನ್ನು ಕ್ಷಮಿಸಬೇಕು. ಮತ್ತು ಆತನ ಕಡೆಯಿಂದ ಸೇತುವೆಯನ್ನು ಮೊದಲಿನ ಸ್ಥಳಕ್ಕೆ ತಂದು ಇಡಿಸುವೆನು" ಎಂದು ಹೇಳಿ ಶ್ರೀ ರಾಮನಿಂದ ಅಭಯಪಡೆದು ತಂದಿರಿಸಿತು. ಮುಂದೆ ನಲನು ವೃಕ್ಷ-ಪಾಷಾಣಗಳಿಂದ ಸಮುದ್ರದ ಮೇಲೆ ಸೇತುವೆಕಟ್ಟುತ್ತಿರುವಾಗ ಅವು ಒತ್ತಟ್ಟಿಗೆ ಕೂಡದೆ ತೇಲುತ್ತ ಹೋಗಹತ್ತಿದವು. ಆಗ ಹನುಮಂತನು ಮುಂದೆ ಬಂದು "ಗೆಳೆಯಾ, ನೀನು ಮನಸ್ಸಿನಲ್ಲಿ ಗರ್ವವನ್ನು ತಾಳಿರುವೆ. ಕಾರಣ ಆ ಗರ್ವವನ್ನು ಬಿಟ್ಟುಬಿಡು ಕ್ರಿಯೆಯನ್ನು ಮಾಡಿಸುವವನೂ ಮಾಡುವವನೂ ಶ್ರೀರಾಮಚಂದ್ರನೆಂದೇ ತಿಳಿದು ಒಂದರ ಮೇಲೆ ರಾ; ಮತ್ತೊಂದರ ಮೇಲೆ ಮ; ಎಂದು ಅಕ್ಷರಗಳನ್ನು ಬರೆದು ನೀರಿನ ಮೇಲೆ ಬಿಟ್ಟರೆ ಅವು ಒಂದಕ್ಕೊಂದು ಕೂಡಿಕೊಳ್ಳುವವು" ಎಂದು ಉಪದೇಶವನ್ನು ಮಾಡಿದನು. ಅದರಂತೆ ನೀಲನು ಮಾಡಹತ್ತಲು ಮತ್ತೆ ಹತ್ತು ಯೋಜನದಷ್ಟು ಸೇತುವೆಯು ಮುಂದರಿಯಿತು. ಈ ರೀತಿಯಾಗಿ ಐದು ದಿವಸಗಳಲ್ಲಿ ನೂರು ಯೋಜನದಷ್ಟು ನಲಸೇತುವೆಯು ಸಿದ್ಧವಾಯಿತು. ಮುಂದೆ ಅವರೆಲ್ಲರೂ ಅಲ್ಲಿಂದ ಹೊರಟು ಸೇತುವೆಯ ಮಾರ್ಗವಾಗಿ ಸುವೇಲಾಂಚಲ ಪರ್ವತಕ್ಕೆ ಬಂದು ತಲುಪಿದರು. ಅಲ್ಲಿ ಒಂದು ವಿಸ್ತ್ರತವಾದ ರಮ್ಯ ಸ್ಥಳವನ್ನು ಕಂಡು ತಮ್ಮ ಸೇನೆ ಸಮೇತವಾಗಿ ತಳವೂರಿದರು. ಈ ರೀತಿಯಾಗಿ ಅವರು ಯುದ್ಧದ ಸಿದ್ಧತೆಯನ್ನು ಮಾಡಿಕೊಂಡು ಲಂಕಾ ಪಟ್ಟಣಕ್ಕೆ ಬಂದು ತಲುಪಿದರು.

## ೧೯. ರಾವಣನ ಸಂಹಾರ

ಸುವೇಲಾಚಲಕ್ಕೆ ಬಂದನಂತರ ರಾಮ-ಲಕ್ಷ್ಮಣರು, ಸುಗ್ರೀವ ವಿಭೀಷಣ, ಹನುಮಂತ ಅಂಗದಾದಿ ವೀರರನ್ನು ಸಂಗಡ ಕರೆದು ಕೊಂಡು ಸುವೇಲಾಚಲದ ಶಿಖರವನ್ನೇರಿ ಲಂಕಾ ಪಟ್ಟಣವನ್ನು ನಿರೀಕ್ಷಿಸಹತ್ತಿದರು. ಅದು ಸುವರ್ಣದ ಕೋಟೆಯಿಂದ ಶೋಭಿಸು ತ್ತಿತ್ತು. ಅದರ ಮಧ್ಯದಲ್ಲಿ ಸುಂದರವಾದ ಅರಮನೆಗಳಿದ್ದವು. ಅಲ್ಲಲ್ಲಿ ಅಂದವಾಗಿ ಕಾಣುತ್ತಿರುವ, ವನ-ಉಪವನಗಳಿಂದ ಶೋಭಿ ಸುವ ಆ ಲಂಕಾ ಪಟ್ಟಣವು ಆಕಾಶದಲ್ಲಿರುವ ತ್ರಿಪುರನಗರದಂತೆ ತ್ರಿಕೂಟ ಪರ್ವತದ ಮಧ್ಯದಲ್ಲಿ ಕಂಗೊಳಿಸುತ್ತಿತ್ತು. ಅದನ್ನು ಕಂಡು ರಾಮ-ಲಕ್ಷ್ಮಣರಿಗೆ ಪರಮಾನಂದವಾಯಿತು. ಇದೇ ದುಷ್ಟನಾದ ರಾವಣನು ರಾಕ್ಷಸಿಯರ ಕಾವಲಿನಲ್ಲಿ ಸೀತೆಯನ್ನಿರಿಸಿದ್ದು ದಕ್ಕೆ ಶ್ರೀರಾಮಚಂದ್ರನಿಗೆ ದುಃಖ—ಕೋಪಗಳೆರಡೂ ಹೆಚ್ಚಿದವು. ಆದರೂ ಧೈರ್ಯವನ್ನು ತಂದುಕೊಂಡು ಇನ್ನುಮುಂದೆ ಈ ಪಟ್ಟಣ ವನ್ನು ಮುತ್ತುವ ಬಗೆ ಹೇಗೆ ? ಎಂಬ ಆಲೋಚನೆಯಿಂದ ಮರಳಿ ತಮ್ಮ ಸ್ಥಳಕ್ಕೆ ಬಂದರು.

ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಿ ಎಲ್ಲ ಸೈನ್ಯದೊಂದಿಗೆ ರಾಮ—ಲಕ್ಷ್ಮಣರು ಈಚೆಯ ದಂಡೆಗೆ ಬಂದುದು ರಾವಣನಿಗೆ ತಿಳಿಯಿತು. ಕೂಡಲೆ ಅವನು ರಾಮ—ಲಕ್ಷ್ಮಣರ ಸ್ವರೂಪವು ಹೇಗಿರುವದು ? ಅವರ ಆಯುಧಗಳು ಎಂಥವು ಇರುವವು ? ಅವರ ಸೈನ್ಯದ ಬಲವು ಎಷ್ಟಿರುವದು ? ಎಂಬುದನ್ನು ತಿಳಿದುಕೊಂಡು ಬರಲು ಶುಕ-ಸಾರಣರೆಂಬ ರಾಕ್ಷಸರನ್ನು ಕಳುಹಿಕೊಟ್ಟನು. ಆಗ ಅವರು ವಾನರ ರೂಪವನ್ನು ಧರಿಸಿ ಕಪಿಸೈನ್ಯದ ಶಿಬಿರದಲ್ಲಿ ಸಂಚರಿಸುತ್ತಿರುವಾಗ ವಿಭೀಷಣನು ಅವರನ್ನುಗುರುತಿಸಿ ಕೂಡಲೆ ಅವ

ರನ್ನು ಹಿಡಿತರಿಸಿ ಶ್ರೀರಾಮಚಂದ್ರನ ಮುಂದೆ ನಿಲ್ಲಿಸಿದನು. ವಿಚಾರಾಂತ್ಯದಲ್ಲಿ ಅವರು ತಮ್ಮ ತಪ್ಪನ್ನು ಒಪ್ಪಿಕೊಂಡರು. ಆಗ ಶ್ರೀರಾಮಚಂದ್ರನು— “ ನೀವು ಬಂದ ಕೆಲಸವಾಯಿತು. ಮರಳಿ ಹೋಗಬಹುದು ” ಎಂದು ನುಡಿದು ಅವರನ್ನು ಬಿಟ್ಟುಬಿಟ್ಟನು. ಮುಂದೆ ಅವರು ರಾವಣನ ಬಳಿಗೆ ಬಂದು— “ ಸ್ವಾಮಿ ಮಹಾರಾಜರೇ, ಶ್ರೀರಾಮಚಂದ್ರನ ಸೈನ್ಯವು ಅಪಾರವಾಗಿರುತ್ತದೆ. ಅವರೆಲ್ಲರೂ ಮಹಾ ಬಲಶಾಲಿಗಳಾಗಿರುವರು. ರಾಮ-ಲಕ್ಷ್ಮಣ, ಸುಗ್ರೀವ, ವಿಭೀಷಣಾದಿಗಳು ದಿಕ್‌ಪಾಲರಂತೆ ಪರಾಕ್ರಮಿಗಳಾಗಿರುವರು. ಅವರ ಮುಂದೆ ನಮ್ಮ ಆಟವು ಸಾಗಲಾರದು. ಕಾರಣ ನಾವು ಒಳ್ಳೇ ರೀತಿಯಿಂದ ಸೀತಾಮಾತೆಯನ್ನು ಅವರಿಗೆ ಒಪ್ಪಿಸುವದೇ ವಿಹಿತವೆನಿಸುತ್ತದೆ.” ಎಂದು ಹೇಳಿದರು. ಅವರ ಮಾತನ್ನು ಕೇಳಿ ರಾವಣನು ಅವರನ್ನು ಧಿಕ್ಕರಿಸಿ ತನ್ನ ಅರಮನೆಯ ಮೇಲಿರುವ ಗೋಪುರದ ಮೇಲೆ ರಾತ್ರಿ ನಿಂತು ಸೈನ್ಯವನ್ನು ನಿರೀಕ್ಷಿಸಹತ್ತಿದನು. ಮತ್ತು ಸಾರಣನನ್ನು ಕರೆದು ಎಲ್ಲ ವೀರ ವಾನರರ ಹೆಸರನ್ನು ಕೇಳಿದನು. ಆಗ ಅವನು— “ ಇವನು ಸೈನ್ಯದ ಮುಂದಾಳು ಅಗ್ನಿಪುತ್ರ ನೀಲ, ವಿಶ್ವಕರ್ಮನ ಪುತ್ರನಾದ ಸೇತುವೆಯನ್ನು ಕಟ್ಟಿದ ನಲನೇ ಇವನು. ಅವರು ಸಂರಭ, ಶರಭ, ಅಂಗದ, ಪನಸ, ವಿನಿತ, ಕೃಥನ ಮತ್ತು ಆ ಅಸ್ವಲ ರಾಜನಾದ ಧೂಮ್ರ, ಜಾಂಬುವಂತ, ರಂಭ, ಸತ್ರಾದನ, ಕೃಥನ, ಕೃಮಾಥಿ, ಗೌಲಾಂಗುಲ, ಗವಾಕ್ಷ. ಇವನು ವಾಯುಪುತ್ರನಾದ ಹನುಮ ” ಎಂದು ಹೇಳಿದನು. “ ಅವರೆಲ್ಲರ ಮಧ್ಯದಲ್ಲಿ ಶಾಮವರ್ಣದಿಂದ ಒಪ್ಪುವ ಕಮಲನೇತ್ರ, ಸುಮುಖ, ಸಿಂಹಸ್ಕಂಧವುಳ್ಳ ಶ್ರೀರಾಮಚಂದ್ರನನ್ನು ತೋರಿಸಿ, ಅವನ ಸುತ್ತಲೂ ನಿಂತಿರುವವರು ಲಕ್ಷ್ಮಣ, ಸುಗ್ರೀವ, ವಿಭೀಷಣ ” ಎಂದು ಹೇಳಿದನು. ಅದನ್ನು ಕೇಳಿ ರಾವಣನು ಚಿಂತಾತುರನಾಗಿ ಕೆಳಗಿಳಿದು ಬಂದು

ಶುಕಸಾರಣರಿಗೆ ಅಪ್ಪಣೆಯನ್ನು ಕೊಟ್ಟು ತಾನು ತನ್ನ ಅರಮನೆಗೆ ಹೋದನು.

ದುಷ್ಟನಾದ ರಾವಣನು ಮರುದಿವಸ ಸೀತೆಯನ್ನು ಮೋಸ ಗೊಳಿಸುವದರ ಸಲುವಾಗಿ ಶ್ರೀರಾಮಚಂದ್ರನ ಶಿರಸ್ಸನ್ನು ಮಾಯೆ ಯಿಂದ ನಿರ್ಮಾಣ ಮಾಡಿ ಅದನ್ನು ಸೀತೆಯ ಬಳಿಗೆ ತೆಗೆದುಕೊಂಡು ಹೋಗಿ— “ ಹೇ, ಮೂರ್ಖಳೇ ! ಇನ್ನುಮೇಲೆ ನಿನ್ನ ಹಟಮಾರಿ ತನವನ್ನು ಬಿಟ್ಟುಬಿಡು. ಇದೋ ನೋಡು; ನನ್ನ ಸೇನಾಪತಿಯಾದ ಪ್ರಹಸ್ತನು ರಾಮನು ಸಮುದ್ರವನ್ನು ದಾಟಿ ಬರುತ್ತಿರುವಾಗ ಅವನ ಮೇಲೆ ಏರಿ ಹೋಗಿ ಅವನನ್ನು ಕೊಂದು ಅವನ ಈ ಶಿರಸ್ಸನ್ನು ತಂದಿ ರುವನು ” ಎಂದು ತೋರಿಸಿದನು. ಅದನ್ನು ಕಂಡು ಸೀತಾಮಾತೆಗೆ ಹಿಡಿಸಲಾರದಷ್ಟು ದುಃಖವಾಯಿತು. ಅವಳು— “ ಎಲೈ ರಾವಣಾ ಸುರನೇ, ಅವರನ್ನು ಕೊಂದಂತೆ ನನ್ನನ್ನೂ ಕೊಂದುಬಿಡು. ಅವರ ಶಿರಸ್ಸಿನ ಮೇಲೆ ನನ್ನ ಶಿರಸ್ಸು ಬೀಳಲಿ ! ” ಎಂದು ದುಃಖಿಸುತ್ತ— “ ಹೇ ಕೈಕೇಯೀ, ನಿನ್ನ ಇಚ್ಛೆಯು ಇಂದು ಈಡೇರಿತು. ನನ್ನ ಸಲು ವಾಗಿ ಆರ್ಯಪುತ್ರರು ಪ್ರಾಣಕ್ಕೆರವಾದರು. ಇನ್ನು ನಾನು ಜೀವ ದಿಂದ ಬದುಕಿ ಫಲವೇನು ? ನಾನೆಂಥ ಅಭಾಗಿನಿಯು ? ” ಎಂದು ನಾನಾರೀತಿಯಿಂದ ದುಃಖಿಸತೊಡಗಿದಳು. ಅಷ್ಟರಲ್ಲಿಯೇ ರಾವಣನ ಸೇನಾಪತಿಯಾದ ಪ್ರಹಸ್ತನು ಅಲ್ಲಿಗೆ ಬಂದು— “ ಮಹಾರಾಜರೇ, ಬಹಳ ಅಗತ್ಯವಾದ ಕೆಲಸವಿರುತ್ತದೆ. ಕಾರಣ ತಾವು ಈಗಲೇ ಬರುವದಾಗಬೇಕು.” ಎಂದು ಹೇಳಿ ರಾವಣನನ್ನು ಸಂಗಡ ಕರೆದು ಕೊಂಡು ಹೋದರು. ಕೂಡಲೇ ಆ ಶಿರಸ್ಸು ಮಾಯವಾಯಿತು. ಆಗ ವಿಭೀಷಣನ ಹೆಂಡತಿಯಾದ ಸರಮೆ ರಾಕ್ಷಸಿಯು ಅಲ್ಲಿಗೆ ಬಂದು— ಈ ಶಿರವು ಕೇವಲ ರಾಕ್ಷಸೀ ಮಾಯೆಯಿಂದ ಆಗಿರುತ್ತದೆ. ರಾಮ—ಲಕ್ಷ್ಮಣರು ಸುರಕ್ಷಿತರಾಗಿರುವರು. ನಾನು ಅವರನ್ನು

ಕಂಡಿರುವೆನು. ನೀನು ಸ್ವಲ್ಪವೂ ಚಿಂತಿಸಬೇಡ" ಎಂದು ಹೇಳಿ ತಾನು ರಾವಣನ ಸಭೆಯಲ್ಲಿ ನಡೆದಿರುವ ವರ್ತಮಾನವನ್ನು ತಿಳಿದು ಕೊಂಡು ಬರಲು ಅರಮನೆಗೆ ಹೋದಳು.

ಇತ್ತ ಸಭೆಯಲ್ಲಿ ರಾವಣನ ತಾಯಿಯು ಮತ್ತು ಅಜ್ಜನು, ಮಂತ್ರಿಗಳು ಸೀತೆಯನ್ನು ರಾಮಚಂದ್ರನಿಗೊಪ್ಪಿಸಲು ರಾವಣನಿಗೆ ಪರಿಪರಿಯಾಗಿ ಹೇಳಿದರು. ಆದರೂ ಅವನು ಯಾರ ಮಾತನ್ನೂ ಲೆಕ್ಕಿಸದೆ ಎಲ್ಲ ಸೈನ್ಯವು ಒಂದು ಗೂಡುವದರ ಸಲುವಾಗಿ ಭೇರಿಯನ್ನು ಹೊಡೆಯಲು ಆಜ್ಞೆಕೊಟ್ಟನು. ಸರಮೆಯು ಸೀತಾಮಾತೆಗೆ ಹೇಳು ತ್ತಿರುವಷ್ಟರಲ್ಲಿ ಭೇರಿಯ ನಾದವು ಕೇಳಿಸಿತು. ಅದರ ಅತಿ ಭಯಂಕರವಾದ ಸಪ್ಪಳವನ್ನು ಕೇಳಿ ಎಲ್ಲ ಸೈನಿಕರು ಸಶಸ್ತ್ರರಾಗಿ ಒಂದು ಗೂಡಿದರು. ಆಗ ರಾವಣನು ಕೋಟೆಯ ಪೂರ್ವ ಬಾಗಿಲಿಗೆ ಪ್ರಹಸ್ತನನ್ನೂ, ದಕ್ಷಿಣಕ್ಕೆ ಮಹೋದಯ, ಮಹಾಪಾರ್ಶ್ವರನ್ನೂ ಪಶ್ಚಿಮಕ್ಕೆ ಇಂದ್ರಜಿತುವಿನನ್ನೂ ಉತ್ತರಕ್ಕೆ ಶುಕ-ಸಾರಣರನ್ನೂ ನಿಯಮಿಸಿದನು. " ನಾನು ನಿಮಗೆ ಸಹಾಯಮಾಡಲು ಬರುವೆನು" ಎಂದು ತಿಳಿಸಿದನು. ಈ ರೀತಿ ಲಂಕೆಯ ಸಂರಕ್ಷಣೆಗಾಗಿ ಯೋಗ್ಯ ವ್ಯವಸ್ಥೆಯನ್ನು ಮಾಡಿದನು.

ಈ ಸಂಗತಿಯನ್ನು ವಿಭೀಷಣನು ತನ್ನ ದೂತರಿಂದ ತಿಳಿದು ಕೊಂಡನು. ಆಗ ರಾಮಚಂದ್ರನು ತನ್ನ ಸೈನ್ಯದಲ್ಲಿ ನಾಲ್ಕು ಭಾಗ ಗಳನ್ನು ಮಾಡಿ ಪೂರ್ವದ ಬಾಗಿಲಿಗೆ ನೀಲನನ್ನೂ, ದಕ್ಷಿಣಕ್ಕೆ ಅಂಗದ ನನ್ನೂ, ಪಶ್ಚಿಮಕ್ಕೆ ಹನುಮಂತನನ್ನೂ ನಿಲ್ಲಿಸಿ, ಉತ್ತರಕ್ಕೆ ಸ್ವತಃ ತಾವೇ ರಾಮ-ಲಕ್ಷ್ಮಣರು ನಿಂತರು. ಅವರೆಲ್ಲರ ಸಹಾಯಕ್ಕೆ ಸುಗ್ರೀವನೂ, ಜಾಂಬುವಂತನೂ ಮತ್ತು ವಿಭೀಷಣನೂ ನಿಂತರು. ಮತ್ತು ಯಾವ ವಾನರನೂ ಮನುಷ್ಯರೂಪವನ್ನು ಧರಿಸಬಾರದೆಂದು ಕಟ್ಟಾಜ್ಞೆಯಿ ತ್ತನು. ರಾಮ-ಲಕ್ಷ್ಮಣ, ವಿಭೀಷಣಾದಿ ಐದು ಜನರಷ್ಟೇ ಮನುಷ್ಯ

ರೂಪದಿಂದ ಯುದ್ಧ ಮಾಡಬೇಕೆಂದು ಹೇಳಿದರು. ಈ ರೀತಿಯಾಗಿ ಅವರು ಲಂಕೆಗೆ ಮುತ್ತಿಗೆಯನ್ನು ಹಾಕಿದರು.

ಮರುದಿವಸ ರಾವಣನು ತನ್ನ ಅರಮನೆಯ ಎತ್ತರವಾದ ಗೋಪುರದ ಮೇಲೆ ನಿಂತು ನೋಡುತ್ತಿರುವಾಗ ವಿಭೀಷಣನು 'ಇವನೇ ರಾವಣನು' ಎಂದು ರಾಮನಿಗೆ ತೋರಿಸಿದನು. ಕೂಡಲೇ ಸುಗ್ರೀವನಕೋಪವು ಹೆಚ್ಚಿ ಅಲ್ಲಿಂದ ಜಿಗಿದು ರಾವಣನಿದ್ದಲ್ಲಿಗೆ ಬಂದು ಅವನನ್ನು ಧಿಕ್ಕಾರದಿಂದ "ಎಲೈ ರಾವಣನೇ, ನಾನು ಲೋಕನಾಥನಾದ ಶ್ರೀರಾಮಚಂದ್ರನ ದಾಸನು. ಇನ್ನು ನೀನು ನನ್ನ ಕೈಯೊಳಗಿಂದ ಪಾರಾಗುವದು ಅಶಕ್ಯವೆಂದು ತಿಳಿ" ಎಂದು ಹೇಳಿ ಆತನನ್ನು ಗುದ್ಧಿ ಕೆಡವಿ ಒಂದು ಗಳಿಗೆಯ ವರೆಗೆ ಬಾಹು ಯುದ್ಧವನ್ನು ಆಡಿ ಮರಳಿ ರಾಮಚಂದ್ರನ ಬಳಿಗೆ ಬಂದನು. ಆಗ ರಾಮಚಂದ್ರನು "ಸುಗ್ರೀವಾ, ಈ ರೀತಿಯಾಗಿ ಸಾಹಸವನ್ನು ಮಾಡಬೇಡ. ಇದರಿಂದ ಒಂದು ವೇಳೆ ನಿನಗೆ ಅಪಾಯವಾಗಿದ್ದರೆ ನಮಗೆಷ್ಟು ತೊಂದರೆಯಾಗುತ್ತಿತ್ತು? ನಿನ್ನ ಬಲದ ಮೇಲೆಯೇ ನಾವೆಲ್ಲರೂ ಅವಲಂಬಿಸಿರುವೆವು. ಇನ್ನು ಮುಂದೆ ನಾವು ಬಹಳ ಎಚ್ಚರಿಕೆಯಿಂದ ನಡೆದುಕೊಳ್ಳಬೇಕು" ಎಂದು ಹೇಳಿದನು. ಆ ನಂತರ ರಾಜಧರ್ಮಕ್ಕನುಸಾರವಾಗಿ ಸಾಮೋಪಚಾರಕ್ಕೆ ಯುವರಾಜನಾದ ಅಂಗದನನ್ನು ಕರೆಕಳುಹಿ "ಅಂಗದಾ, ನೀನು ಏನೊಂದು ಸಂಶಯವಿಲ್ಲದೆ ಲಂಕಾಪುರಿಯಲ್ಲಿ ಹೋಗಿ ಮೃತ್ಯು ಮುಖದಲ್ಲಿ ಬಿದ್ದಿರುವ ರಾವಣನಿಗೆ ನನ್ನ ಸಂದೇಶವನ್ನು ತಿಳಿಸು. "ರಾಕ್ಷಸಾಧಮನೇ, ನೀನು ಯಾವ ಬಲದ ಮೇಲೆ ಕಪಟದಿಂದ ಸೀತೆಯನ್ನು ಅಪಹರಿಸಿರುವಿಯೋ ಆ ಮಾಯಾ ಜಾಲವು ಇನ್ನು ಮುಂದೆ ನಡೆಯಲಾರದು. ಸಾಮೋಪಚಾರದಿಂದ ಸೀತೆಯನ್ನು ತಂದು ನಮಗೆ ಒಪ್ಪಿಸದಿದ್ದರೆ ನಿನ್ನನ್ನು ಕೊಂದು ನಿನ್ನ ತಮ್ಮನಾದ ಭಕ್ತಶ್ರೇಷ್ಠ ವಿಭೀಷಣನಿಗೆ ಪಟ್ಟಗಟ್ಟುವೆನು" ಎಂದು ತಿಳಿಸು.

ಎಂದು ಹೇಳಿದನು. ಆಗ ಅಂಗದನು ಅಲ್ಲಿಂದ ಹೊರಟು ರಾವಣನ ಸಭೆಗೆ ಬಂದನು.

ರಾವಣನು ತನ್ನ ಸಭೆಯಲ್ಲಿ ಮಂತ್ರಿಸಮೇತನಾಗಿ ಕುಳಿತಿದ್ದನು. ಆಗ ಅಂಗದನು ಅಲ್ಲಿಗೆ ಬಂದನು. ಆದರೆ ಅವನಿಗೆ ಯಾರೂ ಕೂಡ್ರಲು ಆಸನವನ್ನು ಕೊಟ್ಟು ಮರ್ಯಾದಿಸಲಿಲ್ಲ. ಕೂಡಲೆ



ಅಂಗದನು ರಾವಣನ ಸಭೆಗೆ ಶಿಷ್ಟಾಯಿಗೋಸ್ಕರ ಬಂದುದು

ಅವನು ತನ್ನ ಬಾಲದಿಂದಲೇ ಆಸನವನ್ನು ಸಿದ್ಧಪಡಿಸಿಕೊಂಡು ರಾವಣಾಸುರನ ಎದುರು ಕುಳಿತು, ಶ್ರೀರಾಮಚಂದ್ರನ ಸಂದೇಶವನ್ನು ಒಂದಕ್ಷರ ಬಿಡದೆ ಆತನಿಗೆ ತಿಳಿಸಿದನು. ಆದರೆ ಆ ಮದಾಂಧನಾದ ರಾವಣನಿಗೆ ಸದ್ಬುದ್ಧಿಯು ಹೇಗೆ ಬಂದೀತು ? ಅವನು ತನ್ನ ನಾಲ್ವರು ಸೇನಾಧಿಪತಿಗಳಿಗೆ ಅಂಗದನನ್ನು ಸೆರೆಹಿಡಿಯಲು ಆಜ್ಞಾಪಿಸಿದನು. ಆಗ ಅವರು ಅವನನ್ನು ಮುತ್ತಲುದ್ಯುಕ್ತರಾದರು. ಮುಂದೆ ಅಂಗದನು ಆ ನಾಲ್ವರೂ ರಾಕ್ಷಸರನ್ನು ತನ್ನೊಂದಿಗೇ ತಕ್ಕೊಂಡು ಗಗನಕ್ಕೆ ಹಾರಿದನು. ಆ ಸೇನಾಧಿಪತಿಗಳಾದ ರಾಕ್ಷಸರು ಅವನ ಹಾರುವಿಕೆಯಿಂದ ಹೆದರಿ ಅಂತರಿಕ್ಷದಿಂದ ನೆಲಕ್ಕುರುಳಿದರು. ಮುಂದೆ ಅಂಗದನು ರಾವಣನ ಅರಮನೆಯ ಗೋಪುರದ ಮೇಲೆ ಜಿಗಿದು ಅದನ್ನು ತನ್ನ ಕಾಲಿನಿಂದ ಬಲವಾಗಿ ಒದ್ದು ಕೈಯಿಂದ ಗುದ್ದಿ ಕೆಡವಿ ಮರಳಿ ತಾನಿದ್ದಲ್ಲಿಗೆ ಬಂದನು. ಆಗ ಎಲ್ಲ ಸೈನ್ಯವು ಜಯಘೋಷವನ್ನು ಮಾಡಿತು. ಅರಮನೆಯ ಶಿಖರವು ಮುರಿದು ಬಿದ್ದದ್ದನ್ನು ಕಂಡು ರಾವಣನಿಗೆ ಪರಮದುಃಖವಾಯಿತು.

ಮುಂದೆ ಶ್ರೀರಾಮಚಂದ್ರನ ಆಜ್ಞೆಯಂತೆ ಎಲ್ಲ ವಾನರ ಸರದಾರರು ತಮ್ಮ ತಮ್ಮ ಬಲವನ್ನು ಪ್ರಯೋಗಿಸಿ ದೊಡ್ಡ ದೊಡ್ಡ ವೃಕ್ಷ ಪಾಷಾಣಗಳನ್ನು ಹಿಡಿದುಕೊಂಡು ರಾಕ್ಷಸರ ಮೇಲೆ ಏರಿ ಹೋದರು. ಮತ್ತು ಅವರ ಕೋಟೆಯ ಗೋಪುರಗಳನ್ನು ನಾಶ ಮಾಡಿದರು. ಅದನ್ನು ಕಂಡು ರಾಕ್ಷಸರ ಎದೆಯಲ್ಲಿ ನಡುಗು ಹುಟ್ಟಿತು. ಕೋಟೆಯ ಸುತ್ತಲಿರುವ ಕಂದಕವನ್ನು ಮುಚ್ಚಿದರು. ಎತ್ತ ನೋಡಿದತ್ತ ವಾನರ ಸೈನ್ಯವೇ ಕಾಣಹತ್ತಿತು. ಮತ್ತು ಅವರೆಲ್ಲರೂ ಅತಿ ಪರಾಕ್ರಮಿಗಳಾದ ರಾಮ–ಲಕ್ಷ್ಮಣರಿಗೆ ಜಯವಾಗಲಿ! ಪ್ರಭು ರಾಮಚಂದ್ರನ ಸಮೇತವಾಗಿ ಸುಗ್ರೀವನಿಗೆ ಜಯವಾಗಲಿ !' ಎಂದು ಘೋಷವನ್ನು ಮಾಡುತ್ತ ಕೋಟೆಯಲ್ಲಿರುವ ರಾಕ್ಷಸರನ್ನು

ಹಣಿಯಹತ್ತಿದರು. ಕೋಟೆಯ ರಕ್ಷಕರಾಗಿದ್ದ ರಾಕ್ಷಸರು ಓಡಿ ಹೋಗಿ ಈ ಸಂಗತಿಯನ್ನು ರಾವಣನಿಗೆ ಅರುಹಿದರು. ಆಗ ರಾವಣನು ರಣಭೇರಿಯನ್ನು ಹೊಡಿಸಿ ತನ್ನ ಎಲ್ಲ ಸೈನ್ಯಕ್ಕೂ ವಾನರರ ಮೇಲೆ ಏರಿ ಹೋಗಲು ಅಪ್ಪಣೆಯಿತ್ತನು. ಆಗ ಅವರೆಲ್ಲರೂ ವಾನರರ ಮೇಲೆ ಹೋಗಿ ಅತಿ ಭಯಂಕರ ರೀತಿಯಿಂದ ಕಾದಾಡಹತ್ತಿದರು. ಅಲ್ಲಲ್ಲಿ ರಕ್ತದ ಕಾಲುವೆಗಳು ಹರಿಯತೊಡಗಿದವು.

ಇತ್ತ ಪೂರ್ವ ಪಶ್ಚಿಮ ದಕ್ಷಿಣದ ಬಾಗಿಲುಗಳಿಗೆ ನಿಂತಿರುವ ಇಂದ್ರಜಿತು–ಅಂಗದ; ಸುಗ್ರೀವ–ಪ್ರಹಸ್ತ; ನಿಕುಂಭ—ನೀಲ; ವಜ್ರಮುಷ್ಟಿ—ವೈಂದ ಇತ್ಯಾದಿ ವೀರರು ಘೋರತರವಾಗಿ ದ್ವಂದ್ವಯುದ್ಧವನ್ನು ಪ್ರಾರಂಭಿಸಿದರು. ಮತ್ತು ವಾನರರು ಎಷ್ಟೋ ಜನ ರಾಕ್ಷಸರನ್ನು ಯಮಸದನಕ್ಕೆ ಅಟ್ಟಿದರು. ಇಂತು ಹಗಲು ರಾತ್ರಿ ಎನ್ನದೆ ಮೂರು ದಿವಸಗಳ ವರೆಗೆ ರಣಕಂದನ ಯುದ್ಧವಾಯಿತು.

ತನ್ನ ರಾಕ್ಷಸ ಸೈನ್ಯವು ಸೋಲುವದನ್ನು ಧೂಮ್ರಾಕ್ಷನೆಂಬ ರಾಕ್ಷಸ ಸೇನಾನಿಯು ಕಂಡು ವಾನರ ಸೈನ್ಯದೊಡನೆ ಕಾದಹತ್ತಿದನು. ಆಗ ಅವನ ರಭಸಕ್ಕೆ ವಾನರರು ಬೆದರಿದರು. ತನ್ನ ವಾನರ ಸೈನ್ಯವು ಭೀತವಾದುದನ್ನು ಕಂಡು ಹನುಮಂತನು ಒಂದು ವಿಶಾಲವಾದ ಪರ್ವತವನ್ನು ತಂದು ಆ ರಾಕ್ಷಸನ ರಥದ ಮೇಲೆ ಅಪ್ಪಳಿಸಿದನು. ಕೂಡಲೆ ಅದು ಚುಕ್ಕರಿಸಿ ಮುರಿದು ಬಿದ್ದಿತು. ಅನಂತರ ಹನುಮಂತನು ಅವನನ್ನು ತನ್ನ ವಜ್ರಮುಷ್ಟಿಯಿಂದ ಗುದ್ದಿ ಕೊಂದನು. ಈ ಸುದ್ದಿಯು ರಾವಣನಿಗೆ ತಿಳಿಯಿತು. ಅವನು ವಜ್ರದಂಷ್ಟ್ರ ಎಂಬ ಅಸುರನನ್ನು ವಾನರ ಮೇಲೆ ಕಳುಹಿದನು. ಅವನೂ ಅದೇ ಗತಿಯನ್ನು ಹೊಂದಿದನು. ಹೀಗೆ ತಮ್ಮ ಸೈನ್ಯವು ಪಟಪಟನೆ ಬಿದ್ದು ನಾಶಹೊಂದುತ್ತಿರುವದನ್ನು ಕೇಳಿ ರಾವಣನು ಚಿಂತಾಕ್ರಾಂತನಾದನು,

ಆಗ ಇಂದ್ರಜಿತುವು ಮುಂದೆ ಬಂದು— “ತಾತಾ, ನೀವು ಏನೊಂದನ್ನೂ ಚಿಂತಿಸಬೇಡಿರಿ. ನಾನು ಶತ್ರುಗಳನ್ನು ಕೊಂದುಬರುವೆನು” ಎಂದು ನುಡಿದನು. ಬಳಿಕ ಇಂದ್ರಜಿತುವು ನಿಕುಂಭಲೆಯಲ್ಲಿ ಹೋಗಿ ಒಂದು ಗುಪ್ತ ಸ್ಥಳದಲ್ಲಿ ಕುಳಿತು ಯಜ್ಞವನ್ನು ಮಾಡಿದನೆಂದರೆ ಅವನಿಗೆ ಅಕ್ಷಯ ರಥವು ಪ್ರಾಪ್ತವಾಗುತ್ತಿತ್ತು. ಆ ರಥದಲ್ಲಿ ಕುಳಿತು ಆತನು ಯುದ್ಧಕ್ಕೆ ಬಂದನೆಂದರೆ ಅವನಲ್ಲಿ ಅದೃಶ್ಯನಾಗುವ ಶಕ್ತಿ ಬರುತ್ತಿತ್ತು. ಆಗ ಅವನನ್ನು ಸೋಲಿಸುವದು ಅಶಕ್ಯವಾಗುತ್ತಿತ್ತು. ಇಂದ್ರಜಿತುವು ಈ ರೀತಿ ಯಜ್ಞ ಮಾಡಿ ಅಕ್ಷಯ ರಥವನ್ನು ಪಡೆದುಕೊಂಡು ರಣರಂಗಕ್ಕೆ ಬಂದನು

ಇಂದ್ರಜಿತುವು ಬಂದುದನ್ನು ಕಂಡು ಎಲ್ಲ ವಾನರರು ಒಳ್ಳೇ ಸಂತಾಪದಿಂದ ಘನಘೋರವಾಗಿ ಕಾದಹತ್ತಿದರು. ಮುಂದೆ ಇಂದ್ರಜಿತುವು ಅಂಗದನ ಮೇಲೆ ಏರಿ ಬರಲು ಅಂಗದನು ಆತನ ರಥವನ್ನು ಮುರಿದೊಗೆದನು. ಅವರು ಯುದ್ಧ ಮಾಡುತ್ತಿರಲು ಇತ್ತ ರಾಮ—ಲಕ್ಷ್ಮಣರು ತಮ್ಮ ಅಮೋಘವಾದ ದಿವ್ಯ ಬಾಣಗಳಿಂದ ಎಷ್ಟೋ ಜನ ರಾಕ್ಷಸರನ್ನು ಯಮಸದನಕ್ಕಟ್ಟಿದರು. ಅವರು ಅಂದು ರಾತ್ರಿಯಲ್ಲಿಯೂ ಕೂಡ ಅದೇ ರೀತಿಯಾಗಿ ಕಾದಿದರು. ಅಂದಿನ ರಾತ್ರಿಯೆಂದರೆ ಕಾಲರಾತ್ರಿಯಂತೆ ಭಾಸವಾಗಹತ್ತಿತು. ಅದನ್ನು ಕಂಡು ಇಂದ್ರಜಿತುವು ಹೀಗಾದರೆ ತಮ್ಮ ಸೈನ್ಯದ ಅವಸ್ಥೆಯು ಸರಿಹೋಗಲಾರದೆಂಮ ತಿಳಿದು ಕೂಡಲೆ ಆಕಾಶದಲ್ಲಿ ಅದೃಶ್ಯನಾಗಿ ತನ್ನ ಅಸಂಖ್ಯವಾದ ಬಾಣಗಳಿಂದ ರಾಮ—ಲಕ್ಷ್ಮಣರನ್ನು ಮೂರ್ಛೆಗೊಳಿಸಿದನು.

ರಾಮ—ಲಕ್ಷ್ಮಣರು ರಣಭೂಮಿಯಲ್ಲಿ ಬಿದ್ದದ್ದನ್ನು ಕಂಡು ಇಂದ್ರಜಿತುವು ಉತ್ಸಾಹದಿಂದ ಜಯಘೋಷ ಮಾಡುತ್ತ ಲಂಕೆಗೆ

ಬಂದನು. ಇತ್ತ ವಾನರ ಸೈನ್ಯವೆಲ್ಲವೂ ರಾಮಲಕ್ಷ್ಮಣರ ಸುತ್ತು ಮುತ್ತು ದುಃಖಿಸುತ್ತ ಕುಳಿತಿತು. ಕೂಡಲೆ ವಿಭೀಷಣನು ಅಲ್ಲಿಗೆ ಬಂದನು. ಅದರಂತೆ ಸುಗ್ರೀವ, ಹನಮಂತ, ನಲ, ನೀಲ, ಅಂಗದ, ಸುಷೇಣ, ಜಾಂಬುವಂತ ಮೊದಲಾದ ಎಲ್ಲ ಸರದಾರರೂ ಅಲ್ಲಿಗೆ ಬಂದರು. ರಾಮ—ಲಕ್ಷ್ಮಣರ ಈ ಅವಸ್ಥೆಯನ್ನು ಕಂಡು ಎಲ್ಲರೂ ವ್ಯಸನಾಕ್ರಾಂತರಾದರು.

ಇತ್ತ ರಾವಣನು ತ್ರಿಜಟಾ ರಾಕ್ಷಸಿಯನ್ನು ಕರೆಕಳುಹಿ ಸೀತೆಯನ್ನು ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿಕೊಂಡು ರಣರಂಗಕ್ಕೆ ಕರೆತರಲು ಕಳುಹಿದನು. ಮತ್ತು ರಾಮ—ಲಕ್ಷ್ಮಣರು ಮರಣಹೊಂದಿದರೆಂದು ಲಂಕೆಯಲ್ಲಿ ಡಂಗುರ ಹೊಡೆಯಿಸಿದನು. ರಣಭೂಮಿಗೆ ಬಂದ ಸೀತಾಮಾತೆಯು ರಾಮ—ಲಕ್ಷ್ಮಣರನ್ನು ಕಂಡು ಅತಿಶಯ ದುಃಖದಿಂದ— “ ಹಾ ! ಕೈಕೇಯೀ, ನೀನು ಕಲಹವನ್ನು ಹೂಡಿ ಎಲ್ಲ ಕುಲವನ್ನೇ ನಾಶ ಮಾಡಿದೆ ! ಹಿಂದಕ್ಕೆ ಜೋತಿರ್ವಿದನೊಬ್ಬನು “ ನೀನು ಪುತ್ರವತಿಯಾಗಿ ಸೌಭಾಗ್ಯದಿಂದ ಮರಣ ಹೊಂದುವಿ. ” ಎಂದು ನನಗೆ ಹೇಳಿದ ಭವಿಷ್ಯವಾಣಿಯು ಇಂದು ಅಸತ್ಯವಾಯಿತೇ?” ಎಂದು ದುಃಖಿಸುತ್ತ ಮೂರ್ಛಿತಳಾದಳು. ಆಗ ತ್ರಿಜಟೆಯು ಅವಳನ್ನು ಸಮಾಧಾನಗೊಳಿಸುತ್ತ— “ ರಾಮ—ಲಕ್ಷ್ಮಣರು ಮೂರ್ಛೆ ಹೊಂದಿರುವರು. ನೀನು ಚಿಂತಿಸಬೇಡ ” ಎಂದು ಹೇಳಿ ಮರಳಿ ಆಕೆಯನ್ನು ಅಶೋಕ ವನಕ್ಕೆ ಕರೆದುಕೊಂಡು ಹೋದಳು.

ಇತ್ತ ರಾಮ—ಲಕ್ಷ್ಮಣರು ಮೂರ್ಛೆತಿಳಿದೆದ್ದರು. ಅದನ್ನು ಕಂಡು ವಾನರ ಸೈನ್ಯವೆಲ್ಲವೂ ಆನಂದದಿಂದ ಜಯಘೋಷ ಮಾಡುತ್ತ ಮತ್ತೆ ಯುದ್ಧಕ್ಕೆ ಸಿದ್ಧರಾಗಿ ಹೊರಟರು. ಅದನ್ನು ಕಂಡು ರಾವಣನು ಚಿಂತಾತುರನಾದನು. ಮತ್ತು ತಾನೇ ಯುದ್ಧಕ್ಕೆ ಸಿದ್ಧನಾಗಿ ರಣಭೂಮಿಗೆ ಬಂದನು. ಆಗ ವಿಭೀಷಣನು : “ ರಾಮಚಂದ್ರಾ,

ಇಂದು ರಾವಣನೇ ಸ್ವತಃ ಯುದ್ಧಕ್ಕೆ ಬಂದಿರುವನು.'' ಎಂದು ಹೇಳಿದನು. ಅದನ್ನು ಕೇಳಿ ಸುಗ್ರೀವನು ವೀರಾವೇಶದಿಂದ ಒಂದು ಪರ್ವತವನ್ನೆತ್ತಿಕೊಂಡು ರಾವಣನ ಮೇಲೆ ಏರಿ ಹೋದನು. ಕೂಡಲೆ ರಾವಣನು ಆ ಪರ್ವತವನ್ನು ತುಂಡುತುಂಡಾಗಿ ಮಾಡಿ ಖಂಡಿಸಿದನು. ಮತ್ತು ತನ್ನ ಅಸಂಖ್ಯವಾದ ಬಾಣಗಳಿಂದ ಸುಗ್ರೀವನನ್ನು ಮುಚ್ಚಿ ಆತನನ್ನು ಮೂರ್ಛೆಗೊಳಿಸಿದನು. ಸುಗ್ರೀವನು ಎಚ್ಚರದಪ್ಪಿ ಬೀಳಲು ಲಕ್ಷ್ಮಣನು ರಾವಣನ ಮೇಲೆ ಏರಿಹೋಗಿ ಒಂದೇಸವನೇ ಬಾಣಗಳ ಸುರಿಮಳೆಯನ್ನೇ ಸುರಿಸಿದನು. ಆತನ ಅಮೋಘವಾದ ಬಾಣಗಳ ಹೊಡೆತಗಳನ್ನು ತಾಳಲಾರದೇ ರಾವಣನು ತನ್ನ ಬ್ರಹ್ಮಶಕ್ತಿಯನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು. ಆ ಶಕ್ತಿಯನ್ನು ಸಹ ಲಕ್ಷ್ಮಣನು ಛೇದಿಸಿದನು. ಆದರೆ ಅದರ ಒಂದು ಕಣ ಮಾತ್ರ ಲಕ್ಷ್ಮಣನ ಎದೆಯಲ್ಲಿ ನಟ್ಟು ಪಾರಾಯಿತು. ಆಗ ಲಕ್ಷ್ಮಣನು ನಿಸ್ತೇಜವುಳ್ಳವನಾಗಿ ಭೂಮಿಗೊರಗಿದನು. ಅದನ್ನು ಕಂಡು ಶ್ರೀರಾಮಚಂದ್ರನು ರಾವಣನ ಮೇಲೆ ಏರಿಹೋಗಿ ಅವನನ್ನು ಓಡಿಸಿದನು.

ಮುಂದೆ ರಾಮಚಂದ್ರನು ಲಕ್ಷ್ಮಣನ ಬಳಿಗೆ ಬಂದು ಆತನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಅತಿದುಃಖದಿಂದ ''ಲಕ್ಷ್ಮಣಾ, ಇದು ವರೆಗೆ ನನ್ನನ್ನು ಹಿಂಬಾಲಿಸಿ ಇಂದು ನನ್ನೊಬ್ಬನನ್ನೇ ಬಿಟ್ಟು ಹೊರಟು ಹೋದೆಯಾ ? ಇನ್ನು ನಾನು ಅಯೋಧ್ಯೆಗೆ ಹೋಗಿ ಸುಮಿತ್ರಾಮಾತೆಗೆ ಏನೆಂದುಸುರಲಿ ? ಇನ್ನು ಸೀತೆಗಾದರೂ ನಾನು ಕಾದುವದೇತಕ್ಕೆ ? ಛಿಡೆ. ನಾನೂ ನಿನ್ನ ಸಂಗಡ ಬರುವೆನು'' ಎಂದು ಪರಿಪರಿಯಾಗಿ ಶೋಕಿಸಿದನು! ಅಷ್ಟರಲ್ಲಿ ಸುಷೇಣನು ಮುಂದೆ ''ಮಹಾರಾಜಾ, ಚಿಂತಿಸಬೇಡ ಇವನು ಮರಣಹೊಂದಿರುವದಿಲ್ಲ. ಪ್ರಬಲವಾದ ಮೂರ್ಛೆಯಲ್ಲಿರುವನು. ಇವನ ವಿಸ್ಮೃತಿ ನಿವಾರಣೆಗಾಗಿ ದ್ರೋಣಗಿರಿಯಲ್ಲಿರುವ ಸಂಜೀವನಿಯನ್ನು ತಂದುಕೊಟ್ಟರೆ

ಈತನನ್ನು ಈಗಲೇ ಮೂರ್ಛೆಯಿಂದೆಚ್ಚರಿಸುವೆನು. ಆ ಮಾತನ್ನು ಕೇಳಿ ಹನುಮಂತನು ಮುಂದೆ ಬಂದು ಸುಷೇಣನು ಹೇಳಿದ ಸಂಜೀವನಿಯನ್ನು ತರಲು ಆ ಕೂಡಲೇ ದ್ರೋಣಾಚಲಕ್ಕೆ ಹಾರಿದನು.

ಆದರೆ ಆ ದ್ರೋಣಗಿರಿಯಲ್ಲಿ ಸಂಜೀವನಿಯು ಆತನಿಗೆ ದೊರಕಲಿಲ್ಲ. ಆದ್ದರಿಂದ ಅವನು ಇಡೀ ದ್ರೋಣಾಚಲವನ್ನೇ ಕಿತ್ತಿ




ಹನುಮನು ದ್ರೋಣಗಿರಿಯನ್ನು ತಂದುದು.

ತನ್ನ ಹಸ್ತದಲ್ಲಿಟ್ಟುಕೊಂಡು ಲಂಕೆಗೆ ತಂದನು. ಅದನ್ನು ಕಂಡು ಎಲ್ಲರೂ ಹನುಮಂತನನ್ನು ಹೊಗಳಿದರು. ಕೂಡಲೇ ಸುಷೇಣನು ಅದರಲ್ಲಿರುವ ಸಂಜೀವನಿಯನ್ನು ತೆಗೆದುಕೊಂಡು ಲಕ್ಷ್ಮಣನ ಅಂಗಾಂಗಗಳಿಗೆಲ್ಲ ಪೂಸಿ ಮೂಗಿಗೆ ಅದರ ವಾಸನೆಯನ್ನು ಹಿಡಿದನು ಕೂಡಲೇ ಲಕ್ಷ್ಮಣನು ನಿದ್ರೆಯಿಂದ ಎಚ್ಚತ್ತವನಂತೆ ಎದ್ದು ಕುಳಿತು "ಎಲ್ಲಿರುವನು ಆ ದುಷ್ಟನಾದ ರಾವಣನು ? ಧನುಷ್ಯಬಾಣಗಳನ್ನು ಕೊಡಿರಿ. ಈಗಲೇ ಆತನನ್ನು ಸಂಹರಿಸುವೆನು" ಎಂದು ಆರ್ಭಟಿಸ ಹತ್ತಿದನು. ಆಗ ರಾಮಚಂದ್ರನು ಲಕ್ಷ್ಮಣನನ್ನು ಬಿಗಿದಪ್ಪಿ "ಲಕ್ಷ್ಮಣಾ, ಇಂದು ನೀನು ಹನುಮಂತನ ಪ್ರಯತ್ನದಿಂದಲೂ, ಸುಷೇಣನ ಕೃಪೆಯಿಂದಲೂ ಮರಳಿ ಈ ಲೋಕದಲ್ಲಿ ಬಂದಿರುವೆ. ನೀನಿಲ್ಲದಿದ್ದರೆ ನಾನು ಸೀತೆಯನ್ನು ಸಹ ಬಿಡಿಸುತ್ತಿರಲಿಲ್ಲ. ಎಂದು ಆತನನ್ನು ಸಮಾಧಾನಗೊಳಿಸಿದನು. ಮುಂದೆ ಅವರೆಲ್ಲರೂ ಪುನಃ ವೀರಾವೇಶದಿಂದ ಯುದ್ಧಕ್ಕೆ ಸನ್ನದ್ಧರಾದರು.

ಇತ್ತ ರಾವಣನು ಸೋತು ಬಂದಂದಿನಿಂದ ಸೊಗಸುಗಾಣದೆ ಚಿಂತಾಮಗ್ನನಾದನು. ಆತನಿಗೆ ಎಲ್ಲಿ ನೋಡಿದರೂ ರಾಮ–ಲಕ್ಷ್ಮಣರೇ ಕಾಣಹತ್ತಿದರು. ಅಹರ್ನಿಶವೂ ಆತನಿಗೆ ನಿದ್ರೆ ಬಾರದಂತಾಯಿತು. ಹೀಗಿರುತ್ತಿರುವಾಗ ಆತನ ತಮ್ಮ ಕುಂಭಕರ್ಣನೂ, ಮಗ ಇಂದ್ರಜಿತುವೂ ಮುಂದೆ ಬಂದು "ನೀವು ಚಿಂತಿಸಬೇಡಿರಿ. ನಾವು ಶತ್ರುಗಳನ್ನು ಈಗಲೇ ಸಂಹರಿಸುವೆವು" ಎಂದು ಹೇಳಿ ಯುದ್ಧಕ್ಕೆ ಹೊರಟರು. ರಣರಂಗಕ್ಕೆ ಆರ್ಭಟೆಯಿಂದ ಬರುತ್ತಿರುವ ಕುಂಭಕರ್ಣನನ್ನು ವಿಭೀಷಣನು ಕಂಡು ಶ್ರೀರಾಮಚಂದ್ರನಿಗೆ ಆತನನ್ನು ತೋರಿಸಿದನು. ಆಗ ಎಲ್ಲ ವಾನರರು ಕುಂಭಕರ್ಣನಮೇಲೆ ಏರಿಹೋಗಿ ಮುತ್ತಿದರು. ಕೂಡಲೆ ಅವನು ಆ ವಾನರರನ್ನು ತನ್ನ ಬಗಲಲ್ಲಿ ಹಿಡಿದು ಹಿಚುಕಿ ಬಾಯಲ್ಲಿ ಒಗೆದು

ಕೊಳ್ಳುತ್ತಿದ್ದನು. ಮುಂದೆ ಅವರೆಲ್ಲರೂ ಮೂಗಿನಿಂದ ಹೊರಬಿದ್ದು ಓಡುತ್ತಿದ್ದರು. ಅದನ್ನು ಕಂಡು ಶ್ರೀರಾಮಚಂದ್ರನು ತನ್ನ ವಾಯುವ್ಯಾಸ್ತ್ರದಿಂದ ಕುಂಭಕರ್ಣನ ಬಾಹುಗಳನ್ನೂ ಮತ್ತು ಬ್ರಹ್ಮಾಸ್ತ್ರದಿಂದ ಆತನ ಶಿರಸ್ಸನ್ನೂ ಛೇಧಿಸಿ ಆತನನ್ನು ನೆಲಕ್ಕುರುಳಿಸಿದನು. ಈ ರೀತಿ ಕುಂಭಕರ್ಣನು ಮರಣಹೊಂದಿದನು. ಮುಂದೆ ಇಂದ್ರಜಿತುವು ರಥದಲ್ಲಿ ಕುಳಿತು ಯುದ್ಧಕ್ಕೆ ಬಂದನು. ಅವನು ತನ್ನ ನಾಗಾಸ್ತ್ರದಿಂದ ರಾಮ-ಲಕ್ಷ್ಮಣರನ್ನು ಬಿಗಿದು ಕಟ್ಟಿದನು. ಅಷ್ಟರಲ್ಲಿ ವಾಯುವು ರಾಮ-ಲಕ್ಷ್ಮಣರ ಕಿವಿಯಲ್ಲಿ ಗರುಡ ಮಂತ್ರವನ್ನು ಜಪಿಸಲು ಸೂಚಿಸಿದನು. ಅದರಂತೆ ಅವರು ಆ ಮಂತ್ರವನ್ನು ಜಪಿಸಲು ಗರುಡನು ಅಲ್ಲಿಗೆ ಬಂದು ಅವರನ್ನು ನಾಗಪಾಶದಿಂದ ಬಂಧಮುಕ್ತರನ್ನಾಗಿ ಮಾಡಿದನು. ರಾಮ-ಲಕ್ಷ್ಮಣರು ಅತಿ ಭಯಂಕರವಾದ ಯುದ್ಧವನ್ನು ಮಾಡುತ್ತಿರುವಾಗಲೇ ಅಂಗದನು ಇಂದ್ರಜಿತುವಿನ ರಥವನ್ನು ಮುರಿದೊಗೆದನು. ಆಗ ಇಂದ್ರಜಿತುವು ಮೊದಲಿನಂತೆ ಆಕಾಶದಲ್ಲಿ ಮಾಯವಾಗಿ ಯುದ್ಧಮಾಡುತ್ತಿರುವದನ್ನು ಕಂಡು ರಾಮನಿಗೆ ಕುಬೇರನು ಮಂತ್ರಪೂರಿತವಾದ ಜಲವನ್ನು ತನ್ನ ದೂತನ ಸಂಗಡ ಕಳುಹಿಸಿದನು. ಶ್ರೀರಾಮಚಂದ್ರನು ಅದನ್ನು ಸ್ವೀಕರಿಸಿದನು. ಆ ಜಲವನ್ನು ಕಣ್ಣಿಗೆ ಹಚ್ಚಿದರೆ ದಿವ್ಯದೃಷ್ಟಿಯು ಪ್ರಾಪ್ತವಾಗುವದೆಂದು ದೂತನು ಹೇಳಿದನು. ಅದರಂತೆ ಅವರು ಮಾಡಲು ಅವರಿಗೆ ದಿವ್ಯದೃಷ್ಟಿಯು ಪ್ರಾಪ್ತವಾಗಿ ಅದೃಶ್ಯನಾದ ಇಂದ್ರಜಿತುವು ಕಾಣಹತ್ತಿದನು. ಆಗ ಲಕ್ಷ್ಮಣನು ತನ್ನ ರಾಮನಾಮಾಂಕಿತವಾದ ದಿವ್ಯಬಾಣದಿಂದ ಇಂದ್ರಜಿತುವನ್ನು ಸಂಹರಿಸಿದನು.

ಇತ್ತ ರಾವಣನು ತನ್ನ ಸಭೆಯಲ್ಲಿ ಚಿಂತಾಕ್ರಾಂತನಾಗಿ ಕುಳಿತಿರುವಾಗ ರಣಭೂಮಿಯಿಂದ ಬಂದ ದೂತನ ಮುಖದಿಂದ ಕುಂಭಕರ್ಣ, ಇಂದ್ರಜಿತು ಮತ್ತು ತನ್ನ ನಾಲ್ವರು ಮಕ್ಕಳ ಮರಣವಾರ್ತೆ

ಯನ್ನು ಕೇಳಿ ಅತಿ ಆಕ್ರೋಶ ಮಾಡಹತ್ತಿದನು. ಕೊನೆಗೆ ಆತನು ತನ್ನ ಶೋಕವನ್ನಾವರಿಸಿಕೊಂಡು ವಿದ್ಯುಜ್ಜಿಹ್ವನೆಂಬ ಮಂತ್ರಿಯನ್ನು ಕರೆಕಳುಹಿ— "ಇನ್ನು ರಾಮ-ಲಕ್ಷ್ಮಣರನ್ನು ಕೊಲ್ಲುವ ಬಗೆ ಹೇಗೆ?" ಎಂದು ವಿಚಾರಿಸಹತ್ತಿದನು. ಅವನು "ಪಾತಾಳದಲ್ಲಿ ಇರುವ ಅಹಿರಾವಣ—ಮಹಿರಾವಣರನ್ನು ಕರೆಕಳುಹಿದರೆ ಅವರು ರಾಮ—ಲಕ್ಷ್ಮಣರನ್ನು ಹಿಡಿದುಕೊಂಡು ಹೋಗಿ ಕಾಳಿಕಾದೇವಿಗೆ ಬಲಿ ಕೊಡುವರು." ಎಂದು ಹೇಳಿದನು. ಆ ಮಾತು ಕೇಳಿ ರಾವಣನಿಗೆ ಪರಮಾನಂದವಾಯಿತು. ಕೂಡಲೆ ಅವನು ಅಹಿರಾವಣ-ಮಹಿರಾವಣರನ್ನು ಕರೆಯಿಸಿ ಎಲ್ಲ ಸಂಗತಿಗಳನ್ನು ಅವರಿಗೆ ಅರುಹಿದನು. ಆಗ ಅವರು: "ಮಹಾರಾಜರೇ, ನೀವು ಚಿಂತಿಸಬೇಡಿರಿ. ನಾವು ಇಂದು ರಾಮ-ಲಕ್ಷ್ಮಣರನ್ನು ತೆಗೆದುಕೊಂಡು ಹೋಗಿ ಕಾಲಿಕಾ ಮಾತೆಗೆ ಬಲಿಯಾಗಿ ಅರ್ಪಿಸುವೆವು." ಎಂದು ಹೇಳಿದರು. ಈ ಸಂಗತಿಯು ಗುಪ್ತಚಾರರಿಂದ ವಿಭೀಷಣನಿಗೆ ತಿಳಿಯಿತು. ಆಗ ವಿಭೀಷಣನು ಇದನ್ನು ಎಲ್ಲರಿಗೂ ಹೇಳಿ "ಇಂದು ರಾಮ-ಲಕ್ಷ್ಮಣರನ್ನು ಚನ್ನಾಗಿ ರಕ್ಷಿಸಬೇಕು" ಎಂದು ಆಜ್ಞೆ ಕೊಟ್ಟನು. ಕೂಡಲೆ ಅವರೆಲ್ಲರೂ ರಾಮ ಲಕ್ಷ್ಮಣರ ಸುತ್ತಲೂ ತಮ್ಮ ಬಾಲದಿಂದ ಕೋಟೆಯನ್ನು ಕಟ್ಟಿ ರಾಮಗುಣಗಾನವನ್ನು ಮಾಡುತ್ತ ಅಂದಿನ ರಾತ್ರಿಯನ್ನೆಲ್ಲ ಕಳೆದರು. ಆದರೆ ಅಂದು ಕೃಷ್ಣಪಕ್ಷದ ರಾತ್ರಿ ಇದ್ದುದರಿಂದ ಕರಾಳ ಕತ್ತಲೆಯು ಎಲ್ಲ ಕಡೆಯಲ್ಲಿಯೂ ಪಸರಿಸಿದ್ದಿತು. ರಾತ್ರಿ ಅಹಿರಾವಣ-ಮಹಿರಾವಣರು ರಾಮನ ಶಿಬಿರಕ್ಕೆ ಬಂದೇ ಬಿಟ್ಟರು. ಕಗ್ಗತ್ತಲಿದ್ದುದರಿಂದ ಅವರು ಅಲ್ಲಿಗೆ ಬಂದುದು ಆರಿಗೂ ತಿಳಿಯಲಿಲ್ಲ. ಅವರು ಅಲ್ಲಿ ಬಂದಕೂಡಲೇ ತಮ್ಮ ತೀಕ್ಷ್ಣವಾದ ಖಡ್ಗದಿಂದ ಕಪಿಲಾಂಗೂಲಗಳಿಂದ ರಚಿತವಾದ ಅಭೇದ್ಯವಾದ ಕೋಟೆಯನ್ನು ಭೇದಿಸಲು ಹೋದರು. ಆದರೆ ಅದು ಸಾಧ್ಯವಾಗ

ಲಿಲ್ಲ. ಆಗ ಅವರು ಆಕಾಶಕ್ಕೆ ಹಾರಿ ರಾಮ—ಲಕ್ಷ್ಮಣರು ಮಲಗಿರುವ ಸ್ಥಳಕ್ಕೆ ಬಂದಿಳಿದು ಅವರನ್ನು ಮೋಹಜಾಲದಿಂದ ಬಿಗಿದು ಅಲ್ಲಿಯೇ ಒಂದು ಭೂಮಾರ್ಗವನ್ನು ಸಿದ್ಧಗೊಳಿಸಿ ಆ ಮಾರ್ಗವಾಗಿ ರಾಮ-ಲಕ್ಷ್ಮಣರನ್ನು ತೆಗೆದುಕೊಂಡು ಪಾತಾಳಕ್ಕೆ ಹೋದರು.

ಇತ್ತ ಬೆಳಗಾಗಲು ಶಿಬಿರದಲ್ಲಿ ರಾಮ-ಲಕ್ಷ್ಮಣರು ಕಣ್ಮರೆಯಾದುದರಿಂದ ಸೈನ್ಯದಲ್ಲೆಲ್ಲ ಹಾ ! ಹಾ ! ಕಾರವೆದ್ದಿತು. ಆಗ ಹನುಮಂತನು ಮುಂದೆ ಬಂದು : “ ನೀವು ಚಿಂತಿಸಬೇಡಿರಿ. ರಾಮ ಲಕ್ಷ್ಮಣರನ್ನು ಪಾತಾಳದಲ್ಲಿಟ್ಟಿದ್ದರೂ ಕೂಡ ನಾನು ಹುಡುಕಿಕೊಂಡು ಬರುವೆನು ” ಎಂದು ಅಭಯವಚನವನ್ನಿತ್ತನು. ಮತ್ತು ನಲ, ನೀಲ, ಅಂಗದ, ಜಾಂಬುವಂತ ಇವರನ್ನು ಸಂಗಡ ಕರೆದುಕೊಂಡು ಅಲ್ಲಿ ಕಾಣುತ್ತಿರುವ ಸುರಂಗಮಾರ್ಗವಾಗಿ ಹೊರಟನು. ಆ ಮಾರ್ಗದಲ್ಲಿ ವಾಯುಸಂಚಲನವಿಲ್ಲದ್ದರಿಂದ ಈ ನಾಲ್ವರು ಬಹಳ ಕಳವಳಿಸತೊಡಗಿದರು. ಆಗ ಹನುಮಂತನು ಅವರನ್ನು ತನ್ನ ಬಾಲದಿಂದ ಕಟ್ಟಿಕೊಂಡು ತಡಮಾಡದೆ ಪಾತಾಳಲೋಕಕ್ಕೆ ಬಂದು ತಲುಪಿದನು. ಅಲ್ಲಿ ಅವನಿಗೆ ಮಕರಧ್ವಜನೆಂಬ ಸೇನಾಪತಿಯು ತನ್ನ ಇಪ್ಪತ್ತು ಕೋಟಿ ರಾಕ್ಷಸರನ್ನು ಕೂಡಿಕೊಂಡು ಎದುರಾದನು. ಆಗ ಹನುಮಂತನು : “ ನಾವು ಯಾತ್ರಿಕರು. ಮಹಿಕಾವತಿ ಪಟ್ಟಣಕ್ಕೆ ಹೋಗಬೇಕಾಗಿದೆ. ನಮಗೆ ಮಾರ್ಗ ಪ್ರತಿಬಂಧ ಮಾಡಬಾರದು. ” ಎಂದು ಹೇಳಿದನು. ಆ ಮಾತನ್ನು ಅವರು ಕೇಳದೇ ಈ ನಾಲ್ವರೊಡನೆ ಯುದ್ಧಕ್ಕೆ ಸಿದ್ಧರಾದರು. ಕೂಡಲೇ ಹನುಮಂತನು ಒಂದು ಕ್ಷಣದಲ್ಲಿಯೇ ಆ ಎಲ್ಲ ರಾಕ್ಷಸರನ್ನು ನಾಶಗೊಳಿಸಿದನು. ಅದನ್ನು ಕಂಡು ಮಕರಧ್ವಜನು ಹನುಮಂತನೊಡನೆ ಮಲ್ಲಯುದ್ಧವನ್ನು ಪ್ರಾರಂಭಿಸಿದನು. ಆಗ ಹನುಮಂತನು : “ ಇನ್ನು ನಿನ್ನನ್ನು ಕಾಪಾಡುವವರಾರು ? ” ಎಂದು ಕೇಳಿದನು. ಹನುಮಂತನು ಆ

ಮಾತನ್ನು ಕೇಳಿ ಮಕರಧ್ವಜನು "ನನ್ನ ಪ್ರಿಯ ತಂದೆಯಾದ ಹನುಮಂತನೇ ನನ್ನನ್ನು ಕಾಪಾಡುವನು." ಎಂದನು. ಮಕರಧ್ವಜನಾಡಿದ ಮಾತನ್ನು ಕೇಳಿ ಹನುಮಂತನಲ್ಲಿ ಬಲವಾದ ಸಂಶಯವುಂಟಾಗಿ ಆ ಮಕರಧ್ವಜನಿಗೆ— "ಹನುಮಂತನು ಬ್ರಹ್ಮಚಾರಿಯು. ಅವನಿಗೆ ಮಗನು ಹೇಗೆ ಜನಿಸಿದನು?" ಎಂದು ಕೇಳಿದನು. ಆಗ ಮಕರಧ್ವಜನು "ಹನುಮಂತನು ಲಂಕೆಯನ್ನು ಸುಟ್ಟು ತನ್ನ ಬಾಲವನ್ನು ನಂದಿಸಲು ಸಮುದ್ರಕ್ಕೆ ಬಂದನು. ಆಗ್ಗೆ ಅವನು ತನ್ನ ಮೈಮೇಲಿನ ಬೆವರನ್ನು ಕೈಯಿಂದ ಮಿಡಿದು ಸಮುದ್ರದಲ್ಲಿ ಬಿಸುಟಿದನು. ಅದನ್ನು ಒಂದು ಮೊಸಳೆಯು ನುಂಗಿದ್ದರಿಂದ ಆ ನಕ್ರೋದರದಿಂದ ನಾನು ಜನಿಸಿದೆನು. ಅಂತೆಯೇ ಅವನು ನನ್ನ ತಂದೆಯಾಗಿರುವನು" ಎಂದು ಹೇಳಿದನು. ಆ ಮಾತನ್ನು ಕೇಳಿ "ನಾನೇ ಹನುಮಂತನು" ಎಂದು ಹೇಳಿದನು. ಆಗ ಮಕರಧ್ವಜನು ಆತನಿಗೆ ಸಾಷ್ಟಾಂಗವೆರಗಿ ಮಹಿಕಾವತಿ ಪಟ್ಟಣಕ್ಕೆ ಕಳುಹಿದನು.

ಹನುಮಂತನು ಕಾಲಿಕಾ ಮಾತೆಯ ಮಂದಿರವನ್ನು ಪ್ರವೇಶಿಸಿ ಗರ್ಭಗುಡಿಯಲ್ಲಿ ಕುಳಿತು ಬಾಗಿಲವನ್ನು ಭದ್ರವಾಗಿ ಇಕ್ಕಿಕೊಂಡನು. ಆನಂತರ ದೇವಿಯ ಆರಾಧನೆಗಾಗಿ ಪೂಜೆಯ ಸಾಹಿತ್ಯಗಳನ್ನುಹಿಡಿದುಕೊಂಡು ಅಹಿರಾವಣ-ಮಹಿರಾವಣರು ಆ ಮಂದಿರಕ್ಕೆ ಬರಲು ಗರ್ಭಗುಡಿಯ ಬಾಗಿಲವು ಭದ್ರವಾದದ್ದನ್ನು ಕಂಡು "ದೇವಿಯು ಕೋಪಗೊಂಡಿರಬಹುದು" ಎಂದವರು ಅವಳನ್ನು ಪ್ರಾರ್ಥಿಸತೊಡಗಿದರು. ಆಗ ಹನುಮಂತನು ಒಳಗಿನಿಂದಲೇ "ಭಕ್ತಶ್ರೇಷ್ಠರೇ, ನೀವು ರಾಮಚಂದ್ರನನ್ನು ಬಲಿಕೊಡಲು ತಂದದುಕ್ಕೆ ನನಗೆ ಬಹಳೇ ಸಂತೋಷವಾಗಿದೆ. ನಾನು ಲಂಕೆಯಲ್ಲಿ ಬಹಳೇ ಜನರ ಪ್ರಾಣವನ್ನು ತೆಗೆದುಕೊಂಡಿರುವೆನು. ಆದುದರಿಂದ ನಾನು ಅತಿ ಭಯಂಕರವಾದ ರೂಪವನ್ನು ಧರಿಸಿರುವೆನು. ಅದು ನಿಮ್ಮಿಂದ ನೋಡಲು ಸಾಧ್ಯವಿಲ್ಲ.

ಕಾರಣ ನೀವು ಎಲ್ಲ ಪೂಜೆಯ ಸಾಹಿತ್ಯ ಸಹಿತವಾಗಿ ರಾಮ-ಲಕ್ಷ್ಮಣ ರನ್ನು ಈ ಗರ್ಭಗುಡಿಯ ಮೇಲಿನ ಗವಾಕ್ಷದ್ವಾರದಿಂದ ಒಳಗೆ ಬಿಡಿರಿ” ಎಂದು ಹೇಳಿದನು. ಅವರು ದೇವಿಯ ಆಜ್ಞೆಯೆಂದೇ ತಿಳಿದು ಆದ ರಂತೆ ಮಾಡಿದರು. ಆಗ ಹನುಮಂತನು ಅತಿ ಸಂತುಷ್ಟನಾಗಿ ಹೊರ ಗಿರುವ ರಾಕ್ಷಸರಿಗೆ— “ ಭಕ್ತಶ್ರೇಷ್ಠರೇ, ನಾನು ಬಹಳ ಸಂತುಷ್ಟ ಳಾಗಿ ನಿಮಗೆ ಅಕ್ಷಯ ಪದವಿಯನ್ನು ಕೊಟ್ಟಿರುವೆನು. ” ಎಂದು ಹೇಳಿದನು. ಆಗ ಆ ರಾಕ್ಷಸರೆಲ್ಲರೂ ಅತ್ಯಾನಂದದಿಂದ ಕುಣಿದಾಡ ಹತ್ತಿದರು.

ರಾಮ—ಲಕ್ಷ್ಮಣರು ಗರ್ಭ ಗುಡಿಯಲ್ಲಿ ಬಂದ ನಂತರ ಅತಿ ಭಯಂಕರವಾಗಿ ಕಾಣುತ್ತಿರುವ ದೇವಿಯನ್ನು ಕಂಡು ಗಾಬರಿಗೊಂ ಡರು. ಆಗ ದೇವೀಸ್ವರೂಪದಿಂದ ಕುಳಿತಿರುವ ಹನುಮಂತನು ಅವ ರನ್ನು ಕುರಿತು, “ ರಾಜಪುತ್ರರೇ, ನಿಮ್ಮ ಅವಸಾನಕಾಲವು ಸಮೀ ಪಿಸಿದೆ. ಇನ್ನು ನಿಮ್ಮನ್ನು ಸಂರಕ್ಷಿಸುವವರಾರು ? ” ಎಂದು ಕೇಳಿ ದನು. ಆ ಮಾತು ಕೇಳಿ ರಾಮಚಂದ್ರನು ಮನದಲ್ಲಿ ಹನುಮಂತ ನನ್ನು ನೆನೆಸುತ್ತ “ ಹೇ ಜನನೀ, ನಿನ್ನ ಹೊರತು ನಮ್ಮನ್ನು ರಕ್ಷಿಸು ವವರಾರೂ ಇಲ್ಲ. ” ಎಂದು ಹೇಳಿದನು. ಆಗ ಹನುಮಂತನು ತನ್ನ ನಿಜರೂಪವನ್ನು ಧರಿಸಿ ಶ್ರೀರಾಮಚಂದ್ರನ ಚರಣಕ್ಕೆರ ಗಿದನು. ಶ್ರೀರಾಮಚಂದ್ರನು— “ ಪ್ರಿಯ ಗೆಳೆಯನೇ, ನಾನು ಹಲವು ಜನ್ಮವೆತ್ತಿದರೂ ಕೂಡ ನಿನ್ನಂತಹ ಗೆಳೆಯನನ್ನು ಕಾಣೆ ” ಎಂದು ಹೇಳಿದನು. ಆನಂತರ ಹನುಮಂತನು “ ನೀವು ನನ್ನ ಹಿಂದೆ ಮರೆಯಾಗಿ ನಿಲ್ಲಿರಿ. ನಾನು ಎಲ್ಲ ರಾಕ್ಷಸರನ್ನು ಸಂಹರಿಸುವೆನು. ” ಎಂದು ಹೇಳಿದನು. ಅವನ ಮಾತನ್ನು ಕೇಳಿ ಶ್ರೀರಾಮಚಂದ್ರನು : “ ಹನುಮಾ, ನೀನು ನನಗೆ ಧನುಷ್ಯ-ಬಾಣಗಳನ್ನು ತಂದು ಕೊಟ್ಟರೆ ಈ ರಾಕ್ಷಸರನ್ನು ತಡಮಾಡದೆ ಸಂಹರಿಸುವೆನು. ಕೂಡಲೇ ಹನು

ಮಂತನು ಧನುಷ್ಯ ಬಾಣಗಳನ್ನು ಗುಪ್ತ ರೀತಿಯಿಂದ ತಂದು ಕೊಟ್ಟನು. “ಎಲೈ, ಪ್ರಿಯ ಭಕ್ತನಾದ ಅಹಿರಾವಣನೇ ನೀನೊಬ್ಬನೇ ನನ್ನ ದರ್ಶನಕ್ಕೆ ಬರಬೇಕು” ಎಂದು ಹನುಮಂತನು ಹೇಳಿದನು. ಆ ಮಾತು ಕೇಳಿ ಅಹಿರಾವಣನು ಒಳಗೆ ಹೋಗಲು ಆತನನ್ನು ಹನುಮಂತನು ಸಂಹರಿಸಿಬಿಟ್ಟನು. ಅಹಿರಾವಣನು ಹೊರಗೆ ಬಾರದ್ದನ್ನು ಕಂಡು ಮಹಿರಾವಣನು ದೇವಿಯ ಅರ್ಚಕನನ್ನು ಗರ್ಭಾಗಾರದೊಳಕ್ಕೆ ಕಳುಹಿದನು. ಪೂಜಾರಿಯು ಅಲ್ಲಿರುವ ದೇವಿಯನ್ನು ಕಂಡು ಕರ್ಕಶ ಧ್ವನಿಯಿಂದ ಚೀರುತ್ತ ಲಂಕೆಯನ್ನು ಸುಟ್ಟವನೇ ದೇವಿಯಾಗಿರುವನೆಂದು ಬಂದು ಮಹಿರಾವಣನಿಗೆ ತಿಳಿಸಿದನು. ಅವನ ಈ ಮಾತನ್ನು ಕೇಳಿ ಎಲ್ಲ ರಾಕ್ಷಸರೂ ಹೆದರಿ ಓಡಿ ಹೋದರು. ಆಬಳಿಕ ಹನುಮಂತನು ರಾಮ-ಲಕ್ಷ್ಮಣರನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ಗರ್ಭಗುಡಿಯ ಬಾಗಿಲವನ್ನು ಮುರಿದು ಹೊರಬಂದನು. ಆಗ ರಾಮಚಂದ್ರನು ತನ್ನ ದಿವ್ಯವಾದ ಬಾಣಗಳಿಂದ ಮಹಿರಾವಣನನ್ನು ಸಂಹರಿಸಲು ಪ್ರಯತ್ನಿಸಿದನು. ಆದರೆ ಅವೆಲ್ಲವೂ ನಿಷ್ಫಲವಾದವು. ಮಹಿರಾವಣನ ಒಂದು ರಕ್ತದ ಬಿಂದುವಿನಿಂದ ಅಸಂಖ್ಯವಾದ ಮಹಿರಾವಣರು ಉತ್ಪನ್ನವಾದರು. ಅದನ್ನು ಕಂಡು ಶ್ರೀರಾಮಚಂದ್ರನು ಬಹಳ ಚಿಂತಾತುರನಾದನು. ಕೂಡಲೆ ಹನುಮಂತನು ಮಹಿರಾವಣನ ಸತಿಯಾದ ಚಂದ್ರಸೇನೆಯ ಬಳಿಗೆ ಬಂದು ಈ ಸಂಗತಿಯನ್ನು ಅರುಹಿದನು. ಶ್ರೀರಾಮಚಂದ್ರನ ರೂಪ, ಗುಣಕ್ಕೆ ಮರುಳಾಗಿದ್ದ ಚಂದ್ರಸೇನೆಯು ಆ ರಾಮನ ಧ್ಯಾನದಲ್ಲಿ ಮಗ್ನಳಾಗಿ ಕುಳಿತಿದ್ದಳು. ಅವಳಿಗೆ ಹನುಮಂತನು ಬಂದುದರ ಅರಿವೇ ಇರಲಿಲ್ಲ. ಆಗ ಹನುಮಂತನು ಅವಳ ಕಿವಿಯ ಹತ್ತರ ಹೋಗಿ ಚಪ್ಪಾಳೆಯನ್ನು ಬಾರಿಸಲು ಅವಳು ಎಚ್ಚತ್ತು “ನೀನಾರು?” ಎಂದು ಕೇಳಿದಳು. ಅವಳ ಮಾತನ್ನು ಕೇಳಿ ಹನುಮಂತನು “ನಾನು ಪುರಾಣಪುರುಷ

ನಾದ ಶ್ರೀರಾಮಚಂದ್ರನ ದಾಸನು. ರಾಮಚಂದ್ರನು ಸಂಕಟದಲ್ಲಿರುವದರಿಂದ ನಾನು ನಿನ್ನ ಬಳಿಗೆ ಬಂದಿರುವೆನು." ಎಂದು ಹೇಳಿದನು. ಆದಕ್ಕವಳು: "ಶ್ರೀರಾಮಚಂದ್ರನು ಒಂದು ಸಲ ನನ್ನ ಶಯನಾಗಾರವನ್ನು ಪ್ರವೇಶಿಸಿದರೆ ನಾನು ಆ ರಾಮಚಂದ್ರನ ಸಂಕಟವನ್ನು ದೂರ ಮಾಡುವ ಉಪಾಯವನ್ನು ಹೇಳುವೆನು." ಎಂದು ಹೇಳಿದಳು. ಕೂಡಲೇ ಹನುಮಂತನು ಅವಳಿಗೆ ಅದರಂತೆಯೇ ವಚನವನ್ನಿತ್ತು ಮಹಿರಾವಣನ ಜೀವನ ವಿಷಯಕ ಸಂಗತಿಯನ್ನು ತಿಳಿದುಕೊಂಡನು. "ಹಿಂದಕ್ಕೆ ಮಹಿರಾವಣನು ಶಂಕರನನ್ನು ಮೆಚ್ಚಿಸಿ ತಾನು ಯುದ್ಧ ಸಮಯದಲ್ಲಿರುವಾಗ ತನ್ನ ರಕ್ತದ ಬಿಂದುವಿನ ಮೇಲೆ ಅಮೃತವೃಷ್ಟಿಗರೆಯಬೇಕೆಂದು ಬೇಡಿಕೊಂಡಿದ್ದನು. ಅದರಂತೆ ಈಗಲೂ ಪಾತಾಳದಲ್ಲಿಯ ಅಮೃತವನ್ನು ಶಿವನ ಕಂಠದಲ್ಲಿಯ ಮಾಲೆಯೊಳಗಿನ ಭ್ರಮರಗಳು ತಂದು ರಕ್ತಬಿಂದುವಿನ ಮೇಲೆ ಬಿಡುತ್ತಿದ್ದವು. ಅದರಿಂದ ಅಸಂಖ್ಯರಾದ ಮಹಿರಾವಣರು ಉತ್ಪನ್ನರಾಗುತ್ತಿದ್ದರು." ಈ ಸಂಗತಿಯನ್ನು ತಿಳಿದು ಹನುಮಂತನು ಅಮೃತಕುಂಡದ ಶೋಧವನ್ನು ಹಚ್ಚಿ ಅಲ್ಲಿರುವ ರಾಕ್ಷಸರನ್ನು ಸಂಹರಿಸಿ ಆ ಭ್ರಮರಗಳನ್ನು ಹೊಡೆದೋಡಿಸಿದನು. ಅದರಲ್ಲಿಯ ಒಂದು ಭ್ರಮರವು ಮಾತ್ರ ಹನುಮಂತನಿಗೆ ಶರಣುಬಂದದ್ದರಿಂದ ಅದಕ್ಕೆ ಜೀವದಾನವನ್ನು ಕೊಟ್ಟನು. ಮುಂದೆ ಅಲ್ಲಿಂದ ಹೊರಟು ಶ್ರೀರಾಮಚಂದ್ರನ ಬಳಿಗೆ ಬಂದನು. ಕಡೆಗೆ ಶ್ರೀರಾಮಚಂದ್ರನು ಬ್ರಹ್ಮಾಸ್ತ್ರದಿಂದ ಮಹಿರಾವಣನನ್ನುಸಂಹರಿಸಿದನು. ಈ ರೀತಿ ಮಹಿರಾವಣನಿಗೆ ಸಿಕ್ಕತಕ್ಕಅಮೃತವು ಸಿಗದ್ದರಿಂದ ಆತನು ಮರಣಹೊಂದಿದನು.ಉಳಿದ ರಾಕ್ಷಸರೆಲ್ಲರೂ ಶರಣುಬಂದರು. ಅನಂತರ ಹನುಮಂತನು ತಾನು ಚಂದ್ರಸೇನೆಗೆ ಕೊಟ್ಟ ವಚನವನ್ನು ಶ್ರೀರಾಮಚಂದ್ರನಿಗೆ ಅರುಹಿದನು. ಆ ಮಾತು ಕೇಳಿ ಶ್ರೀರಾಮಚಂದ್ರನು ಮುಗುಳುನಗೆ ನಗುತ್ತ—

" ಹನುಮಾ, ನಾನು ಏಕಪತ್ನೀವ್ರತದವನಿರುವದು ನಿನಗೆ ಗೊತ್ತಿದ್ದು ಈ ರೀತಿ ವಚನವನ್ನು ಕೊಟ್ಟಿದ್ದಕ್ಕೆ ಮುಂದೇನಾದರೂ ಉಪಾಯ ಹೇಳು." ಎಂದು ಕೇಳಿದನು.

ಹನುಮಂತನು ಚಂದ್ರಸೇನೆಯ ಬಳಿಗೆ ಬಂದು " ಶ್ರೀರಾಮ ಚಂದ್ರನು ಕೊಟ್ಟ ವಚನದಂತೆ ನಿನ್ನ ಮಂದಿರಕ್ಕೆ ಬರುವನು; ಆದರೆ ಅವನಿಗೆ ವಿಘ್ನ ಉಂಟಾದರೆ ಮಾತ್ರ ಇಲ್ಲಿಂದ ತಿರುಗಿ ಹೊರಟು ಹೋಗುವನು." ಎಂದು ಹೇಳಿ ಅಲ್ಲಿಂದ ತಾನು ಜೀವ ದಾನ ನೀಡಿದ ಆ ಭೃಂಗದ ಬಳಿಗೆ ಬಂದು " ಚಂದ್ರಸೇನೆಯ ಮಂಚ ವನ್ನು ಒಳಗಿನಿಂದಲೇ ಎಲ್ಲವನ್ನೂ ಕೊರೆದು ಪೊಳ್ಳುಮಾಡಿ ಇಡು; ಶ್ರೀರಾಮಚಂದ್ರನ ಚರಣ ಸ್ಪರ್ಶವಾದ ಕೂಡಲೆ ಅದು ಮುರಿದು ಬೀಳುವಂತಾಗಬೇಕು." ಎಂದು ಹೇಳಿ ತಾನು ಶ್ರೀರಾಮಚಂದ್ರನನ್ನು ಕರೆದುಕೊಂಡು ಚಂದ್ರಸೇನೆಯ ಮಂದಿರಕ್ಕೆ ಬಂದನು. ಆದರೆ ಶ್ರೀರಾಮಚಂದ್ರನ ಚರಣ ಸ್ಪರ್ಶದಿಂದ ಆ ಮಂಚವು ಮುರಿದು ಹೋಯಿತು. ಕೂಡಲೆ ಅವರೆಲ್ಲರೂ ಅಲ್ಲಿಂದ ಹೊರಡಲುದ್ಯುಕ್ತ ರಾದರು. ಹನುಮಂತನ ಈ ಕಾಪಟ್ಯವನ್ನು ತಿಳಿದು ಚಂದ್ರಸೇನೆಯು ಆತನಿಗೆ ಶಾಪಕೊಡಲು ಉದ್ಯುಕ್ತಳಾದಳು. ಆಗ ಶ್ರೀರಾಮ ಚಂದ್ರನು ಅವಳನ್ನು ಶಾಂತಗೊಳಿಸಿ " ದ್ವಾಪರಯುಗದಲ್ಲಿ ನಾನು ಕೃಷ್ಣನಾಗಿ ಜನಿಸುವೆನು. ನೀನು ಸತ್ಯಭಾಮೆಯಾಗಿ ಜನಿಸುವೆ. ಆಗ ನಾನು ನಿನ್ನನ್ನು ವಿವಾಹವಾಗಿ ನಿನ್ನ ಇಚ್ಛೆಯನ್ನು ಪೂರೈಸುವೆನು' ಎಂದು ಹೇಳಿ ಹೊರಟು ಹೋದನು.

ಮುಂದೆ ಹನುಮಂತನು ಅಹಿ—ಮಹಿಗಳ ರಾಜ್ಯವನ್ನು ತನ್ನ ಮಗನೆಂದುಹೇಳಿದ ಮಕರಧ್ವಜನಿಗೆ ಒಪ್ಪಿಸಿದನು. ತಾನು ರಾಮ ಲಕ್ಷ್ಮಣರನ್ನು ಕರೆದುಕೊಂಡು ನಲ ನೀಲಾದಿಗಳ ಬಳಿಗೆ ಬಂದನು.

ಶ್ರೀರಾಮಚಂದ್ರನನ್ನು ಕಂಡು ಎಲ್ಲರೂ ಜಯ ಘೋಷ ಮಾಡುತ್ತ ಸುವೇಲಾಚಲಕ್ಕೆ ಬಂದು ತಲುಪಿದರು. ಇಂತು ಅಹಿ—ಮಹಿ ರಕ್ಕಸರ ಸಂಹಾರವಾದದ್ದನ್ನು ಕೇಳಿ ರಾವಣನು ಅತಿ ಕ್ರೋಧಾಯಮಾನನಾಗಿ ತಾನೇ ಯುದ್ಧಕ್ಕೆ ಸಿದ್ಧನಾಗಿ ರಣರಂಗಕ್ಕೆ ಬಂದನು.

ಆಗ ಇಂದ್ರನು ತನ್ನ ಸಾರಥಿಯಾದ ಮಾತಲಿಯೊಡನೆ ಶ್ರೀರಾಮನಬಳಿಗೆ ರವಿತೇಜದಂತೆ ದೈದೀಪ್ಯಮಾನವಾದ ರಥವನ್ನು ಕಳುಹಿದನು. ಶ್ರೀರಾಮಚಂದ್ರನು ಆ ರಥದಲ್ಲಿ ಕುಳಿತು ಬ್ರಹ್ಮಾಸ್ತ್ರ



ರಾಮ-ರಾವಣರ ಯುದ್ಧ

ವನ್ನು ಪ್ರಯೋಗಿಸಿ ರಾವಣನ ಶಿರಸ್ಸುಗಳನ್ನೆಲ್ಲ ಛೇದಿಸಿದನು. ಪ್ರಜಾಪತ್ಯಾಸ್ತ್ರದಿಂದ ಆತನ ಹರವಾದ ಎದೆಯನ್ನು ಸೀಳಿದನು. ಆಗ

ರಾವಣನು ಮರಣಹೊಂದಿದನು. ಉಳಿದ ಎಲ್ಲ ರಾಕ್ಷಸರು ಜೀವ ಗಳ್ಳರಾಗಿ ಓಡಿ ಹೋದರು. ಇತ್ತ ವಾನರ ಸೈನ್ಯವೆಲ್ಲವೂ " ಧನ್ಯ ರಾಜಾ ಶ್ರೀರಾಮಚಂದ್ರಕೀ ಜಯ " ಎಂದು ಜಯ ಘೋಷವನ್ನು ಮಾಡಹತ್ತಿತ್ತು. ಎಲ್ಲ ದೇವತೆಗಳೂ ಶ್ರೀರಾಮಚಂದ್ರನ ಮೇಲೆ ಹೂ ಮಳೆಗರೆದರು.

ತನ್ನ ಜೇಷ್ಠ ಬಂಧುವಿನೊಡನೆ ಶತ್ರುತ್ವತಾಳಿ ಯುದ್ಧ ಮಾಡುತ್ತಿರುವ ವಿಭೀಷಣನಿಗೆ ಅಣ್ಣನ ಮರಣದಿಂದ ಅತಿ ದುಃಖ ವಾಯಿತು. ಆಗ ರಾಮಚಂದ್ರನು " ವಿಭೀಷಣಾ, ರಣರಂಗದಲ್ಲಿ ಕಾದುವವನಿಗೆ ಜಯವಾಗಲಿ, ಅಪಜಯವಾಗಲಿ ಉಂಟಾಗಲೇ ಬೇಕಾಗುವದು. ನಿನ್ನ ಅಣ್ಣ ರಾವಣನು ಅತಿ ಪರಾಕ್ರಮದಿಂದ ಕಾದುತ್ತಿರುವಾಗಲೇ ಮರಣಹೊಂದಿರುವನು. ಕ್ಷತ್ರಿಯರಿಗೆ ಇಂಥ ಮರಣವೇ ಉಚಿತವು. ಕಾರಣ ಇನ್ನು ನೀನು ಶೋಕವನ್ನು ಬಿಟ್ಟು ಮೃತ ಬಂಧುವಿನ ಉತ್ತರ ಕ್ರಿಯಾದಿಗಳನ್ನು ಮಾಡಲು ಸಿದ್ಧನಾಗು. ಆತನ ಮರಣದಿಂದ ಅವನೊಡನೆ ನಮ್ಮ ವೈರತ್ವವು ಅಳಿಯಿತು. ರಾವಣನು ನಿನಗೆ ಹೇಗೆ ಅಣ್ಣನಿರುವನೋ ಹಾಗೇ ನನಗೂ ಆತನು ಅಣ್ಣನೆಂದೇ ಭಾವಿಸು. " ಎಂದೆನ್ನುತ್ತ ಮೃತನ ಉತ್ತರ ಕ್ರಿಯೆಯ ವ್ಯವಸ್ಥೆಯನ್ನು ಕೈಕೊಳ್ಳಲು ಹೇಳಿದನು. ರಾವಣನ ಮರಣದ ವಾರ್ತೆಯು ಹಾಃ ಹಾ ಎನ್ನುವಷ್ಟರಲ್ಲೇ ರಾಜ್ಯದಲ್ಲೆಲ್ಲ ಹಬ್ಬಿತು. ಮಂಡೋದರಿ ಮೊದಲಾಗಿ ರಾವಣನ ಸಾವಿರಾರು ಸ್ತ್ರೀಯರು ದುಃಖಾವೇಗದಿಂದ ಆತನು ಸತ್ತುಬಿದ್ದಲ್ಲಿಗೆಬಂದರು. ಪಟ್ಟ ಮಹಿಷಿ ಮಂಡೋದರಿಯು ರಾವಣನ ಕಲೇವರವನ್ನೆತ್ತಿ ಆತನ ಶಿರಸ್ಸುಗಳನ್ನು ಮುಂದಿರಿಸಿಕೊಂಡು ಶೋಕಾತಿರೇಕದಿಂದ " ಮಹಾರಾಜಾ, ದೇವ ದಾನವರಿಗೆ ದುರ್ಜಯನಾದ ನಿಮಗೆ ಮಾನವನೊಬ್ಬನಿಂದ ಮರಣವು ಪ್ರಾಪ್ತವಾಗಬೇಕಾದರೆ ಆ ಮನುಷ್ಯನು ಸಾಮಾನ್ಯ

ಮಾನವನಲ್ಲ. ಅವನು ಸಾಕ್ಷಾತ್ ವಿಷ್ಣುವೇ ಮನುಷ್ಯ ರೂಪವನ್ನು ಧರಿಸಿ ಧರೆಗೆ ಅವತರಿಸಿರುವನು. ಎಲ್ಲ ದೇವತೆಗಳು ವಾನರರೂಪ ವನ್ನು ಧರಿಸಿ ಇವನ ಸಹಾಯಕ್ಕೆ ಬಂದಿರಬಹುದು ಎಂದು ನನಗೆ ಎನಿಸುತ್ತದೆ. ಪರಮ ಪತಿವೃತೆಯಾದ ಸೀತೆಯನ್ನು ಬಲಾತ್ಕಾರ ವಾಗಿ ಮೋಸದಿಂದ ತಂದಿರುವ ಪಾಪದಫಲವೇ ಇಂದು ನಿಮಗೆ ಮೃತ್ಯುವಾಗಿರಬಹುದೇ ? ಪತಿವ್ರತೆಯ ಕಣ್ಣೀರಿನ ಹನಿಯುಕೂಡ ಅಗ್ನಿಯಾಗಿ ಸುಡಬಹುದು. ನಾನು ನಿಮಗೆ ಸೀತಾಮಾತೆಯನ್ನು ಶ್ರೀರಾಮಚಂದ್ರನಿಗೊಪ್ಪಿಸಲು ಪರಿಪರಿಯಾಗಿ ಹೇಳಲಿಲ್ಲವೇ ? ದುರಭಿಮಾನದಿಂದ ನೀವು ನನ್ನ ಮಾತನ್ನು ಲೆಕ್ಕಿಸಲಿಲ್ಲ" ಎಂದು ಅನೇಕ ರೀತಿಯಿಂದ ದುಃಖಿಸಿ ಶೋಕಿಸುತ್ತ ಮೂರ್ಛೆ ಹೊಂದಿದಳು. ಆಗ ರಾಮಚಂದ್ರನು "ಹೇ ಪತಿವ್ರತಾ ಶಿರೋಮಣಿ ಮಂಡೋದ ರಿಯೇ, ನೀನು ವ್ಯರ್ಥ್ಯ ಶೋಕಿಸಬೇಡ! ಅದರಿಂದ ಮೃತನ ಆತ್ಮಕ್ಕೆ ಸದ್ಗತಿಯಾಗಲಾರದು. ಪ್ರತಿಯೊಬ್ಬ ಮನುಷ್ಯನು ತನ್ನ ಕರ್ಮದ ಫಲವನ್ನು ಅನುಭೋಗಿಸಲೇಬೇಕು. ಇದನ್ನರಿತು ನೀನು ಶೋಕ ವನ್ನು ತ್ಯಜಿಸು; ಶಾಂತಳಾಗು." ಎಂದು ಸಾಂತ್ವನವಾಕ್ಕುಗಳಿಂದ ಉಪದೇಶಿಸಿ "ವಿಭೀಷಣಾ, ಇವಳು ನಿನ್ನ ಭ್ರಾತೃಪತ್ನಿಯು; ನಿನಗೆ ಮಾತೃ ಸದೃಶಳು. ಅವಳನ್ನು ನೀನು ಧೈರ್ಯದಮಾತುಗಳಿಂದ ಸಮಾಧಾನ ಪಡಿಸಿ ಅಂತಃಪುರಕ್ಕೆ ಕಳುಹಿಸು' ಎಂದು ಹೇಳಿದನು. ವಿಭೀಷಣನು ಕೂಡಲೆ ಅವಳನ್ನು ಅಂತಃಪುರಕ್ಕೆ ಕಳುಹಿದನು. ಮತ್ತು ಸುವರ್ಣರತ್ನಮಂಡಿತವಾದ ಪ್ರೇತಶಯ್ಯೆಯೊಂದನ್ನು ತರಿಸಿ ರಾವಣನ ಕಲೇವರವನ್ನು ಅದರ ಮೇಲಿರಿಸಿಕೊಂಡು ರುದ್ರಭೂಮಿಗೆ ಒಯ್ದರು. ಅಲ್ಲಿ ಚಂದನ ಕಾಷ್ಠದಿಂದ ಚಿತೆಯನ್ನು ದಕ್ಷಣಾಭಿಮುಖ ವಾಗಿ ಹಾಕಿ ಅದರಮೇಲೆ ಶವವನ್ನಿರಿಸಿ ಚಿತೆಗೆ ಅಗ್ನಿ ಸಂಸ್ಕಾರ ವನ್ನು ಕೊಟ್ಟರು. ಮುಂದೆ ದಹನ ಕ್ರಿಯೆಗಾಗಿ ಶ್ಮಶಾನಕ್ಕೆ ಹೋದ

ವರೆಲ್ಲರೂ ಸಮುದ್ರ ಸ್ನಾನದಿಂದ ಶುದ್ಧರಾಗಿ ಮೃತನ ಹೆಸರಿನಿಂದ ಧರ್ಮೋದಕವನ್ನು ಕೊಟ್ಟು ಮೃತ ಸೂತಕವನ್ನು ತೊರೆದು ಲಂಕಾ ನಗರವನ್ನು ಸೇರಿದರು.

ಈ ರೀತಿಯಾಗಿ ಜಗತ್ಕಂಟಕನಾದ ಹಾಗು ದೇವ-ದ್ವಿಜರಿಂದ ಹೇಯಾತ್ಮಕನೆನಿಸಿದ ರಾಕ್ಷಸನಾದ ರಾವಣನ ಸಂಹಾರವು ಪಾವನ ಮೂರ್ತಿ ಶ್ರೀರಾಮನಿಂದಾಯಿತು !!!

॥ ಶ್ರೀರಾಮಚಂದ್ರ ಕಿ ಜೈ ॥

## ೨೦. ಶ್ರೀರಾಮನು ಈಶ್ವರನನ್ನು ಸ್ಥಾಪಿಸಿದ್ದು

ವಿಭೀಷಣನು ರಾವಣನ ಉತ್ತರಕ್ರಿಯೆಗಳನ್ನು ಮುಗಿಸಿ ಎಲ್ಲ ಸ್ತ್ರೀಯರನ್ನು ಅಂತಃಪುರಕ್ಕೆ ಕಳುಹಿಸಿ ಮರಳಿ ತಾನು ಶ್ರೀರಾಮ ಚಂದ್ರನ ಬಳಿಗೆ ಬಂದನು. ಆಗ ಶ್ರೀರಾಮಚಂದ್ರನು ವಿಭೀಷಣ ನನ್ನೂ ಸುಗ್ರೀವನನ್ನೂ ಅತಿ ಪ್ರೇಮದಿಂದ ಆಲಂಗಿಸಿ— “ಇಂದು ನಿಮ್ಮಿಬ್ಬರ ಸಹಾಯದಿಂದ ನಾನು ರಾವಣನಂಥ ಬಲಾಢ್ಯನಾದ ರಾಕ್ಷಸನನ್ನು ಸಂಹರಿಸಿ ಕೃತಕೃತ್ಯನಾದೆನು” ಎನ್ನುತ್ತ ತನ್ನ ಧನುಷ್ಯ ಬಾಣಗಳನ್ನು ಕೆಳಗಿರಿಸಿದನು. ಅನಂತರ ಲಕ್ಷ್ಮಣನ ಕಡೆಗೆ ನೋಡಿ “ಲಕ್ಷ್ಮಣಾ, ಈ ವಿಭೀಷಣನು ನನ್ನ ಪರಮ ಭಕ್ತನು. ಮತ್ತು ನನ್ನ ಪ್ರಿಯ ಮಿತ್ರನು. ಆದುದರಿಂದ ಅವನು ಲಂಕೆಯ ರಾಜನಾ ಗಲು ಯೋಗ್ಯನಿರುವನು. ಕಾರಣ ನೀನು ಈತನನ್ನು ಲಂಕೆಗೆ ಕರೆದು ಕೊಂಡು ಹೋಗಿ ರಾಜ್ಯಾಭಿಷೇಕವನ್ನು ಮಾಡು. ಇದೇ ನನ್ನ ಉತ್ಕಟವಾದ ಇಚ್ಛೆಯಾಗಿರುವದು.” ಎಂದು ಹೇಳಿದನು. ಕೂಡಲೇ ಲಕ್ಷ್ಮಣನು ವಾನರರಿಗೆ ಸುವರ್ಣಕಲಶದಲ್ಲಿ ಸಮುದ್ರಜಲವನ್ನು

ತರಲು ಹೇಳಿ ವಿಭೀಷಣನನ್ನು ಸಂಗಡ ಕರೆದುಕೊಂಡು ಉಳಿದ ರಾಕ್ಷಸರನ್ನೊಳಗೊಂಡು ಲಂಕೆಯಲ್ಲಿ ಬಂದನು. ಒಳ್ಳೇ ಸಡಗರ ದಿಂದ ವಿಭೀಷಣನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ರಾಜ್ಯಾಭಿ ಷೇಕವನ್ನು ಮಾಡಿದನು. ಮಂಗಲವಾದ್ಯಗಳು ಮೊಳಗಿದವು. ಎಲ್ಲಿ ನೋಡಿದಲ್ಲಿಯೂ ಜಯಘೋಷದಿಂದ ಲಂಕಾಪಟ್ಟಣವೆಲ್ಲವೂ ಆನಂದ ಸಾಗರದಲ್ಲಿ ಮುಳುಗಿತು. ವಿಭೀಷಣನು ತನ್ನ ಮಧುರ ವಚನಗ ಳಿಂದ ಎಲ್ಲರನ್ನೂ ಸಂತೈಸಿ ಲಕ್ಷ್ಮಣಸಮೇತನಾಗಿ ಶ್ರೀರಾಮಚಂದ್ರನ ಬಳಿಗೆ ಬಂದನು. ಮತ್ತು ತಾನು ತಂದಿರುವ ಉತ್ತಮೋತ್ತಮ ಕಾಣಿಕೆಗಳನ್ನು ಶ್ರೀರಾಮಚಂದ್ರನಿಗೊಪ್ಪಿಸಿದನು.

ಆನಂತರ ಶ್ರೀರಾಮಚಂದ್ರನು ಹನುಮಂತನನ್ನು ಕುರಿತು— “ಹನುಮಾ, ನೀನು ವಿಭೀಷಣನ ಆಜ್ಞೆಯನ್ನು ತೆಗೆದುಕೊಂಡು ಲಂಕೆಯ ಅಶೋಕವನದಲ್ಲಿ ಹೋಗು. ಮತ್ತೆ ಸೀತೆಯ ದರ್ಶನವನ್ನು ತೆಗೆದುಕೊಂಡು ನಾವೆಲ್ಲರೂ ಕುಶಲದಿಂದಿರುವೆವೆಂದು ಆಕೆಗೆ ತಿಳಿಸು. ಮತ್ತು “ನಿನ್ನಂಥ ಧರ್ಮಪರಾಯಣಳಾದ ಸ್ತ್ರೀಯ ಪ್ರಭಾವದಿಂದಲೇ ರಾವಣನಂಥ ಅತಿ ಬಲಾಢ್ಯನಾದ ದುಷ್ಟ ರಾಕ್ಷಸನನ್ನು ಕೊಂದು ನನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದೆನು.” ಎಂದು ಹೇಳು. “ಲಂಕೆ ಯಲ್ಲಿ ನೀನು ಯಾರಿಗೂ ಅಂಜುವ ಕಾರಣವಿಲ್ಲ. ಈಗ ವಿಭೀಷಣನು ರಾಜ್ಯವಾಳುತ್ತಿರುವದರಿಂದ ನೀನು ನಿನ್ನ ಮನೆಯಲ್ಲಿರುವೆನೆಂದೇ ತಿಳಿದುಕೊ” ಎಂದು ತಿಳಿಸು. ಎಂದು ಹೇಳಿದನು. ಕೂಡಲೇ ಹನು ಮಂತನು ಶ್ರೀರಾಮಚಂದ್ರನ ಆಜ್ಞೆಯನ್ನು ಶಿರಸಾವಹಿಸಿ ಅಶೋಕ ವನದಲ್ಲಿರುವ ಸೀತೆಯ ಬಳಿಗೆ ಬಂದು ಶ್ರೀರಾಮಚಂದ್ರನ ಸಂದೇಶ ವನ್ನರುಹಿದನು. ಹನುಮಂತನ ಮಾತನ್ನು ಕೇಳಿ ಸೀತಾಮಾತೆಯು ನೇತ್ರಗಳೊಳಗಿಂದ ಆನಂದಾಶ್ರುಗಳು ಉದುರಿದವು. ಆಗ ಅವಳು: “ಹನುಮಂತಾ, ‘ನಾನು ತಮ್ಮನ್ನು ಕಾಣಲು ಇಚ್ಛಿಸುವೆನು’ ಎಂದು

ಶ್ರೀರಾಮಚಂದ್ರರಿಗೆ ತಿಳಿಸು ” ಎಂದು ಹೇಳಿದನು. ಕೂಡಲೇ ಹನುಮಂತನು ಶ್ರೀರಾಮಚಂದ್ರನ ಬಳಿಗೆ ಬಂದು ಸೀತಾಮಾತೆಯ ಸಂದೇಶವನ್ನರುಹಿದನು. ಆಗ ಶ್ರೀರಾಮಚಂದ್ರನು— “ ವಿಭೀಷಣಾ, ನೀನು ಲಂಕೆಗೆ ಹೋಗಿ ಸೀತೆಯನ್ನು ಇಲ್ಲಿಗೆ ಕರೆದುಕೊಂಡು ಬಾ. ” ಎಂದು ಹೇಳಿದನು. ಆಗ ವಿಭೀಷಣನು ಸೀತಾಮಾತೆಗೆ ಮಂಗಲಸ್ನಾನವನ್ನು ಮಾಡಿಸಿ ರತ್ನಾಭರಣ-ವಸ್ತ್ರಾಲಂಕಾರಗಳಿಂದ ಸತ್ಕರಿಸಿ, ಸುವರ್ಣಯುಕ್ತ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಶ್ರೀರಾಮಚಂದ್ರನ ಬಳಿಗೆ ಬಂದನು. ಆಗ ಅವಳ ದರ್ಶನದಿಂದ ಎಲ್ಲ ವಾನರರು ಧನ್ಯತೆ ಪಡೆಯಲು ಮುಂಬರಿದು ಬರಹತ್ತಿದರು. ದೇವ, ದಾನವ, ಗಂಧರ್ವರೆಲ್ಲರೂ ವಿಮಾನಗಳನ್ನೇರಿ ಆಕಾಶಮಾರ್ಗವಾಗಿ ಅಲ್ಲಿಗೆ ಪ್ರಾಪ್ತರಾದರು. ಆಗ ದರ್ಶನೋತ್ಸುಕರಾದ ವಾನರರ ಸಮುದಾಯದಲ್ಲಿ ಎದ್ದಿರುವಗೊಂದಲವನ್ನುನೋಡಿ ಸೇನಾನಾಯಕರು ಶಿಸ್ತು,ವ್ಯವಸ್ಥೆ ಕಾಯ್ದುಕೊಳ್ಳಲು ತತ್ಪರರಾದರು. ಆದನ್ನು ಕಂಡು ಶ್ರೀರಾಮಚಂದ್ರನು— “ ವಿಭೀಷಣಾ, ನನ್ನ ಆಜ್ಞೆಯ ಮೇರೆಗೆ ಪ್ರಿಯವಾದ ವಾನರಸೇನೆಗೆ ನೀವು ವ್ಯರ್ಥ ತೊಂದರೆ ಕೊಡಬೇಡಿರಿ. ಯಾವ ಸೀತೆಯ ಸಲುವಾಗಿ ನನ್ನ ಈ ಸೇನೆಯು ಜೀವಕ್ಕೆ ಜೀವ ಕೊಡಲು ಸಿದ್ಧವಾಯಿತೋ ಅಂಥ ಈ ಸೇನೆಯು ಅವಳನ್ನು ಕಣ್ಣುತುಂಬಾ ನೋಡಲಿ. ಕಾರಣ ನೀನು ಸೀತೆಯನ್ನು ಕಾಲುನಡಿಗೆಯಿಂದಲೇ ಇಲ್ಲಿ ಕರೆದುಕೊಂಡು ಬರಬೇಕು. ಸಾಮಾನ್ಯವಾಗಿ ಸ್ತ್ರೀಯರು ದುಃಖದ ಪ್ರಸಂಗದಲ್ಲಿಯೂ, ವಿವಾಹದಲ್ಲಿಯೂ, ಯುದ್ಧ ಪ್ರಸಂಗದಲ್ಲಿಯೂ, ಯಜ್ಞಸಮಾರಂಭದಲ್ಲಿಯೂ ಎಲ್ಲ ಜನರ ಸಮ್ಮುಖವಾಗಿ ಬರಲು ಏನೊಂದೂ ಆತಂಕವಿಲ್ಲ.” ಎಂದು ಹೇಳಿದನು. ಆ ಮೇರೆಗೆ ವಿಭೀಷಣನು ಸೀತಾ ಮಾತೆಯನ್ನು ಶ್ರೀರಾಮಚಂದ್ರನು ಇದ್ದಲ್ಲಿಗೆ ಕರೆದುಕೊಂಡು ಬಂದನು. ಆಗ ಅವಳು ಸಹಜವಾದ ಲಜ್ಜೆಯಿಂದ ಗದಗದನೆ ನಡು

ಗುತ್ತ ಅಧೋಮುಖಿಯಾಗಿ ಕೈಜೋಡಿಸಿ ನಿಂತುಕೊಂಡಳು. "ಪತಿಯೇ ಪರದೈವತವು" ಎಂದು ತಿಳಿಯುತ್ತಿದ್ದ ಸೀತಾಮಾತೆಯು ಹರ್ಷದಿಂದಲೂ ವಿಸ್ಮಯದಿಂದಲೂ ಶ್ರೀರಾಮಚಂದ್ರನ ಪಾದಕಮಲಗಳನ್ನು ನೋಡುತ್ತಿದ್ದಳು. ಬಹುದಿನಗಳಿಂದ ಪತಿಪಾದದಿಂದಂತರಿಸಿದ ಆಕೆಯಲ್ಲಿ ಪತಿಭಕ್ತಿಯು ಉಕ್ಕೇರಿ ಆತನ ಮುಖವನ್ನು ನಿರೀಕ್ಷಿಸಿದಳು. ಆದರೆ ಆ ಮುಖದಲ್ಲಿ ಅವಳಿಗೆ ಪ್ರೀತಿಯ ಪಡಿನೆಳಲು ಸ್ವಲ್ಪಾದರೂ ಕಾಣಲಿಲ್ಲ. ಆಗ ಅವಳು ಭಯಭೀತಳಾದಳು.

ಇತ್ತ ಶ್ರೀರಾಮಚಂದ್ರನ ಮನಃಸ್ಥಿತಿಯು ಬಹು ವಿಲಕ್ಷಣವಾಗಿತ್ತು. ಅವನು ತನ್ನ ಮನಸ್ಸಿನ ಭಾವವನ್ನು ವ್ಯಕ್ತಗೊಳಿಸುವದರ ಸಲುವಾಗಿ "ಸೀತೆ, ನಾನು ದುಷ್ಟನಾದ ರಾವಣನನ್ನು ಸಂಹರಿಸಿ ನಿನ್ನನ್ನು ಬಂಧ ಮುಕ್ತಳನ್ನಾಗಿ ಮಾಡಿ ನನ್ನ ಕರ್ತವ್ಯವನ್ನು ನೆರವೇರಿಸಿದೆನು. ಇದುವರೆಗಿನ ನಮ್ಮ ಶ್ರಮವು ಈಗ ಸಾರ್ಥಕವಾಯಿತು. ಆದರೆ ನೀನು ಆ ಪಾಪಿ ಪುರುಷನಿಂದ ಅಪಹರಿಸಲ್ಪಟ್ಟಿದ್ದಕ್ಕೆ ತಗಲಿದ ಕಲಂಕವನ್ನು ಇಂದು ನಾನು ತೊಳೆದುಕೊಂಡೆನು. ಆದರೆ ಸೀತೆ, ಇದುವರೆಗೆ ಶ್ರಮಪಟ್ಟಿದ್ದು ನಿನ್ನ ದೆಸೆಯಿಂದಲ್ಲ. ನನ್ನ ಕುಲಕ್ಕೆ ಕಲಂಕ ತಟ್ಟಬಾರದಂತೆ ನೋಡಿಕೊಳ್ಳುವದಕ್ಕಾಗಿ. ಅದೇ ನನ್ನ ಕರ್ತವ್ಯ. ನೀನು ಪರಿಶುದ್ಧಳಿರುವಿ. ಆದರೆ ಈ ಜಗತ್ತಿಗೆ ಅದು ನಿಜವಾಗಿ ತೋರದ ಹೊರತು ಜನರು ನಂಬಲಾರರು" ಎಂದು ನುಡಿದು ಸುಮ್ಮನಾದನು. ಶ್ರೀರಾಮಚಂದ್ರನ ಈ ಮಾತನ್ನು ಕೇಳಿ ಸೀತಾಮಾತೆಗೆ ಸಿಡಿಲು ಬಡೆದಂತಾಯಿತು. ಮತ್ತು ಅತಿ ದುಃಖದಿಂದ "ನೀವು ಈ ರೀತಿಯಾಗಿ ಮಾತಾಡುವಿರೆಂದು ನಾನೆಂದಿಗೂ ನಂಬಿರಲಿಲ್ಲ. ದುಷ್ಟನಾದ ರಾವಣನು ಬಲಾತ್ಕಾರದಿಂದ ಒಯ್ದಿರಲು ಅದರಲ್ಲಿ ನನ್ನ ಅಪರಾಧವೇನು? ಇದು ವರೆಗೆ ನಿಮ್ಮ ಹೊರತಾಗಿ ಅನ್ಯ ಪುರುಷರನ್ನು ಕಣ್ಣೆತ್ತಿ ಸಹ ನೋಡಿರಲಿಲ್ಲ. ಆದರೆ ನನ್ನ ದೈವವು

ನನಗೆ ಆತಂಕವಾಗಿರುವದು " ಎಂದು ಲಕ್ಷ್ಮಣನನ್ನು ಕರೆದು "ವೈದುನ, ಈ ಸಂಕಟದಿಂದ ಪಾರಾಗಲು ಒಂದೇ ಉಪಾಯವು. ಕಾರಣ ನೀನು ಚಿತೆಯನ್ನು ತಯಾರಿಸು. ನಾನು ಶುದ್ಧಳಿದ್ದರೆ ಸಾಕ್ಷಾತ್ ಅಗ್ನಿನಾರಾಯಣನು ಸಹ ನನ್ನನ್ನು ಮುಟ್ಟಲಾರನು. ಪಾಪಿಯಾಗಿದ್ದರೆ ಈ ದೇಹವು ಅಗ್ನಿಯಲ್ಲಿ ಭಸ್ಮವಾಗುವದೇ ಉತ್ತಮವು" ಎಂದು ಹೇಳಿದಳು. ಆ ಮಾತು ಕೇಳಿ ಲಕ್ಷ್ಮಣನು ಭೀತನಾಗಿ ಶ್ರೀರಾಮಚಂದ್ರನ ಕಡೆಗೆ ನೋಡಿದನು. ಆಗ ಅವನು ಲಕ್ಷ್ಮಣನಿಗೆ ಸನ್ನೆಯಿಂದ ತನ್ನ ಒಪ್ಪಿಗೆಯನ್ನಿತ್ತನು. ಸೀತಾಮಾತೆಯ ಹೇಳಿಕೆಯ ಮೇರೆಗೆ ಲಕ್ಷ್ಮಣನು ಚಿತೆಯನ್ನು ತಯಾರಿಸಿದನು. ಕೂಡಲೆ ಸೀತಾಮಾತೆಯು ಶ್ರೀರಾಮಚಂದ್ರನಿಗೆ ಕೈಜೋಡಿಸಿ ಪ್ರದಕ್ಷಿಣೆಯನ್ನು ಹಾಕಿ ದೇವ-ಬ್ರಾಹ್ಮಣರಿಗೆ ನಮಸ್ಕರಿಸಿ ಧಗಧಗನೆಉರಿಯುತ್ತಿದ್ದ ಅಗ್ನಿನಾರಾಯಣನ ಸಮೀಪಕ್ಕೆ ಬಂದಳು. ಮತ್ತು "ಸರ್ವಸಾಕ್ಷಿಯಾದ ಅಗ್ನಿನಾರಾಯಣನೇ, ನಾನು ಮನೋವಾಕ್ಕಾಯಗಳಿಂದ ಶ್ರೀರಾಮಚಂದ್ರನ ಹೊರತಾಗಿ ಅನ್ಯರನ್ನು ಅಪೇಕ್ಷಿಸದೆ ಶುದ್ಧಳಾಗಿದ್ದರೆ ಮಾತ್ರ ನೀನು ನನ್ನನ್ನುರಕ್ಷಿಸು. ಇಲ್ಲವಾದರೆ ನನ್ನನ್ನುದಹಿಸಿ ಭಸ್ಮವಾಗಿ ಮಾಡಿಬಿಡು " ಈ ರೀತಿಯಾಗಿ ಅಗ್ನಿನಾರಾಯಣನಿಗೆ ಪ್ರಾರ್ಥಿಸಿ ಪ್ರದಕ್ಷಿಣೆ ಹಾಕಿ, ನಿಃಶಂಕೆಯಿಂದ ಅಗ್ನಿಯಲ್ಲಿ ಹಾರಿದಳು. ಆಗ ಅಲ್ಲಿ ನೆರೆದಿರುವ ಎಲ್ಲ ಸ್ತ್ರೀ-ಪುರುಷರ ಮುಖದಿಂದ "ಹಾಯ್ ! ಹಾಯ್ !" ಎಂದು ಧ್ವನಿ ಹೊರಟಿತು. ತುಸು ಹೊತ್ತಿನಲ್ಲಿ ಸಾಕ್ಷಾತ್ ಅಗ್ನಿ ನಾರಾಯಣನೇ ಸೀತಾಮಾತೆಯನ್ನು ಕರೆದುಕೊಂಡು ಚಿತೆಯ ಹೊರಗೆ ಬಂದನು. ಆಗ ಅವಳ ಸೌಂದರ್ಯವು ಮತ್ತಷ್ಟು ಹೆಚ್ಚಿತು. ಸರ್ವಸಾಕ್ಷಿಯಾದ ಅಗ್ನಿ-ನಾರಾಯಣನು " ಶ್ರೀರಾಮಚಂದ್ರನೇ, ಇವಳು ಮಹಾ ಪ್ರತಿವ್ರತೆಯು. ಇವಳಲ್ಲಿ ಎಳ್ಳನಿತಾದರೂ ಪಾಪವಿಲ್ಲ. ಅಂತೆಯೇ ನನಗೆ ಇವಳನು

ಮುಟ್ಟುವ ಸಾಮರ್ಥ್ಯವಾಗಲಿಲ್ಲ. ಇವಳು ಅತ್ಯಂತ ಪತಿವ್ರತೆಯೂ, ನಿಷ್ಪಾಪಳೂ ಆಗಿಯೇ ಇರುವಳು. ಕಾರಣ ನೀನು ಇವಳನ್ನು ಸ್ವೀಕರಿಸು" ಎಂದು ಹೇಳಿ ಗುಪ್ತನಾದನು. ಈ ಮೇರೆಗೆ ಸೀತಾಮಾತೆಯು ಶುದ್ಧಳಿರುವದನ್ನು ಕಂಡ ಶ್ರೀರಾಮಚಂದ್ರನಿಗೆ ಪರಮಾನಂದವಾಯಿತು. ಆಗ ದೇವತೆಗಳೆಲ್ಲರೂ ಹೂಮಳೆಗರೆದರು. ಮುಂದೆ ಶ್ರೀರಾಮಚಂದ್ರನು ಸೀತಾಮಾತೆಯನ್ನು ಪ್ರೇಮದಿಂದ ಸ್ವೀಕರಿಸಿದನು. ಆಗ ಎಲ್ಲ ಜನರು "ಧನ್ಯರಾಜಾ, ಶ್ರೀರಾಮಚಂದ್ರಕಿ ಜಯ ಧನ್ಯ ಸೀತಾಮಾತೆ" ಎಂದು ಜಯಘೋಷವನ್ನು ಮಾಡಿದರು. ಕೂಡಲೇ ಇಂದ್ರಾದಿ ದೇವತೆಗಳೆಲ್ಲರೂ "ಶ್ರೀರಾಮಚಂದ್ರಾ ನೀನು ಅತಿ ಪರಾಕ್ರಮಿಯಾದ ರಾವಣನನ್ನು ಸಂಹರಿಸಿ ಆತನಲ್ಲಿ ಸೆರೆ ಸಿಕ್ಕ ದೇವತೆಗಳೆಲ್ಲರನ್ನೂ ಮುಕ್ತನನ್ನಾಗಿ ಮಾಡಿರುವೆ. ನಿನ್ನ ಈ ಕೀರ್ತಿಯು ಪರಮ ಸಾಧ್ವೀಮಣಿಯಾದ ಸೀತಾಮಾತೆಯು ಪತಿವ್ರತಾ ಪ್ರಭಾವದಿಂದ ಅಜರಾಮರವಾಗಿ ಉಳಿಯುವದು" ಎಂದು ಅತಿ ಸಂತೋಷದಿಂದ ನುಡಿದರು. "ನಮ್ಮ ದರ್ಶನವು ಎಂದಿಗೂ ವ್ಯರ್ಥವಾಗಲಾರದು. ಕಾರಣ ನಾವು ನಿನಗೆ ವರಕೊಡಲು ಸಿದ್ಧರಿರುವೆವು" ಎಂದು ಹೇಳಿದರು. ಶ್ರೀರಾಮನು ರಣದಲ್ಲಿ ಸತ್ತುಬಿದ್ದಿರುವ ಹಾಗು ನನ್ನ ಪ್ರೀತಿಗೆ ಆಸ್ಪದರಾಗಿರುವ ವಾನರ—ಋಕ್ಷರನ್ನು ನಿಮ್ಮ ಅಮೃತದೃಷ್ಟಿಯಿಂದ ನಿರೀಕ್ಷಿಸಿರಿ, ಎಂದು ಅವರಿಗೆ ಬಿನ್ನೈಸಿದನು. ಆಗ ಅವರೆಲ್ಲರೂ ದೇವತೆಗಳ ಕೃಪಾದೃಷ್ಟಿಯಿಂದ ನಿದ್ರೆಯಿಂದೆಚ್ಚತ್ತಂತೆ ಎದ್ದು ಕುಳಿತರು. ನಂತರ ಇಂದ್ರಾದಿಗಳು ತಮ್ಮ ಸ್ವಸ್ಥಾನಗಳಿಗೆ ತೆರಳಿದರು. ಈ ರೀತಿ ಪುನರ್ಜನ್ಮಪಡೆದ ವಾನರ ಋಕ್ಷರೆಲ್ಲ ಆನಂದ ಸಾಗರದಲ್ಲಿ ತೇಲಾಡಹತ್ತಿದರು. ಆ ಆನಂದದ ವರ್ಣನೆಯನ್ನು ನಮ್ಮಂಥ ಪಾಮರರು ವರ್ಣಿಸುವದು ಅಸಾಧ್ಯವು. ಮುಂದೆ ರಾಮಾದಿಗಳು ಅಲ್ಲಿಂದ ಹೊರಡಲು ಉದ್ಯುಕ್ತರಾದರು. ಆಗ

ವಿಭೀಷಣನು ಪುಷ್ಪಕ ವಿಮಾನವನ್ನು ತರಿಸಿದನು. ಅವರು ಅದರಲ್ಲಿ ಕುಳಿತು ಗಂಧಮಾದನ ಪರ್ವತಕ್ಕೆ ಬಂದಿಳಿದರು. ಅಲ್ಲಿರುವ ತಾಪಸರೆಲ್ಲರೂ ಆಗಸ್ತ್ಯ ಮುನಿಗಳನ್ನು ಮುಂದೆ ಮಾಡಿಕೊಂಡು ಶ್ರೀರಾಮಚಂದ್ರನ ದರ್ಶನ ತಕ್ಕೊಂಡರು. ಅವರು ಶ್ರೀರಾಮಚಂದ್ರನನ್ನು ವಂದಿಸುತ್ತ— "ಎಲ್ಲ ಜನರ ಮೇಲೆ ಅನುಗ್ರಹಿಸುವಂಥ ಭಗವಾನ್ ಶ್ರೀರಾಮಚಂದ್ರನೆ ನಿನಗೆ ನಮ್ಮ ನಮಸ್ಕಾರವು. ದುಷ್ಟ ರಾವಣನ ಸಂಹಾರ ಮಾಡಿದಂಥ ಶ್ರೀರಾಮಚಂದ್ರ ನಿನಗೆ ನಮ್ಮ ವಂದನೆಗಳು. ತ್ರಾಟಿಕೆಯನ್ನು ಸಂಹರಿಸಿ ವಿಶ್ವಾಮಿತ್ರನ ಯಜ್ಞ ರಕ್ಷಣೆಮಾಡಿದ ಶ್ರೀರಾಮಚಂದ್ರ ನಿನಗೆ ನಮ್ಮ ನಮಸ್ಕಾರವು. ನಿನ್ನ ಚರಣಧೂಳಿಯಿಂದ ಅಹಿಲ್ಯೆಯನ್ನು ಉದ್ಧರಿಸಿಂಥ ಶ್ರೀರಾಮಚಂದ್ರ ನಿನಗೆ ನಮ್ಮ ನಮಸ್ಕಾರವು. ಭಗವಾನ್ ಶ್ರೀಶಂಕರನ ಧನುಷ್ಯವನ್ನು ಲೀಲಾಜಾಲವಾಗಿ ಮುರಿದಿರುವಂಥ ಶ್ರೀರಾಮಚಂದ್ರ ನಿನಗೆ ನಮ್ಮ ನಮಸ್ಕಾರವು. ಜನಕರಾಜನ ಮಗಳನ್ನು ವಿವಾಹವಾಗಿರುವಂಥ ಶ್ರೀರಾಮಚಂದ್ರ ನಿನಗೆ ನಮ್ಮ ನಮಸ್ಕಾರವು. ರೇಣುಕಾನಂದನ ಪರಶುರಾಮನನ್ನು ಸೋಲಿಸಿದಂಥ ಶ್ರೀರಾಮಚಂದ್ರನಿಗೆ ನಮ್ಮ ನಮಸ್ಕಾರವು. ಪಿತೃವಚನವನ್ನು ಪರಿಪಾಲಿಸಿದ ಶ್ರೀರಾಮಚಂದ್ರ ನಿನಗೆ ನಮ್ಮ ನಮಸ್ಕಾರವು. ಶಬರಿಯ ಭಕ್ತಿಗೆ ಮೆಚ್ಚಿ ಅವಳ ಎಂಜಲವನ್ನು ಸೇವಿಸಿದಂಥ ಶ್ರೀರಾಮಚಂದ್ರನಿಗೆ ನಮ್ಮ ನಮಸ್ಕಾರವು. ಸುಗ್ರೀವನ ಸಂಗಡ ಸ್ನೇಹವನ್ನು ಬೆಳೆಯಿಸಿ ವಾಲಿಯನ್ನು ವಧಿಸಿದಂಥ ಶ್ರೀರಾಮಚಂದ್ರನಿಗೆ ನಮ್ಮ ನಮಸ್ಕಾರವು. ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಿರುವಂಥ ಶ್ರೀರಾಮಚಂದ್ರನಿಗೆ ನಮ್ಮ ನಮಸ್ಕಾರವು. ತನ್ನ ಚರಣಾರವಿಂದದಿಂದ ಈ ಸಂಸಾರಸಾಗರವನ್ನು ಪಾರುಮಾಡಲು ಉತ್ತಮವಾದ ನೌಕೆಯಾಗಿರುವಂಥ ಶ್ರೀರಾಮಚಂದ್ರನಿಗೆ ನಮ್ಮ ನಮಸ್ಕಾರವು. ದುಷ್ಟರನ್ನು ಶಿಕ್ಷಿಸಿ,

ಶಿಷ್ಟರನ್ನು ಪರಿಪಾಲಿಸುವಂಥ ಶ್ರೀರಾಮಚಂದ್ರನಿಗೆ ನಮ್ಮ ನಮಸ್ಕಾರವು. ರಾಮ ರಾಮವೆಂಬ ನಾಮೋಚ್ಚಾರದಿಂದ ಎಲ್ಲ ಪಾಪಗಳನ್ನು ನಾಶಮಾಡಿ ಕೊನೆಗೆ ಮುಕ್ತಿಯನ್ನು ಕೊಡುವಂಥ ಶ್ರೀರಾಮಚಂದ್ರನೇ ನಮ್ಮನ್ನು ಕಾಪಾಡು. ಜಾನಕೀವಲ್ಲಭನೇ ನಮ್ಮನ್ನು ಕಾಪಾಡು." ಎಂದು ಅವರು ಸ್ತುತಿಸಿದರು.

ಅನಂತರ ಶ್ರೀರಾಮಚಂದ್ರನು ಅವರಿಗೆ ಕೈ ಜೋಡಿಸಿ "ಹೇ, ತಾಪಸಿಗಳೇ, ನೀವು ಅಹಂಕಾರರಹಿತರೂ, ಶಾಂತರೂ, ನೈಷ್ಠಿಕ ಬ್ರಹ್ಮಚಾರಿಗಳೂ ಇರುವದರಿಂದ ನಾನು ನಿಮಗೆ ಭಕ್ತಿಯಿಂದ ನಮಸ್ಕರಿಸುವೆನು. ರಾವಣನು ಪುಲಸ್ತ್ಯ ಋಷಿಯ ಮಗನು. ಆದ್ದರಿಂದ ಅವನು ಬ್ರಾಹ್ಮಣನಿರುವನು. ಅವನನ್ನು ಸಂಹರಿಸಿದ್ದರಿಂದ ನನಗೆ ಬ್ರಹ್ಮಹತ್ಯಾದೋಷವು ಬಂದಿರುವದು. ಅದರ ನಿವಾರಣಾರ್ಥವಾಗಿ ನನಗೆ ಉಪಾಯವನ್ನು ಹೇಳಬೇಕು." ಎಂದು ಕೇಳಿದನು. ಆಗ ಋಷಿಗಳೆಲ್ಲರೂ "ಸತ್ಯಪ್ರಿಯನಾದ ಶ್ರೀರಾಮಚಂದ್ರನೇ ಎಲ್ಲ ಪ್ರಾಣಿಮಾತ್ರಗಳನ್ನು ರಕ್ಷಿಸುವ ಶಕ್ತಿಯು ನಿನಗಿರುವದು. ಆದರೆ ಮೂರು ಲೋಕದ ಹಿತದ ಸಲುವಾಗಿ ನೀನು ಶಿವನನ್ನು ಆರಾಧಿಸು." ಎಂದು ಹೇಳಿದರು. "ಈ ಉತ್ತಮವಾದ ಗಂಧಮಾದನ ಪರ್ವತವು ಜನರಿಗೆ ಮೋಕ್ಷಪ್ರದವಾಗಿರುತ್ತದೆ. ಕಾರಣ ನೀನು ಇಲ್ಲಿ ಶಿವಲಿಂಗವನ್ನು ಸ್ಥಾಪಿಸಿದರೆ ಬ್ರಹ್ಮಹತ್ಯೆಯ ದೋಷವು ನಾಶವಾಗುವದು. ಇದರಿಂದ ನಿನ್ನ ಕೀರ್ತಿಯು ಅಜರಾಮರವಾಗಿ ಉಳಿಯುವದು" ಎಂದು ಹೇಳಿದರು. ಋಷಿಗಳ ಈ ಮಾತನ್ನು ಕೇಳಿ ಭಗವಾನ್ ಶ್ರೀರಾಮಚಂದ್ರನು ಉತ್ತಮ ಮುಹೂರ್ತದಲ್ಲಿ ಶಿವಲಿಂಗವನ್ನು ಸ್ಥಾಪಿಸಲು ಸಿದ್ಧನಾದನು. ಆಗ ಹನುಮಂತನನ್ನು ಕರೆದು ಶಿವಲಿಂಗವನ್ನು ತರಲು ಆತನನ್ನು ಕೈಲಾಸಕ್ಕೆ ಕಳುಹಿದನು. ಕೂಡಲೇ ಹನುಮಂತನು ಎರಡು ಗಳಿಗೆಯಲ್ಲಿಯೇ ಕೈಲಾಸವನ್ನು ಮುಟ್ಟಿದನು. ಅಲ್ಲಿ

ಶಿವಲಿಂಗಗಳು ಕಾಣಿದ್ದರಿಂದ ಅವನು ಸಾಕ್ಷಾತ್ ಶ್ರೀಶಂಕರನನ್ನೇ ಪ್ರಾರ್ಥಿಸಿದನು ಆಗ ಶ್ರೀಶಂಕರನು ಪ್ರಸನ್ನನಾಗಿ ಆತನಿಗೆ ಜ್ಯೋತಿರ್ಲಿಂಗವನ್ನು ಕೊಟ್ಟನು.

ಇತ್ತ ಕಡೆಗೆ ಶ್ರೀರಾಮಚಂದ್ರನು ಪುಣ್ಯಕಾಲವು ಸಮೀಪಿಸಿದ್ದರಿಂದ ಹನುಮಂತನು ಇನ್ನೂ ಬರಲಿಲ್ಲವೆಂದು ಚಿಂತೆಗೊಳಗಾದನು. ಕೂಡಲೇ ಮುನಿಗಳೆಲ್ಲರೂ— "ಮಹಾಬಾಹುವಾದ ಶ್ರೀರಾಮಚಂದ್ರನೇ ಸುಮುಹೂರ್ತವು ಸಮೀಪಿಸಿತು. ಕಾರಣ ಜಾನಕಿಯು ಲೀಲೆಯಿಂದ ಉಸುಕಿನ ಲಿಂಗವನ್ನು ಮಾಡಿರುವಳು. ಅದನ್ನು ನೀನು ಈ ಸುಮುಹೂರ್ತದಲ್ಲಿ ಸ್ಥಾಪಿಸು." ಎಂದು ಹೇಳಿದರು. ಈ ಮಾತನ್ನು ಕೇಳಿ ಅತಿ ಶೀಘ್ರದಿಂದ ಜಾನಕೀಸಮೇತನಾಗಿ ಶ್ರೀರಾಮಚಂದ್ರನು ಆ ಶಿವಲಿಂಗವನ್ನು ಸ್ಥಾಪಿಸಿದನು. ಆಗ ಮುನಿಗಳೆಲ್ಲರೂ ವೇದೋಕ್ತ ಮಂತ್ರದಿಂದ ಶಿವಲಿಂಗದ ಪ್ರತಿಷ್ಠಾಪನೆ ಮಾಡಿ ಶ್ರೀರಾಮಚಂದ್ರನ ಹಸ್ತದಿಂದ ಪೂಜಿಸಿದರು. ಅಂದು ಜೇಷ್ಠ ಮಾಸದ ಶುದ್ಧ ದಶಮಿತಿಥಿ, ಬುಧವಾರ, ಹಸ್ತನಕ್ಷತ್ರ, ಗದ—ಕರಣ ಆನಂದ ಮತ್ತು ವ್ಯತೀಪಾತಯೋಗ ಇರುವದರಿಂದ ಕನ್ಯಾ ರಾಶಿಗೆ ಚಂದ್ರನು, ವೃಷಭ ಗಾಶಿಗೆ ಸೂರ್ಯನು ಬಂದಿರುವದರಿಂದ ಅಂಥ ಶುಭಮುಹೂರ್ತದಲ್ಲಿ ಸಮುದ್ರದ ತೀರದಲ್ಲಿ ಶಿವಲಿಂಗವನ್ನು ಸ್ಥಾಪಿಸಿದನು. ಆಗ ಭಗವಾನ್ ಶಂಕರನು ಪಾರ್ವತೀಸಮೇತನಾಗಿ ಪ್ರತ್ಯಕ್ಷನಾಗಿ— "ಹೇ ರಾಘವೇಂದ್ರಾ, ನೀನು ಸ್ಥಾಪಿಸಿರುವ ಶಿವಲಿಂಗದ ದರ್ಶನವನ್ನು ತೆಗೆದುಕೊಳ್ಳುವವನು ಎಲ್ಲ ಪಾಪಗಳಿಂದಲೂ ಮುಕ್ತನಾಗುವನು. ಧನುಷ್ಯಕೋಟಿಯಲ್ಲಿ ಸ್ನಾನ ಮಾಡುವವನು ಎಲ್ಲ ಪಾಪಗಳಿಂದ ಮುಕ್ತನಾಗುವಂತೆ ಈ ರಾಮೇಶ್ವರ ಲಿಂಗದ ದರ್ಶನವನ್ನು ತೆಗೆದುಕೊಂಡವನು ಮಹಾಪಾತಕಗಳಿಂದ ಮುಕ್ತನಾಗುವನು." ಎಂದು ವರವನ್ನಿತ್ತನು. ಕೂಡಲೇ ಶ್ರೀರಾಮ

ಚಂದ್ರನು ರಾಮೇಶ್ವರನ ಸನ್ನಿಧಾನದಲ್ಲಿ, ನಂದಿಕೇಶ್ವರನನ್ನು ಸ್ಥಾಪಿಸಿದನು; ಮತ್ತು ತನ್ನ ಧನುಷ್ಯ-ಬಾಣಗಳಿಂದ ಭೂಮಿಯನ್ನು ಭೇದಿಸಿ ಜಲಕೂಪವನ್ನು ತಯಾರಿಸಿದನು. ಅದೇ ಜಲದಿಂದ ಭಗವಾನ್ ಶಂಕರನಿಗೆ ಅಭಿಷೇಕ ಮಾಡಿದನು.†

ಈ ರೀತಿಯಾಗಿ ಶ್ರೀರಾಮಚಂದ್ರನು ಶಿವಲಿಂಗವನ್ನು ಸ್ಥಾಪಿಸಿದ ನಂತರ ತುಸು ಹೊತ್ತಿನಲ್ಲಿಯೇ ಹನುಮಂತನು ಉತ್ತಮವಾದ ಒಂದು ಲಿಂಗವನ್ನು ತೆಗೆದುಕೊಂಡು ಬಂದನು. ಶ್ರೀರಾಮಚಂದ್ರನು ವಾಲುಕಾಮಯವಾದ ಶಿವಲಿಂಗವನ್ನು ಪೂಜಿಸುತ್ತಿರುವದನ್ನು ಕಂಡು ಹನುಮಂತನು ಕೋಪದಿಂದಲೂ, ಗರ್ವದಿಂದಲೂ, ಉದಾಸೀನತೆಯಿಂದಲೂ— "ಹೇ ಭಗವಾನ್ ಶ್ರೀರಾಮಚಂದ್ರನೇ, ನಾನು ಕೈಲಾಸಕ್ಕೆ ಹೋಗಲು ಭಗವಾನ್ ಶಂಕರನ ದರ್ಶನವು ನನಗಾಗಲಿಲ್ಲ. ಕೂಡಲೇ ನಾನು ತಪಸ್ಸನ್ನಾಚರಿಸಿ ಭಗವಾನ್ ಶಂಕರನನ್ನು ಪ್ರಸನ್ನೀಕರಿಸಿದೆನು. ಆಗ ಅವನು ಕೊಟ್ಟಿರುವ ಲಿಂಗವನ್ನು ತೆಗೆದುಕೊಂಡು ಕೂಡಲೇ ಇಲ್ಲಿಗೆ ಬಂದಿರುವೆನು. ಆದರೂ ನೀನು ಎಲ್ಲ ಋಷಿ ಜನರ ಸಮೇತವಾಗಿ ವಾಲುಕಾಮಯವಾದ ಲಿಂಗವನ್ನು ಸ್ಥಾಪಿಸಿರುವಿರಿ. ಆದರೆ ನಾನು ತಂದಿರುವ ಈ ಶಿವಲಿಂಗವನ್ನು ಇನ್ನೇನು ಮಾಡಬೇಕು? ಎಂದು ನನಗೆ ಚಿಂತೆಯುಂಟಾಗಿದೆ," ಎಂದು ನುಡಿದನು. ಆಗ ಶ್ರೀರಾಮಚಂದ್ರನು— "ಹನುಮಂತಾ, ನೀನು ಈ ಲಿಂಗವನ್ನು ಕಿತ್ತು ತೆಗೆದರೆ ಈ ಸ್ಥಳದಲ್ಲಿ ನೀನು ತಂದಿರುವ ಶಿವಲಿಂಗವನ್ನು ಸ್ಥಾಪಿಸುವೆನು" ಎಂದು ಹೇಳಿದನು. ಕೂಡಲೆ ಹನುಮಂತನು ಬಲದ ಹೆಮ್ಮೆಯಿಂದ ತನ್ನ ಬಾಲವನ್ನು ಲಿಂಗಕ್ಕೆ ಸುತ್ತಿ ಆ ಶಿವಲಿಂಗವನ್ನು ಕಿತ್ತಲು ಬಹು ಕಷ್ಟಪಟ್ಟನು. ಆದರೆ

† ಆ ಜಲಕೂಪವೇ ಕೋಟಿತೀರ್ಥವೆಂಬ ಹೆಸರಿನಿಂದ ಈಗಲೂ ಪ್ರಖ್ಯಾತವಾಗಿರುವದು.

ಜಗನ್ಮಾತೆಯು ಮಾಡಿರುವ ಲಿಂಗವು ಎಂದಾದರೂ ಕಿತ್ತಬಹುದೇ? ಈ ರೀತಿ ಹನುಮಂತನು ಎಷ್ಟೋ ಹೊತ್ತಿನ ವರೆಗೆ ಪ್ರಯತ್ನಪಟ್ಟರೂ ಆ ಲಿಂಗವನ್ನು ಕಿತ್ತುವದು ಅವನಿಂದ ಸಾಧ್ಯವಾಗಲಿಲ್ಲ. ಆಗ ಹನುಮಂತನು ನಾಚಿಕೆಯಿಂದಲೂ, ದುಃಖದಿಂದಲೂ ದೀನವದನನಾಗಿ ಕೈಜೋಡಿಸಿಕೊಂಡು ಶ್ರೀರಾಮಚಂದ್ರನ ಸನ್ಮುಖವಾಗಿ ನಿಂತನು.

ತನ್ನ ಬಳಿಯಲ್ಲಿ ದೀನವದನನಾಗಿ ನಿಂತಿರುವ ಹನುಮಂತನನ್ನು ಕಂಡು— "ಹೇ ವಾನರಶ್ರೇಷ್ಠನೇ, ಈ ಸಂಸಾರದಲ್ಲಿ ಯಾವನು ಜನ್ಮವೆತ್ತಿರುವನೋ ಅವನು ಎಂದಾದರೊಂದು ದಿನ ಮರಣಹೊಂದಲೇಬೇಕು. ಎಲ್ಲ ಜನರು ಸ್ವಜನರ ಸಲುವಾಗಿಯೂ, ಪರಜನರ ಸಲುವಾಗಿಯೂ ಕಷ್ಟಪಟ್ಟು ಮಾಯಾಮೋಹದಲ್ಲಿ ಸಿಲುಕಿ ದುಃಖಕ್ಕೆ ಗುರಿಯಾಗುವರು. ಕಾರಣ ಹನುಮಂತಾ, ಜೀವಾತ್ಮನು ತನ್ನ ಕರ್ಮಾನುಸಾರವಾಗಿ ಒಬ್ಬನೇ ಹುಟ್ಟುತ್ತಾನೆ. ಮತ್ತೆ ಒಬ್ಬನೇ ಹೋಗುತ್ತಾನೆ. ಅದೇ ಕರ್ಮಾನುಸಾರವಾಗಿ ಅವನು ನರಕಯಾತನೆಯನ್ನು ಸಹ ಭೋಗಿಸುವನು. ಕಾರಣ ನೀನು ಈ ಜ್ಞಾನವನ್ನರಿತು ವ್ಯರ್ಥ ದುಃಖಿಸಬೇಡ. ಈ ಆತ್ಮನು ಸ್ವಯಂಪ್ರಕಾಶಮಯವಾಗಿರುವನು. ಅಂತೆಯೇ ನೀನು ಸದಾ ಆತ್ಮಚಿಂತನದಲ್ಲಿ ನಿರತನಾಗು. ಈ ದೇಹದ ಮೇಲಿನ ಮಮತೆಯನ್ನು ಬಿಟ್ಟು ಸದಾ ಧಾರ್ಮಿಕ ಕರ್ಮಗಳಲ್ಲಿ ನಿರತನಾಗು. ಸ್ವಧರ್ಮವನ್ನು ಆಶ್ರಯಿಸು. ಸತ್ಪುರುಷರನ್ನು ಸೇವಿಸು. ಇಂದ್ರಿಯಗಳನ್ನು ಸಂಪೂರ್ಣವಾಗಿ ಜಯಿಸು. ಪರರನ್ನು ನಿಂದಿಸಬೇಡ; ಪರರ ನಿಂದೆಯನ್ನು ಕೇಳಬೇಡ. ಹರಿಹರಾದಿಗಳನ್ನು ಒಂದೇ ಭಾವದಿಂದ ಪೂಜಿಸು. ಸದಾ ಸತ್ಯತನದಿಂದಲೇ ನಡೆ. ಶೋಕವನ್ನು ತ್ಯಜಿಸಿ ಜೀವಾತ್ಮನಲ್ಲಿಯೂ, ಪರಮಾತ್ಮನಲ್ಲಿಯೂ ಐಕ್ಯಭಾವವನ್ನು ತಾಳು. ಈ ಸಂಸಾರದಲ್ಲಿ ಸುಖದುಃಖಗಳು ಮಾಯಾಮೋಹದಿಂದಲೇ ಪ್ರಾಪ್ತವಾಗುತ್ತವೆ. ಮಾಯಾ

ಮೋಹಕ್ಕೊಳಗಾಗಿ ಮನುಷ್ಯನು ಭಿನ್ನ ಭಿನ್ನ ವಿಷಯವನ್ನು ಅನುಭೋಗಿಸಿ ರಾಗದ್ವೇಷಗಳಿಂದ ಬಂಧಮುಕ್ತನಾಗಲಾರನು. ಆದ್ದರಿಂದ ಧರ್ಮಾಧರ್ಮಗಳನ್ನು ಮರೆತು ತನ್ನ ಕರ್ಮಾನುಸಾರವಾಗಿ ದೇವ, ತಿರ್ಯಕ್, ಮನುಷ್ಯ, ಪಶು-ಪಕ್ಷಿ ಇತ್ಯಾದಿ ಯೋನಿಗಳಲ್ಲಿ ಜನಿಸುವನು. ಮತ್ತು ಆ ಜನ್ಮದಲ್ಲಿಯೇ ಅವನು ಸುಖವಿದೆಯೆಂದು ಭಾವಿಸುವನು. "ಈ ಶರೀರದ ಸಂಪರ್ಕದಿಂದ ಸೇವಿಸಿದ ಉತ್ತಮೋತ್ತಮವಾದ ಪದಾರ್ಥಗಳು ಕೂಡ ಮಲರೂಪವನ್ನು ಹೊಂದುವವು. ಮತ್ತು ಸುಗಂಧಿತವಾದ ಜಲಪಾನವನ್ನು ಮಾಡಿದುದು ಸಹ ಮೂತ್ರರೂಪವನ್ನು ಹೊಂದುವದು. ಇಂಥ ಈ ದೇಹದ ಮೇಲೆ ಮಮತೆಯನ್ನು ಮಾಡಿ ಸುಖ ಪಡೆಯುವದೆಂದರೆ ಕೇವಲ ಭ್ರಾಂತಿಯಲ್ಲವೇ? ಕಾರಣ ಹೇ ವಾಯುನಂದನಾ, ನೀನು ಪರಮಾರ್ಥವನ್ನು ಸಾಧಿಸು. ಈ ಜೀವವು ಮೊದಲು ಜನ್ಮವೆತ್ತಿ ಕೆಲವು ದಿನ ಬಾಲ್ಯಾವಸ್ಥೆಯಲ್ಲಿ ಕಳೆಯುವದು. ಅನಂತರ ತರುಣಾವಸ್ಥೆಯನ್ನು ಹೊಂದಿ ಅದರಲ್ಲಿ ಸುಖ ದುಃಖಗಳನ್ನು ಅನುಭೋಗಿಸುವದು. ವೃದ್ಧಾಪ್ಯಕಾಲವನ್ನು ಹೊಂದಿ ಪರಮಾತ್ಮನ ಸ್ಮರಣೆಯನ್ನು ಮರೆತು ಬಹು ಕಷ್ಟಕ್ಕೀಡಾಗಿ ಮರಣಹೊಂದುವದು. ಈ ರೀತಿ ಅದು ಕಷ್ಟಕ್ಕೆ ಗುರಿಯಾಗುವದು. ಹೇ ಪವನಕುಮಾರನೇ, ಜ್ಞಾನವೆಂಬ ಖಡ್ಗದಿಂದಲೇ ಅಜ್ಞಾನವೆಂಬ ಅಂಧಕಾರವು ನಾಶವಾಗುವದು. ಅದು ಕರ್ಮದಿಂದ ಅಲ್ಲ. ಜ್ಞಾನವು ಪರಬ್ರಹ್ಮ ಪರಮಾತ್ಮನ ಹೆಸರಿರುವನು. ವೇದಾಂತದಿಂದಲೂ, ಶ್ರವಣದಿಂದಲೂ, ಮನನದಿಂದಲೂ ಆಗುವ ಜ್ಞಾನವು ವಿರಕ್ತವುಳ್ಳ ಪುರುಷನಿಗೆ ಮಾತ್ರ ಅದು ಸಾಧ್ಯವು. ಅನ್ಯರಿಗೆ ಅದು ಅಸಾಧ್ಯ. ಅಂಥ ಜ್ಞಾನವನ್ನು ಪಡೆಯಬೇಕಾಗಿದ್ದರೆ ಗುರುದೇವನ ಕೃಪೆಯಿಲ್ಲದೆ ಅದು ಆಗಲಾರದು." ಎಂದು ನಾನಾವಿಧವಾಗಿ ಬೋಧಿಸಿದನು.

ಶ್ರೀರಾಮಚಂದ್ರನ ಉಪದೇಶಾಮೃತವನ್ನು ಸೇವಿಸಿ ಹನುಮಂತನು ಸಾಷ್ಟಾಂಗವೆರಗಿದನು. ಅನಂತರ ಕೈಜೋಡಿಸಿ ನಿಂತುಕೊಂಡು "ಹೇ ಜಾನಕೀ ವಲ್ಲಭ ಶ್ರೀರಾಮಚಂದ್ರನೇ, ನಿನಗೆ ನನ್ನ ನಮಸ್ಕಾರವು ಯೋಗಿಜನ ಮನರಂಜನ ಶ್ರೀರಾಮಚಂದ್ರನೇ, ನಿನಗೆ ನನ್ನ ನಮಸ್ಕಾರವು. ಚಂದ್ರನ ಸಮಾನ ಆಹ್ಲಾದವನ್ನುಂಟುಮಾಡುವ ಶ್ರೀರಾಮಚಂದ್ರನೇ, ನಿನಗೆ ನನ್ನ ನಮಸ್ಕಾರವು. ನೀನೇ ತಾರಕ ಬ್ರಹ್ಮನು ನಿನಗೆ ನಮಸ್ಕಾರವು. ಭಕ್ತರಿಗೆ ಅಭಯವನ್ನೀಯುವಂಥ ದೇವ ದೇವೇಶ್ವರನೇ, ನೀನು ನನಗೆ ಪ್ರಸನ್ನನಾಗು. ಕರುಣಾ ಸಿಂಧು ಶ್ರೀರಾಮಚಂದ್ರನೇ ನಾನು ನಿನಗೆ ನಮಸ್ಕರಿಸುವೆನು, ನೀನು ನನ್ನನ್ನು ರಕ್ಷಿಸು. ವೇದಗಳಲ್ಲಿ ಅಗ್ರಗಣ್ಯನಾಗಿರುವ ರಾಘವೇಂದ್ರನೇ ನನ್ನನ್ನು ರಕ್ಷಿಸು, ನಾನು ನಿನಗೆ ಶರಣು ಬಂದಿರುವೆನು. ರಘುವೀರಾ, ನನ್ನ ಈ ಮಾಯಾ ಮೋಹವನ್ನು ನಾಶಮಾಡಿ ಸದಾ ಸರ್ವಕಾಲದಲ್ಲಿಯೂ ನೀನು ನನ್ನನ್ನು ಕಾಪಾಡು. ಮೂರು ಲೋಕಗಳಲ್ಲಿಯೂ ಸಹ ನಿನ್ನಂಥ ಅಪಾರ ಮಹಿಮನನ್ನು ನಾಕಾಣೆ. ರಘುಕುಲಕ್ಕೆ ಭೂಷಣನಾದ ಶ್ರೀರಾಮಚಂದ್ರನೇ, ನಿನ್ನ ಮಹಿಮೆಯು ಅನ್ಯರಿಗೆ ತಿಳಿಯಲು ಅಸಾಧ್ಯವು. ಈ ರೀತಿ ಶ್ರೀರಾಮಚಂದ್ರನನ್ನು ಸ್ತುತಿಸಿದನು. ಅನಂತರ ಅತಿ ಭಕ್ತಿಯಿಂದ ಜಗನ್ಮಾತೆಯಾದ ಸೀತಾಮಾತೆಯನ್ನು ಸ್ತುತಿಸಿದನು. "ಹೇ ಜನಕನಂದಿನೀ, ನಾನು ನಿನಗೆ ನಮಸ್ಕರಿಸುವೆನು. ಭಕ್ತರ ಎಲ್ಲ ಪಾಪಗಳನ್ನು ನಾಶಗೊಳಿಸಿ ಅವರ ದಾರಿದ್ರ್ಯವನ್ನು ದೂರಮಾಡಿ ಅಭೀಷ್ಟಗಳನ್ನು ಪೂರ್ತಿಗೊಳಿಸುವಂಥ ಜಗನ್ಮಾತೆಯೇ ನಿನಗೆ ನಮಸ್ಕಾರವು. ಶ್ರೀರಾಮಚಂದ್ರನಿಗೆ ಆನಂದವನ್ನುಂಟು ಮಾಡುವಂಥ ಜನಕ ಕುಮಾರಿಯೇ, ನಿನಗೆ ನನ್ನ ನಮಸ್ಕಾರವು. ಜಗತ್ಕಲ್ಯಾಣಾರ್ಥವಾಗಿ ಪ್ರಕೃತಿ ರೂಪವನ್ನು ಧರಿಸಿರುವ ಜಗಜ್ಜನನೀ ನಿನಗೆ ನಮಸ್ಕಾರವು. ವಿಷ್ಣು



ಕೋದಂಡ ರಾಮ

ಪ್ರೀಯಳಾದ ಲಕ್ಷ್ಮಿಯು ನೀನಿರುವಿ. ವೇದತ್ರಯಿಯಾದ ಪಾರ್ವತಿ ಸ್ವರೂಪವೇ ನಿನ್ನದು, ಅಂಥನಿನಗೆ ನನ್ನನಮಸ್ಕಾರವು. ನೀನು ಧರ್ಮಕ್ಕೆ ಆಶ್ರಯವಾಗಿರುವಂಥ ವೇದಮಾತೃ ಗಾಯಿತ್ರಿಯಾಗಿರುವೆ. ಕಮಲ ದಲ್ಲಿ ನಿನ್ನ ನಿವಾಸಸ್ಥಾನವಿರುವದು. ನಿನ್ನ ಕರಕಮಲದಲ್ಲಿ ಕಮಲ ವನ್ನು ಧರಿಸಿರುವಿ. ಕಮಲನಯನನರಾಣಿ ಕಮಲಾಕ್ಷಿಯೇ ನಿನಗೆ ನನ್ನ ನಮಸ್ಕಾರವು. ಭಗವಾನ್ ವಿಷ್ಣುವಿನ ವಕ್ಷಸ್ಥಳದಲ್ಲಿ ವಾಸಿಸುತ್ತಿರುವಂಥ ಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರವು. ಚಂದ್ರ ಮಂಡಲದಲ್ಲಿ ಶೋಭಿಸುವ ಚಂದ್ರನಂತಿರುವ ಚಂದ್ರಮುಖಿ ಸೀತಾ ಮಾತೆಯೇ ನಿನಗೆ ನನ್ನ ನಮಸ್ಕಾರವು. ಶ್ರೀರಾಮಚಂದ್ರನ ಪ್ರಿಯ ತಮೆಯಾದ ಜಗದಂಬೆಯೇ ನಿನಗೆ ನನ್ನ ನಮಸ್ಕಾರವು. ಸರ್ವಾಂಗ ಸುಂದರಿ ಸೀತಾದೇವಿಯೇ ನಾನು ನಿನ್ನನ್ನು ನನ್ನ ಹೃದಯಕಮಲದಲ್ಲಿ ಯಾವಾಗಲೂ ಚಿಂತನೆಯನ್ನು ಮಾಡುವೆನು'' ಈ ರೀತಿಯಾಗಿ ಹನು ಮಂತನು ಶ್ರೀರಾಮಚಂದ್ರನನ್ನೂ ಸೀತಾಮಾತೆಯನ್ನು ಪರಿಪರಿ ಯಾಗಿ ಸ್ತುತಿಸಿ ಸಾಷ್ಟಾಂಗವೆರಗಿದನು.

ಇಷ್ಟಾದನಂತರ ಶ್ರೀರಾಮಚಂದ್ರನು ರಾಮೇಶ್ವರನ ಉತ್ತರ ದಿಕ್ಕಿನಲ್ಲಿ ಹನುಮಂತನು ತಂದಿರುವ ಲಿಂಗವನ್ನು ಸ್ಥಾಪಿಸಲು ಆಜ್ಞೆ ಯನ್ನು ಕೊಟ್ಟನು. ಈ ರೀತಿಯಾಗಿ ಹನುಮಂತನ ಶಿವಲಿಂಗವನ್ನು ಸ್ಥಾಪಿಸಿ ಶ್ರೀರಾಮಚಂದ್ರನು ''ಪವನಕುಮಾರನೇ, ಈ ನಿನ್ನ ಲಿಂಗವು ಮೂರು ಲೋಕಗಳಲ್ಲಿ '' ಹನೂಮದ್ದೀಶ್ವರನೆಂಬ '' ಹೆಸರಿನಿಂದ ಪ್ರಖ್ಯಾತವಾಗಿ ಉಳಿಯುವದು. ಮೊದಲು ನಿನ್ನ ಲಿಂಗದ ದರ್ಶನ ವನ್ನು ತೆಗೆದುಕೊಂಡು ಆನಂತರ ರಾಮೇಶ್ವರನ ದರ್ಶನವನ್ನು ಜನರು ತೆಗೆದುಕೊಳ್ಳುವರು. ನೀನು ಮಾಡಿರುವ ಬ್ರಹ್ಮರಾಕ್ಷಸರ ಹತ್ಯೆಯ ಪಾಪದಿಂದ ನೀನು ಮುಕ್ತನಾದಿ" ಎಂದು ಹೇಳಿದನು.

ಈ ರೀತಿಯಾಗಿ ಭೂಲೋಕದಲ್ಲಿ ಶ್ರೀರಾಮಚಂದ್ರನು ಬ್ರಹ್ಮ ಹತ್ಯಾ ದೋಷದ ನಿವಾರಣಾರ್ಥವಾಗಿ ಸ್ಥಾಪಿಸಿದ ಆ ಶಿವಲಿಂಗವು ಇಂದಿಗೂ ಭಕ್ತರ ಮನೋಭಿಷ್ಟಗಳನ್ನು ಪೂರೈಸುತ್ತಿರುವದು.

---

## ೨೧. ಪಟ್ಟಾಭಿಷೇಕ

ಶ್ರೀರಾಮಚಂದ್ರನು ಅಂದಿನ ರಾತ್ರಿ ಎಲ್ಲರ ಸಮೇತನಾಗಿ ಆನಂದದಿಂದ ಕಾಲ ಕಳೆದು ಮರುದಿವಸ ಬೆಳಗಿನಜಾವದಲ್ಲೆದ್ದು ನಿತ್ಯನೈಮಿತ್ತಿಕ ಕರ್ಮಗಳನ್ನು ತೀರಿಸಿಕೊಂಡು ವಿಭೀಷಣನನ್ನು ಕುರಿತು— "ನಾವು ಇನ್ನು ಬೇಗ ಅಯೋಧ್ಯೆಗೆ ಹೊರಡಬೇಕಾಗಿದೆ. ತಮ್ಮನಾದ ಭರತನು ನನ್ನ ಹಾದಿಯನ್ನು ಕಾಯುತ್ತಿರುವನು. ಕಾರಣ ನಮ್ಮ ಹೊರಡುವ ಸಿದ್ಧತೆಯನ್ನು ಮಾಡಬೇಕು. ಇಲ್ಲವಾದರೆ ಅವನು ಪ್ರಾಣವನ್ನು ಕೊಡಬಹುದು." ಎಂದು ಹೇಳಿದನು. ಆ ಮಾತು ಕೇಳಿ ವಿಭೀಷಣನು— "ಪ್ರಭೋ, ತಾವು ಒಂದು ದಿವಸವಾದರೂ ನಮ್ಮ ರಾಜಧಾನಿಗೆ ಬಂದು ನಾನು ಮಾಡುವ ಅಲ್ಪ ಸತ್ಕಾರವನ್ನು ಸ್ವೀಕರಿಸಬೇಕೆಂದು ನನ್ನ ಇಚ್ಛೆಯಿದೆ." ಎಂದು ಹೇಳಿದನು. ಆ ಮಾತು ಕೇಳಿ ಶ್ರೀರಾಮಚಂದ್ರನು— "ವಿಭೀಷಣಾ, ನನಗೆ ಮಾಡುವ ಆದರ ಸತ್ಕಾರವನ್ನು ಈ ನನ್ನ ಸೇನೆಗೆ ಮಾಡಬಹುದು. ಕಾರಣ ಅವರು ಇಂದಿನ ವರೆಗೆ ತಮ್ಮ ಜೀವದ ಪರಿವೆ ಇಲ್ಲದೇ ಕಾದಿರುವರು. ಅದರಿಂದಲೇ ನಿನಗೆ ಈ ರಾಜ್ಯಲಕ್ಷ್ಮಿಯು ದೊರೆತಿರುವಳು. ಅದಕ್ಕಾಗಿ ನೀನು ಅವರಿಗೆ ಮರ್ಯಾದೆಯನ್ನು ಸಲ್ಲಿಸಿದರೆ ಅದು ನನಗೆ ಸಲ್ಲಿಸಿದಂತಾಗುವದು." ಎಂದು ಹೇಳಿದನು.

ಆಗ ವಿಭೀಷಣನು ಎಲ್ಲ ಸೇನೆಯನ್ನು ಅತಿ ಪ್ರೇಮದಿಂದ ಕಂಡು ತರ ತರದ ವಸ್ತ್ರಾಲಂಕಾರಗಳಿಂದ ಸತ್ಕರಿಸಿದನು. ಮತ್ತು ಪುಷ್ಪಕವಿಮಾನ ವನ್ನು ತರಿಸಿ ಶ್ರೀರಾಮಚಂದ್ರನ ಹೊರಡುವ ಸಿದ್ಧತೆಯನ್ನು ಮಾಡಿ ದನು. ಕೂಡಲೇ ಶ್ರೀರಾಮಚಂದ್ರನು ಸೀತಾ ಲಕ್ಷ್ಮಣರ ಸಮೇತ ವಿಮಾನಾರೂಢನಾಗಿ ಎಲ್ಲರನ್ನು ಕರೆದು— "ಸುಗ್ರೀವಾ, ವಿಭೀಷಣಾ, ಹನುಮಂತಾ, ಜಾಂಬುವಂತಾ ನೀವೆಲ್ಲರೂ ಇಂದಿನ ವರೆಗೆ ನನ್ನ ಸಲುವಾಗಿ ಬಹಳ ಕಷ್ಟಪಟ್ಟಿರುವಿರಿ. ಕಾರಣ ನೀವು ಇನ್ನು ನಿಮ್ಮ ನಿಮ್ಮ ಮನೆಗಳಿಗೆ ಹೋಗಿ ಸುಖದಿಂದ ಕಾಲಕಳೆಯ ಬಹುದು." ಎಂದು ಹೇಳಿದನು. ಆಗ ಅವರೆಲ್ಲರೂ ಕೈ ಜೋಡಿಸಿ— "ಮಹಾಪ್ರಭೋ, ನಾವು ತಮ್ಮ ಸಂಗಡ ಅಯೋಧ್ಯೆಗೆ ಬರುವೆವು. ಕೌಸಲ್ಯಾಮಾತೆ, ಭರತ, ಶತ್ರುಘ್ನರ ದರ್ಶನವನ್ನು ತೆಗೆದುಕೊಂಡು ತಮ್ಮ ರಾಜ್ಯಾಭಿಷೇಕವನ್ನು ನೋಡಿ ಅನಂತರ ನಮ್ಮ ನಮ್ಮ ಮನೆ ಗಳಿಗೆ ಹೋಗುವೆವು." ಎಂದು ಹಟ ಹಿಡಿದರು. ಅವರ ಮಾತಿಗೆ ಶ್ರೀರಾಮಚಂದ್ರನು ಒಪ್ಪಿಕೊಂಡು ಎಲ್ಲರನ್ನೂ ವಿಮಾನದಲ್ಲಿ ಕುಳ್ಳಿರಿ ಸಿಕೊಂಡು ಅಯೋಧ್ಯೆಯ ಕಡೆಗೆ ಸಾಗಿದನು. ಹೋಗುತ್ತ ಮಾರ್ಗ ದಲ್ಲಿ ಶ್ರೀರಾಮಚಂದ್ರನು ಸೀತೆಗೆ ಬೇರೆ ಬೇರೆ ಪ್ರದೇಶಗಳನ್ನು ತೋರಿಸುತ್ತ: "ಸೀತಾ, ಇದೋ ನೋಡು ಇಲ್ಲಿ ನಾನು ಈ ಭಯಂ ಕರವಾದ ಸಮುದ್ರದ ಮೇಲೆ ನಲನಿಂದ ಸೇತುವನ್ನು ಕಟ್ಟಿಸಿದೆನು. ಅಂದಿನಿಂದ ಈ ಸ್ಥಳವು ಸೇತುಬಂಧ ತೀರ್ಥವೆಂಬ ಹೆಸರಿನಿಂದ ಪ್ರಖ್ಯಾತಿಹೊಂದಿದೆ. ಇಗೋ ಈಸುಂದರವಾದ ಕಿಷ್ಕಿಂಧಾನಗರವನ್ನು ನೋಡು. ಇಲ್ಲಿ ನಾನು ವಾಲಿಯನ್ನು ಸಂಹರಿಸಿ ಸುಗ್ರೀವನಿಗೆ ರಾಜ್ಯ ವನ್ನು ಕೊಟ್ಟೆನು." ಎಂದು ಹೇಳಿದನು. ಆ ಮಾತು ಕೇಳಿ ಸೀತೆ "ಮಹಾರಾಜಾ, ನನಗೆ ಎಲ್ಲ ವಾನರ ಸ್ತ್ರೀಯರನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಬೇಕೆಂಬ ಇಚ್ಛೆಯಿದೆ" ಎಂದು ಹೇಳಿದಳು.

ಕೂಡಲೇ ಶ್ರೀರಾಮಚಂದ್ರನು ಪುಷ್ಪಕ ವಿಮಾನವನ್ನು ಕೆಳಗಿಳಿಸಿ ಎಲ್ಲ ಸ್ತ್ರೀಯರನ್ನು ಕರೆದುಕೊಂಡು ಬರಲು ಸುಗ್ರೀವನಿಗೆ ಆಜ್ಞೆ ಯನ್ನು ಕೊಟ್ಟನು. ಅದರಂತೆ ಸುಗ್ರೀವನು ಆನಂದದಿಂದ ತಾರೆ ಸಹಿತವಾಗಿ ಎಲ್ಲ ಸ್ತ್ರೀಯರನ್ನು ಕರೆದುಕೊಂಡು ಬಂದನು. ಮುಂದೆ ಅವರೆಲ್ಲರೂ ಸೀತೆಯ ದರ್ಶನವನ್ನು ತೆಗೆದುಕೊಂಡು ನಮಸ್ಕರಿಸಿ ವಿಮಾನದಲ್ಲಿ ಕುಳಿತರು. ಆಗ ಅದು ಪುನಃ ಆಕಾಶಮಾರ್ಗವಾಗಿ ಹೊರಟಿತು. ಋಷ್ಯಮೂಕ ಪರ್ವತವನ್ನು ಕಂಡು ಶ್ರೀರಾಮ ಚಂದ್ರನು ಸೀತೆಯನ್ನು ಕುರಿತು— “ ಸೀತೆ, ಇದು ನೋಡು ಋಷ್ಯ ಮೂಕ ಪರ್ವತವು. ಇಲ್ಲಿ ನಾನು ಸುಗ್ರೀವನ ಸಂಗಡ ಗೆಳೆತನವನ್ನು ಮಾಡಿದೆನು. ಈ ಸುಂದರವಾದ ಪಂಪಾಸರೋವರವನ್ನು ನೋಡು. ನಾನು ನಿನ್ನ ಸಲುವಾಗಿ ಈ ಪಂಪಾಸರೋವರದ ತೀರದಲ್ಲಿ ಬಹು ಪರಿಯಾಗಿ ಶೋಕಿಸಿದೆನು. ಇದೋ ಈ ಪಂಚವಟಿಯು ಕಾಣುತ್ತಿ ರುವದು. ಇಲ್ಲಿ ಹರಿಯುತ್ತಿರುವ ಈ ಗೋದಾವರಿ ನದಿಯು ಇದೇ. ಈ ವಟವೃಕ್ಷದ ಮೇಲೆ ಕೂಡ್ರುತ್ತಿದ್ದ ಜಟಾಯುವು ನಿನ್ನ ಸಲುವಾಗಿ ರಾವಣನ ಮೇಲೆ ಏರಿ ಹೋಗಿ ಪ್ರಾಣವನ್ನು ತ್ಯಜಿಸಿದನು. ಇಲ್ಲಿ ಕಾಣುತ್ತಿರುವ ಅತ್ರಿ ಮುನಿಯ ಆಶ್ರಮವನ್ನು ನೋಡು. ಈ ಚಿತ್ರ ಕೂಟ ಪರ್ವತವನ್ನು ನೋಡು ಇಲ್ಲಿಯೇ ಸಮೀಪದಲ್ಲಿ ಭಾರದ್ವಾ ಜರ ಆಶ್ರಮವಿರುವದು ” ಎಂದು ಹೇಳುತ್ತ ಎಲ್ಲ ಪುಣ್ಯ ಭೂಮಿ ಗಳನ್ನು ತೋರಿಸುತ್ತ “ ಅದೋ ನೋಡು ಅಲ್ಲಿ ಕಾಣುತ್ತಿರುವದೇ ಅಯೋಧ್ಯಾ. ಸೀತಾ, ಜನ್ಮಭೂಮಿಯಾದ ಅಯೋಧ್ಯೆಗೆ ನಮಸ್ಕ ರಿಸು. ನಾವು ಹದಿನಾಲ್ಕು ವರ್ಷಗಳನ್ನು ಕಳೆದು ಮರಳಿ ನಮ್ಮ ಜನ್ಮಭೂಮಿಗೆ ಬಂದೆವು.” ಎಂದು ಹೇಳಿದನು. ಅನಂತರ ಪುಷ್ಪಕ ವಿಮಾನವನ್ನು ಭಾರದ್ವಾಜ ಆಶ್ರಮದಲ್ಲಿ ಇಳಿಸಿದನು. ಆಗ ಅವರೆ ಲ್ಲರೂ ಭಾರದ್ವಾಜರ ದರ್ಶನವನ್ನು ತೆಗೆದುಕೊಂಡರು. ಮುಂದೆ

ಶ್ರೀರಾಮಚಂದ್ರನು ಭಾರದ್ವಾಜರನ್ನು ಕುರಿತು ಅಯೋಧ್ಯೆಯ ಕುಶಲ ವರ್ತಮಾನವನ್ನು ಕೇಳಿಕೊಂಡನು. ಅಂದು ರಾತ್ರಿ ಭಾರ ದ್ವಾಜರ ಆಶ್ರಮದಲ್ಲಿ ಕಳೆದು ಮರುದಿವಸ ನಂದಿಗ್ರಾಮಕ್ಕೆ ಹೊರಟರು.

ಭರತನ ಮನೋಭಾವವನ್ನು ತಿಳಿದುಕೊಳ್ಳುವದರ ಸಲುವಾಗಿ ತಾನು ಬರುತ್ತಿರುವೆನೆಂದು ಭರತನಿಗೆ ತಿಳಿಸಲು ಹನುಮಂತನನ್ನು ಕಳುಹಿದನು. ಕೂಡಲೇ ಹನುಮಂತನು ಶೃಂಗವೇರಕ್ಕೆ ಬಂದು ಗೂಹ ಕನಿಗೆ ಎಲ್ಲ ಸಂಗತಿಗಳನ್ನು ಅರುಹಿದನು. ಇತ್ತ ಶ್ರೀರಾಮಚಂದ್ರನು ಹದಿನಾಲ್ಕು ವರ್ಷಗಳಾದರೂ ಇನ್ನೂ ಬಾರದ್ದರಿಂದ ಭರತನು ಚಿತೆ ಯನ್ನು ತಯಾರಿಸಿ ಅಗ್ನಿಪ್ರವೇಶ ಮಾಡಲು ಸಿದ್ಧನಾಗಿದ್ದನು. ಅಷ್ಟ ರಲ್ಲಿ ಹನುಮಂತನು ನಂದಿಗ್ರಾಮಕ್ಕೆ ಹೋಗಿ ಭರತನನ್ನು ಕಂಡು ಸಾಷ್ಟಾಂಗವೆರಗಿ ಶ್ರೀರಾಮಚಂದ್ರನು ಬರುತ್ತಿರುವ ಆನಂದದ ಸುದ್ದಿ ಯನ್ನುಅರುಹಿದನು. ಭ್ರಾತೃವತ್ಸಲನಾದ ಭರತನು ಆ ಸುದ್ದಿಯನ್ನು ಕೇಳಿ ಅತಿ ಆನಂದದ ಉನ್ಮಾದದಲ್ಲಿ ಮೂರ್ಛಿತನಾದನು. ಮುಂದೆ ತುಸು ಹೊತ್ತಿನಲ್ಲಿ ಆತನು ಎಚ್ಚತ್ತು ಪವನಕುಮಾರನನ್ನು ಗಟ್ಟಿ ಯಾಗಿ ಆಲಿಂಗಿಸಿ ತನ್ನ ಆನಂದಾಶ್ರುಗಳಿಂದ ಅವನಿಗೆ ಸ್ನಾನವನ್ನು ಮಾಡಿಸಿದನು. ಮತ್ತು— "ನೀನು ದೇವನೋ? ಮನುಷ್ಯನೋ? ಯಾವನೇ ಆಗಲಿ ನೀನು ತಂದಿರುವ ಆನಂದದ ಸುದ್ದಿಯ ಸಲುವಾಗಿ ನಿನಗೆ ನೂರು ಊರುಗಳು ಮತ್ತು ಒಂದು ಸಾವಿರ ಆಕಳು ಗಳನ್ನು ಬಹುಮಾನ ಕೊಟ್ಟಿರುತ್ತೇನೆ." ಎಂದು ಹೇಳಿದನು. ಭರತನು ಈ ಸುದ್ಧಿಯನ್ನು ಶತ್ರುಘ್ನನಿಗೆ ತಿಳಿಸಿ ಊರು ಬಾಗಿಲುಗಳನ್ನುತಳಿರು ತೋರಣಗಳಿಂದ, ನಗರವನ್ನು ಶೃಂಗರಿಸಲು ತನ್ನ ದೂತನಿಂದ ಹೇಳಿ ಕಳುಹಿದನು. ಭರತನ ಆಜ್ಞೆಯ ಮೇರೆಗೆ ಶತ್ರುಘ್ನನು ಪಟ್ಟಣವನ್ನು ಶೃಂಗರಿಸಲು ಮಂತ್ರಿಗಳಿಗೆ ಹೇಳಿ ಪುರವಾಸಿಗಳಿಗೆ ಶ್ರೀರಾಮಚಂದ್ರನು

ಬರುತ್ತಿರುವ ಆನಂದದ ಸುದ್ದಿಯನ್ನು ತಿಳಿಸಲು ಡಂಗುರ ಸಾರಲು ಹೇಳಿದನು. ಈ ರೀತಿ ಶತ್ರುಘ್ನನು ಪಟ್ಟಣವನ್ನು ಶೃಂಗರಿಸಿ ಎಲ್ಲ ವಾದ್ಯ ವೈಭವಗಳಿಂದ ರಾಜಗುರು ವಶಿಷ್ಠರು, ರಾಜಮಾತೆಯರಾದ ಕೌಸಲ್ಯಾ, ಸುಮಿತ್ರೆ, ಕೈಕೆಯಿಯರ ಸಮೇತವಾಗಿ ಪುರವಾಸಿಗಳನ್ನು ಕರೆದುಕೊಂಡು ಸಕಲ ಮಂಗಲ ಸಾಮಗ್ರಿಗಳನ್ನು ತೆಗೆದುಕೊಂಡು ನಂದಿಗ್ರಾಮಕ್ಕೆ ಬಂದು ತಲುಪಿದನು.

ಇತ್ತ ಭರತನು ಶ್ರೀರಾಮಚಂದ್ರನ ಎಲ್ಲಸಂಗತಿಯನ್ನು ಕೇಳುತ್ತ ಹನುಮಂತನಿಗೆ, "ನೀನು ಯಾರು? ಎಲ್ಲಿಂದ ಬಂದೆ?" ಎಂದು ಕೇಳುತ್ತ ಕುಳಿತಿರುವಷ್ಟರಲ್ಲಿ ಶತ್ರುಘ್ನನು ಬಂದು ಭರತನಿಗೆ ನಮಸ್ಕರಿಸಿದನು. ಅಷ್ಟರಲ್ಲಿ ಪುಷ್ಪಕವಿಮಾನದಲ್ಲಿ ಕುಳಿತು ಶ್ರೀರಾಮಚಂದ್ರನು ಬರುತ್ತಿರುವದನ್ನು ಹನುಮಂತನು ಕಂಡು ಹಿಡಿದು ಭರತನಿಗೆ ಹೇಳಿದನು. ಕೂಡಲೇ ಭರತನು ಶ್ರೀರಾಮಚಂದ್ರನ ಪಾದುಕೆಗಳನ್ನು ಮಸ್ತಕದಲ್ಲಿಟ್ಟುಕೊಂಡು ಛತ್ರ—ಚಾಮರಗಳಿಂದ ಶೋಭಿಸುತ್ತ ಶ್ರೀರಾಮಚಂದ್ರನಿಗೆ ಎದುರ್ಗೊಳ್ಳಲು ಸಿದ್ಧನಾಗಿ ನಿಂತನು. ತುಸುಹೊತ್ತಿನಲ್ಲಿಯೇ ಪುಷ್ಪಕವಿಮಾನವು ಅಲ್ಲಿಗೆ ಬಂದಿಳಿಯಿತು. ಆಗ ಭರತನು ಶ್ರೀರಾಮಚಂದ್ರನನ್ನು ಕಂಡು ತನ್ನ ಮಸ್ತಕದಲ್ಲಿರುವ ಪಾದುಕೆಗಳನ್ನು ಮುಂದಿಟ್ಟು ಸಾಷ್ಟಾಂಗವೆರಗಿ ದೀನವದನನಾಗಿ ನೋಡುತ್ತ ನಿಂತುಕೊಂಡನು. ಕೂಡಲೇ ಶ್ರೀರಾಮಚಂದ್ರನು ಮುಂದೆ ಬಂದು ಅತಿ ಪ್ರೇಮದಿಂದ ಬಿಗಿದಪ್ಪಿ "ಭರತಾ, ನೀನು ನನ್ನ ಚಿಂತೆಯಿಂದ ಎಷ್ಟು ಕೃಶನಾಗಿರುವೆ" ಎಂದೆನ್ನುತ್ತ ಅವನ ಮಸ್ತಕದ ಮೇಲೆ ಪ್ರೇಮದಿಂದ ಕೈಯಾಡಿಸಿದನು. ಅನಂತರ ಭರತನು ಸೀತಾಮಾತೆಗೆ ನಮಸ್ಕರಿಸಿದನು. ಲಕ್ಷ್ಮಣ, ಸುಗ್ರೀವಾದಿಗಳನ್ನು ಪ್ರೇಮದಿಂದ ಆಲಿಂಗಿಸುತ್ತ ಅವರ ಕುಶಲವಾರ್ತೆಗಳನ್ನು ಕೇಳಿಕೊಂಡನು.




ಶ್ರೀರಾಮಚಂದ್ರನು ಭರತನಿಗೆ ಭೆಟ್ಟಿಯಾದುದು.

ಶ್ರೀರಾಮಚಂದ್ರನು ಕೈಕೇಯಿ, ಸುಮಿತ್ರೆ, ಕೌಶಲ್ಯಾದಿ ಮಾತೆಯರಿಗೆ ನಮಸ್ಕರಿಸಿದನು. ಶ್ರೀರಾಮಚಂದ್ರನನ್ನು ಕಂಡು ವೃದ್ಧಳಾದ ಕೌಸಲ್ಯೆಯು ನೇತ್ರಗಳಿಂದ ಆನಂದ ಬಾಷ್ಪಗಳು ಅಮೃತಬಿಂದುಗಳಂತೆ ಅವನ ಮಸ್ತಕದ ಮೇಲೆ ಉದುರಿದವು. ಶ್ರೀರಾಮಚಂದ್ರನು ಗುರುಗಳಾದ ವಶಿಷ್ಠರಿಗೆ ಸಾಷ್ಟಾಂಗವೆರಗಿದನು. ಮತ್ತು ಮಂತ್ರಿ ಪ್ರಜಾಜನರೆಲ್ಲರನ್ನು ಪ್ರೇಮದಿಂದ ಅವಲೋಕಿಸುತ್ತ ಎಲ್ಲರ ಕುಶಲವರ್ತಮಾನವನ್ನು ತಿಳಿದುಕೊಂಡನು. ಸೀತೆಯು ಕೌಸಲ್ಯಾ, ಸುಮಿತ್ರೆ,

ಕೈಕೇಯಿ ಮುಂತಾದವರಿಗೆ ನಮಸ್ಕರಿಸಿದಳು. ಆಗ ಕೌಸಲ್ಯೆಯು ಅವಳನ್ನು ಅತಿಪ್ರೇಮದಿಂದ ಬಿಗಿದಪ್ಪಿ "ಸೀತೇ, ನೀನು ವನವಾಸದ ಕ್ಲೇಶಗಳಿಂದ ಎಷ್ಟು ಕೃಶಳಾಗಿರುವೆ" ಎಂದು ಅವಳ ಮಸ್ತಕದ ಮೇಲೆ ಕೈಯಾಡಿಸಿದಳು. ಮುಂದೆ ತಾರಾ, ಪ್ರಭೃತಿ ಸ್ತ್ರೀಯರೆಲ್ಲರೂ ರಾಜಮಾತೆಯರಿಗೆ ನಮಸ್ಕರಿಸಿದರು. ಆಗ ಸೀತೆಯು ಅವರೆಲ್ಲರ ಪರಿಚಯವನ್ನು ಮಾಡಿಕೊಟ್ಟಳು. ಈ ರೀತಿ ಅವರೆಲ್ಲರೂ ಅತಿ ಆನಂದ ದಿಂದ ಅಂದು ಕಾಲಕಳೆದರು. ಅನಂತರ ಭರತನು ತಾನು ತಂದಿಟ್ಟಿರುವ ಪಾದುಕೆಗಳನ್ನು ಶ್ರೀರಾಮಚಂದ್ರನ ಚರಣಗಳಲ್ಲಿರಿಸಿ "ಹೇ ರಾಮಚಂದ್ರಾ, ನಿಮ್ಮ ಈ ಪಾದುಕೆಗಳನ್ನು ನಾನು ಇದುವರೆಗೆ ಬಹಳ ಕಷ್ಟಪಟ್ಟು ಸಂರಕ್ಷಿಸಿರುವೆನು. ಈಗ ಈ ರಾಜ್ಯ ಕಾರಭಾರವನ್ನೂ ದಶಗುಣಿತವಾದ ಬೊಕ್ಕಸವನ್ನೂ ನಿಮ್ಮ ಸ್ವಾಧೀನಕ್ಕೆ ನಾನು ಒಪ್ಪಿಸಿ ಕೃತಾರ್ಥನಾಗುವೆನು. ನೀವು ರಾಜ್ಯಸಿಂಹಾಸನವನ್ನು ಏರುವದನ್ನು ಕಂಡು ಎಲ್ಲ ಪ್ರಜರು ಅತಿ ಸಂತುಷ್ಟರಾಗುವರು" ಎಂದು ಹೇಳಿದನು. ಮತ್ತು ರಾಜ ಗುರುಗಳಾದ ವಶಿಷ್ಠರಿಗೆ ರಾಜ್ಯಾಭಿಷೇಕವನ್ನು ಬೇಗ ನೆರವೇರಿಸಲು ಹೇಳಿದನು. ಭರತನ ಭ್ರಾತೃಪ್ರೇಮವನ್ನು ಕಂಡು ಅಲ್ಲಿ ನೆರೆದಿರುವ ಪ್ರಜೆಗಳ ನೇತ್ರಗಳಿಂದ ಆನಂದ ಬಾಷ್ಪಗಳುದುರಿದವು. ಅನಂತರ ಸುಮಂತ ಪ್ರಧಾನಿಯು ಮೊದಲು ಭರತನ ಜಡೆಗಳನ್ನು ಹಿಂದಿನಿಂದ ರಾಮ-ಲಕ್ಷ್ಮಣರ ಜಡೆಗಳನ್ನೂ ತೆಗೆಯಿಸಿದನು. ತರುವಾಯ ಸುಗಂಧಿತ ದ್ರವ್ಯಗಳನ್ನು ಅವರ ಮೈಗೆ ಪೂಸಿ ಮಂಗಲ ಸ್ನಾನವನ್ನು ಮಾಡಿಸಿದನು. ಇತ್ತ ಕೌಸಲ್ಯಾಮಾತೆಯು ಸೀತಾದೇವಿಯನ್ನೂ, ವಾನರ ಸ್ತ್ರೀಯರನ್ನೂ ಮಂಗಲ ಸ್ನಾನವನ್ನು ಮಾಡಿಸಿ ವಸ್ತ್ರಾಲಂಕಾರಗಳಿಂದ ಸತ್ಕರಿಸಿದಳು. ಈ ರೀತಿ ಅವರೆಲ್ಲರೂ ಉತ್ತಮೋತ್ತಮ ವಸ್ತ್ರಾಲಂಕಾರಗಳಿಂದ ಸುಶೋಭಿಸುವಷ್ಟರಲ್ಲಿ ಸುಮಂತನು ನಾನಾ ರತ್ನಗಳಿಂದಲೂ, ಎಂಟು ಅಶ್ವಗಳಿಂದಲೂ

ಶೋಭಿಸುತ್ತಿರುವ ರಾಜರಥವನ್ನು ತಂದು ನಿಲ್ಲಿಸಿದನು. ಅದರಲ್ಲಿ ರಾಮ-ಲಕ್ಷ್ಮಣ—ಸೀತೆಯರು ಬಂದು ಕುಳ್ಳಿರಲು ಶತ್ರುಘ್ನನು ಶ್ರೀರಾಮಚಂದ್ರನ ಮೇಲೆ ಛತ್ರವನ್ನು ಹಿಡಿದನು. ವಿಭೀಷಣನು ಚಾಮರವನ್ನು ಬೀಸುತ್ತಿದ್ದನು. ಭರತನು ತಾನೇ ರಥವನ್ನು ನಡಿಸುವ ಕೆಲಸವನ್ನು ಮಾಡಹತ್ತಿದನು. ಸುಗ್ರೀವಾದಿ ವೀರರೆಲ್ಲರೂ ಆನೆಯ ಮೇಲೆ ಕುಳಿತುಕೊಂಡು ಹೊರಟರು. ಹೀಗೆ ಅವರೆಲ್ಲರೂ ಅಯೋಧ್ಯೆಗೆ ಸಾಗಿದರು.

ತುಸು ಹೊತ್ತಿನಲ್ಲಿಯೇ ತಳಿರು ತೋರಣಗಳಿಂದ ಶೋಭಿಸುತ್ತಿರುವ ಅಯೋಧ್ಯಾ ಪಟ್ಟಣವನ್ನು ಶ್ರೀರಾಮಚಂದ್ರನು ಸೇರಿದನು. ಅಲ್ಲಿರುವ ನರನಾರಿಯರೆಲ್ಲರೂ ಶ್ರೀರಾಮಚಂದ್ರನ ಜಯಘೋಷವನ್ನು ಮಾಡುತ್ತ ಅವರ ಮೇಲೆ ಹೂಮಳೆಗರೆದರು. ಹೀಗೆ ಆ ರಥವು ಅರಮನೆಯ ಸಮೀಪಕ್ಕೆ ಬರಲು ಶ್ರೀರಾಮಚಂದ್ರನು ಕೆಳಗಿಳಿದನು. ಅಲ್ಲಿರುವ ರಾಜಕನ್ನಿಕೆಯರೆಲ್ಲರೂ ಸುವರ್ಣಕಲಶಗಳಿಂದ ಶ್ರೀರಾಮಚಂದ್ರನ ಪಾದಗಳನ್ನು ತೊಳೆದು ಅವರಿಗೆ ನಿವಾಳಿಯನ್ನು ತೆಗೆದರು. ಅನಂತರ ಅವರೆಲ್ಲರೂ ರಾಜಮಂದಿರವನ್ನು ಪ್ರವೇಶಿಸಿದರು. ತಾವು ಇರುತ್ತಿರುವ ಅರಮನೆಯಲ್ಲಿ ಸುಗ್ರೀವಾದಿ ವೀರರನ್ನು ಇಳಿಸಲು ಭರತನಿಗೆ ಶ್ರೀರಾಮನು ಹೇಳಿದನು.

ಅವರೆಲ್ಲರೂ ಅಯೋಧ್ಯಾ ಪಟ್ಟಣವನ್ನು ಸೇರಿದ ನಂತರ ಭರತನು ಸುವರ್ಣಕಲಶಗಳನ್ನು ತಂದು ಕೊಟ್ಟು ರಾಜ್ಯಾಭಿಷೇಕದ ಸಲುವಾಗಿ ಚತುಃ ಸಮುದ್ರಜಲವನ್ನು ಅವುಗಳಲ್ಲಿ ತರಿಸಲು ಸುಗ್ರೀವನಿಗೆ ಹೇಳಿದನು. ಅನಂತರ ಸುಗ್ರೀವನು ನಲ, ನೀಲ, ಅಂಗದ, ಹನುಮಂತಾದಿ ವೀರರನ್ನು ಸಮುದ್ರಜಲವನ್ನು ತರಲು ನಾಲ್ಕೂ ದಿಕ್ಕಿಗೆ ಕಳುಹಿದನು. ಸಂಜೆಯ ವರೆಗೆ ರಾಜ್ಯಾಭಿಷೇಕದ ಸಿದ್ಧತೆ

ಗೊಳಿಸಿದರು. ಮರುದಿವಸ ವಶಿಷ್ಠಾದಿ ಸಪ್ತಋಷಿಗಳೆಲ್ಲರೂ ಸುಮುಹೂರ್ತದಲ್ಲಿ ಶ್ರೀರಾಮಚಂದ್ರ-ಸೀತೆಯರನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಚತುಃಸಮುದ್ರದ ಜಲದಿಂದ ರಾಜ್ಯಾಭಿಷೇಕ ಸಮಾರಂಭ ವನ್ನು ಬಹಳ ವಿಜೃಂಭಣೆಯಿಂದ ಮಾಡಿ ಬ್ರಹ್ಮದೇವನಿಂದ ನಿರ್ಮಿತ



ಶ್ರೀರಾಮಚಂದ್ರನು ಸಿಂಹಾಸನವೇರಿದ್ದು

ವಾದ ರಾಜಮುಕುಟವನ್ನು ಶ್ರೀರಾಮಚಂದ್ರನ ಮಸ್ತಕದಲ್ಲಿರಿಸಿದರು. ಆಗ ಎಲ್ಲ ಜನರು ಜಯಜಯಕಾರವನ್ನು ಮಾಡಿದರು. ಮಂಗಲ ವಾದ್ಯಗಳು ಮೊಳಗಿದವು. ವಶಿಷ್ಠಮಹರ್ಷಿಗಳು ರಾಜಪೋಷಾಕು ಗಳನ್ನು ಧರಿಸಲು ಹೇಳಿದರು. ಭರತ-ಶತ್ರುಘ್ನರು ಛತ್ರ-ಚಾಮರ ಗಳನ್ನು ಹಿಡಿದರು. ಅನಂತರ ಶ್ರೀರಾಮಚಂದ್ರನು ೩೦ ಕೋಟಿ ಸುವರ್ಣ ವರಹಗಳನ್ನು ಬ್ರಾಹ್ಮಣರಿಗೆ ದಕ್ಷಿಣೆಯಾಗಿ ಕೊಟ್ಟನು. ಸುಗ್ರೀವಾದಿ ವೀರರೆಲ್ಲರಿಗೂ ನಾನಾ ವಸ್ತ್ರಾಲಂಕಾರಗಳನ್ನು ಕೊಟ್ಟು ಸತ್ಕರಿಸಿದನು. ಇತ್ತ ಸೀತೆಯು ತನ್ನ ಕೊರಳೊಳಗಿನ ರತ್ನಹಾರ ವನ್ನು ತೆಗೆದು ಕೈಯಲ್ಲಿ ಹಿಡಿದು ಶ್ರೀರಾಮಚಂದ್ರನನ್ನು ನೋಡಹತ್ತಿ ದಳು. ಅವಳ ಈ ಮನೋಭಾವವನ್ನು ತಿಳಿದು ಶ್ರೀರಾಮಚಂದ್ರನು ಆ ರತ್ನಹಾರವನ್ನು ಹನುಮಂತನಿಗೆ ಕೊಡಲು ಹೇಳಿದನು. ಅದರಂತೆ. ಸೀತೆಯು ಹನುಮಂತನನ್ನು ಕರೆದು- "ಆಂಜನೇಯಾ, ನಿನ್ನಲ್ಲಿ ಬುದ್ಧಿ, ತೇಜ, ಬಲ, ಧೈರ್ಯ, ವಿನಯ, ಪರಾಕ್ರಮಗಳಿರುವದ ರಿಂದ ಈ ಹಾರವು ನಿನ್ನ ಕೊರಳಲ್ಲಿರಲಿ." ಎಂದು ಹೇಳಿ ಅವನ ಕೊರಳಲ್ಲಿ ಹಾಕಿದಳು. ಆಗ ಸಭಿಕರೆಲ್ಲರೂ ಹನುಮಂತನ ಜಯ ಜಯಕಾರವನ್ನು ಮಾಡಿದರು.

ಅನಂತರ ಹನುಮಂತನು ತನ್ನ ಕೊರಳೊಳಗಿನ ನವರತ್ನದ ಹಾರವನ್ನು ತೆಗೆದುಕೊಂಡು ಅದರಲ್ಲಿಯ ಒಂದೊಂದು ಮಣಿಯನ್ನು ಹಲ್ಲಲ್ಲಿ ಹಾಕಿ ಕಡಿದೊಗೆಯಹತ್ತಿದನು. ಆಗ ಸುಗ್ರೀವಾದಿಗಳೆಲ್ಲರೂ "ಹನುಮಂತಾ, ಇಂಥ ಸುಂದರವಾದ ರತ್ನಹಾರವನ್ನು ಕಡಿದು ಚಲ್ಲುವ ಕಾರಣವೇನು?" ಎಂದು ಕೇಳಿದರು. ಅವರ ಮಾತನ್ನು ಕೇಳಿ ಹನುಮನು- "ಈ ರತ್ನಗಳಲ್ಲಿ ಶ್ರೀರಾಮಚಂದ್ರನು ಇಲ್ಲದ್ದ ರಿಂದ ಹೀಗೆ ಒಗೆಯುತ್ತಿರುವೆನು." ಎಂದು ಹೇಳಿದನು. ಅವನ ಮಾತಿಗೆ ಅವರೆಲ್ಲರೂ ನಗುತ್ತ "ಹಾಗಾದರೆ, ನಿನ್ನಲ್ಲಿಯಾದರೂ

ಇರುವನೇ ಹೇಳು ?" ಎಂದು ಕೇಳಿದರು. ಆಗ ಹನುಮಂತನು–
" ಇದೋ ನೋಡಿರಿ. ಶ್ರೀರಾಮಚಂದ್ರನು ನನ್ನ ಹೃದಯಸಿಂಹಾಸನ



ಧ್ಯಾನಾಸಕ್ತ ಭಕ್ತ ಹನುಮಾನ

ದಲ್ಲಿ ಕುಳಿತಿರುವನು" ಎಂದು ಶ್ರೀರಾಮಚಂದ್ರನನ್ನು ಧ್ಯಾನಿಸುತ್ತ ತನ್ನ ಎದೆಯನ್ನು ಎರಡೂಕೈಗಳಿಂದ ಸೀಳಿ ಅದರಲ್ಲಿ ಶ್ರೀರಾಮಚಂದ್ರನನ್ನು ತೋರಿಸಿದನು. ಅವನ ಈ ಭಕ್ತಿಯನ್ನು ಕಂಡು ಶ್ರೀರಾಮಚಂದ್ರನು ಅವನಿಗೆ ವರವನ್ನು ಕೊಡಲುದ್ಯುಕ್ತನಾದನು. ಆಗ ಅವನು "ಪ್ರಭೋ, ನಾನು ಯಾವಾಗಲೂ ತಮ್ಮ ದಾಸನಾಗಿ ಉಳಿಯಬೇಕು. ಮತ್ತು ಯಾವಾಗಲೂ ತಮ್ಮ ಧ್ಯಾನದಲ್ಲಿ ಮಗ್ನನಾಗಬೇಕು." ಎಂದು ವರವನ್ನು ಕೇಳಿಕೊಂಡನು. ಅದರಂತೆ ಶ್ರೀರಾಮಚಂದ್ರನು ಅನುಗ್ರಹಿಸಿದನು.

ಹನುಮಂತನ ಈ ಭಕ್ತಿಯನ್ನು ಕಂಡು ಅವರೆಲ್ಲರೂ ಪರಮಾಶ್ಚರ್ಯಪಟ್ಟರು. ಹೀಗೆ ಶ್ರೀರಾಮಚಂದ್ರನ ರಾಜ್ಯಾಭಿಷೇಕ ಸಮಾರಂಭವು ಬಹಳ ವಿಜೃಂಭಣೆಯಿಂದ ಸಾಗಿತು. ಮುಂದೆ ಸುಗ್ರೀವಾದಿಗಳೆಲ್ಲರೂ ಅತ್ಯಾನಂದದಿಂದ ತಮ್ಮ ಸ್ವಸ್ಥಾನಕ್ಕೆ ತೆರಳಿದರು.

---

## ೨೨. ಲವ-ಕುಶರ ಜನನ

ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿ ರಾಜ್ಯವಾಳುತ್ತಿರುವಾಗ ಎಲ್ಲ ಕಡೆಯಲ್ಲಿಯೂ ಸುಖ ಸಮೃದ್ಧಿಗಳು ಉಂಟಾಗಿದ್ದವು. ತಾಪಸಿಗಳೆಲ್ಲರೂ ಅತಿ ನಿರ್ಭಯರಾಗಿ ತಮ್ಮ ತಪಸ್ಸನ್ನು ಆಚರಿಸುತ್ತಿದ್ದರು. ರಾಮರಾಜ್ಯದಲ್ಲಿ ಯಾರೂ ಅಕಾಲಿಕವಾಗಿ ಮರಣಹೊಂದುತ್ತಿರಲಿಲ್ಲ. ವಿಧವಾ ಸ್ತ್ರೀಯರು ರಾಮರಾಜ್ಯದಲ್ಲಿ ಕಣ್ಣಿಗೆ ಬೀಳುತ್ತಿರಲಿಲ್ಲ. ಸಕಾಲಕ್ಕೆ ಪರ್ಜನ್ಯವೃಷ್ಟಿಯಾಗಿ ದೇಶವು ಧನಧಾನ್ಯಗಳಿಂದ ಸುಖಸಮೃದ್ಧವಾಗಿತ್ತು. ಅದರಿಂದ ಭಿಕ್ಷೆ ಬೇಡುವವರೇ ಇಲ್ಲದಂತಾಗಿತ್ತು.

ಜಾರ, ಚೋರರ ಹಾವಳಿಯು ಇರಲಿಲ್ಲ. ಎಲ್ಲರೂ ಸತ್ಯವನ್ನು ನುಡಿಯುತ್ತಿದ್ದರು. ಅದರಿಂದ ದೇಶದಲ್ಲಿ ಕೊಲೆ, ಸುಲಿಗೆ, ಕಳವು ಮುಂತಾದವು ಎಂದೂ ನಡೆಯುತ್ತಿರಲಿಲ್ಲ. ಶ್ರೀರಾಮಚಂದ್ರನು ಹತ್ತು ಸಾವಿರ ವರುಷ ಸುಖವಾಗಿ ರಾಜ್ಯವಾಳಿದನು.

ಕೆಲವು ದಿವಸಗಳ ತರುವಾಯ ಸೀತಾಮಾತೆಯು ಗರ್ಭವತಿಯಾದಳು. ಆಗ ಅಯೋಧ್ಯೆಯ ಜನರ ಆನಂದಕ್ಕೆ ಎಣೆ ಇಲ್ಲದಂತಾಯಿತು. ಕೌಸಲ್ಯಾ ಮಾತೆಯ ಆನಂದವನ್ನಂತೂ ಹೇಳಲಾಸಲ್ಲ. ಶ್ರೀರಾಮಚಂದ್ರನಂತೂ ಸೀತೆಯ ಮನಸ್ಸನ್ನು ಸಂತುಷ್ಟವಾಗಿಡಲು ಯಾವಾಗಲೂ ಯತ್ನಿಸುತ್ತಿದ್ದನು. ಅವಳು ವನವಾಸದಲ್ಲಿ ಬಹುಪರಿಯಾಗಿ ದುಃಖಪಟ್ಟಿರುವದರಿಂದ ಇನ್ನಾದರೂ ಮುಂದೆ ಅವಳಿಗೆ ಕಷ್ಟವಾಗಬಾರದೆಂದು ಯತ್ನಿಸುತ್ತಿದ್ದನು. ಹೀಗಿರುವಾಗ ಅವನು ಒಂದು ದಿನ ಸೀತೆಯನ್ನು ಕುರಿತು— "ಸೀತೆಯೇ, ನಿನಗೆ ಏನು ಬಯಕೆ ಇರುವದು ಹೇಳು; ಅದನ್ನು ನಾನು ಪೂರೈಸುವೆನು." ಎಂದು ಕೇಳಿದನು. ಆದರೆ ಆ ಧರ್ಮಪರಾಯಣಳಾದ ಸಾಧ್ವಿಗೆ ಅಂಥಿಂಥ ಬಯಕೆ ಎಂದಾದರೂ ಆಗುವವೇ ? ಅವಳು ಶ್ರೀರಾಮಚಂದ್ರನನ್ನು ಕುರಿತು— "ಪ್ರಭು, ಗಂಗಾ ತೀರದಲ್ಲಿರುವ ಋಷಿಗಳ ಪತ್ನಿಯರಿಗೆ ಉತ್ತಮೋತ್ತಮ ವಸ್ತ್ರಾಲಂಕಾರಗಳನ್ನು ಕೊಟ್ಟು ಬರಬೇಕೆಂದು ನನಗೆ ಇಚ್ಛೆಯಾಗಿದೆ." ಎಂದು ಉತ್ತರವಿತ್ತಳು. ಅವಳ ನುಡಿ ಕೇಳಿ ಶ್ರೀರಾಮಚಂದ್ರನು "ಹೊರಡುವ ಸಿದ್ಧತೆಯನ್ನು ತೀವ್ರವಾಗಿ ಮಾಡು. ನಿನ್ನ ಬಯಕೆಯನ್ನು ನೆರವೇರಿಸುವೆನು. ನೀನು ನಿಶ್ಚಿಂತೆಯಾಗಿರು." ಎಂದು ಸಮಾಧಾನವನ್ನು ಹೇಳಿ ಅಂತಃಪುರದಿಂದ ರಾಜಸಭೆಗೆ ಬಂದನು.

ಮನುಷ್ಯನು ತಾನೊಂದು ಬಯಸಿದರೆ ದೈವವು ಬೇರೊಂದು ಬಗೆಯುವದು. ವಿಧಿಘಟನೆಯು ಬಹಳ ವಿಚಿತ್ರವಾಗಿದೆ. ಅದನ್ನು

ಮೀರಲು ಯಾರಿಗೂ ಸಾಧ್ಯವಿಲ್ಲ. ಯಾವ ಪ್ರಸಂಗವು ಬರಬಾರದೆಂದು ನಾವು ಇಷ್ಟಪಡುವೆವೋ ಅದು ಬಂದೇತೀರುವದು. ಎಲ್ಲವು ಕಾಲಾನುಸಾರವಾಗಿ ನಡೆದು ಹೋಗುವುದು. ಸೀತಾ—ರಾಮರ ಸುಖ ಸಂಸಾರದಲ್ಲಿ ಮತ್ತೆ ದುಃಖದ ಕಾರ್ಮೋಡಗಳು ಬಂದವು. ಅವರ ಆಯುಷ್ಯದ ಕೊನೆಯ ಭಾಗವು ದುಃಖಪ್ರದವಾಗಿ ಪರಿಣಮಿಸುವ ಚಿಹ್ನಗಳು ಉದ್ಭವಿಸಿದವು. ಎಂಥ ದುಃಖದ ಪ್ರಸಂಗದಲ್ಲಿಯೂ ಮನುಷ್ಯನು ಹೇಗೆ ಸ್ಥಿರಚಿತ್ತನಾಗಿ ನಡೆದುಕೊಳ್ಳಬೇಕೆಂಬುದನ್ನು ಶ್ರೀರಾಮನು ಜಗತ್ತಿಗೆ ಚನ್ನಾಗಿ ತೋರಿಸಿದನು. ಶ್ರೀರಾಮನು ರಾಜಸಭೆಯಲ್ಲಿ ನಿತ್ಯದಂತೆ ಪ್ರಜರ ಸಂಗಡ ಆನಂದದಿಂದ ಮಾತನಾಡುತ್ತ ಕುಳಿತಿರುವಾಗ ಸಹಜ ರೀತಿಯಿಂದ ಅವರನ್ನು ಕುರಿತು— “ ಪ್ರಿಯ ಪ್ರಜಾಜನರೇ, ಜನರು ನನ್ನ ಬಗ್ಗೆ ಮುಖ್ಯವಾಗಿ ಏನೆಂದು ಆಡಿಕೊಳ್ಳುತ್ತಿರುವರು ? ” ಎಂದು ಪ್ರಶ್ನಮಾಡಿದನು. ಆಗ ಭದ್ರನೆಂಬ ದೂತನು ಎದ್ದುನಿಂತು ಕೈಜೋಡಿಸಿ ವಿನಯದಿಂದ— “ ಜೀಯಾ, ರಾಜಬೀದಿ, ಚಾವಡಿ, ಪೇಟೆ, ಉಪವನಗಳಲ್ಲಿ ಜನರು ತಮ್ಮ ಪರಾಕ್ರಮದ ವರ್ಣನೆಯನ್ನು ಮಾಡುವುದನ್ನೇ ನಾನು ಕೇಳಿರುವೆನು. ತಾವು ಸಮುದ್ರದ ಮೇಲೆ ಸೇತುವೆ ಕಟ್ಟಿದ್ದನ್ನು ಕೇಳಿ ಜನರು ಬೊಟ್ಟು ಕಚ್ಚುತ್ತಿರುವರು ದೇವ—ದಾನವರಿಗೆ ಅಸಾಧ್ಯವಾದ ಕಾರ್ಯಗಳನ್ನು ನೀವು ಯಶಸ್ವಿಯಾಗಿ ಮಾಡಿರುವುದು ಎಲ್ಲರನ್ನು ಮುಗ್ಧಗೊಳಿಸಿಬಿಟ್ಟಿದೆ. ಕಪಿಗಳ ಸಂಗಡಲೂ, ಕರಡಿಗಳ ಸಂಗಡಲೂ ತಾವು ಸಖ್ಯತ್ವ ಬೆಳೆಸಿ ಮಹಾ ಪರಾಕ್ರಮಿಯಾದ ರಾವಣನನ್ನು ಸಂಹರಿಸಿದ್ದಕ್ಕೆ ಜನರು ಆಶ್ಚರ್ಯಪಡುತ್ತಿರುವರು. ಆದರೆ ರಾವಣನ ಮನೆಯಲ್ಲಿ ಸೀತಾಮಾತೆಯು ಹಿಂದು ವರ್ಷದ ಪರಿಯಂತರವಾಗಿ ಇದ್ದುದರಿಂದ ಅವಳನ್ನು ನೀವು ಮರಳಿ ಮನೆಯಲ್ಲಿ ಇಟ್ಟುಕೊಂಡದ್ದಕ್ಕೆ ಜನರು ಆಡಿಕೊಳ್ಳುತ್ತಿರುವರು. ‘ ಯಥಾ ರಾಜಾ,

ತಥಾ ಪ್ರಜಾ' ಎಂಬಂತೆ ರಾಜನೇ ಹೀಗೆ ಅವಿಚಾರಿಯಾದರೆ ನಾವು ಏಕೆ ಅದನ್ನೇ ಆಚರಿಸಬಾರದು ?" ಎಂದು ಅನ್ನುತ್ತಿರುವರು. ದೂತನ ಈ ಮಾತುಗಳನ್ನು ಕೇಳಿ ಶ್ರೀರಾಮಚಂದ್ರನ ಹೃದಯವು ದುಃಖ ದಿಂದ ತುಂಬಿತು. ಅವನು ಸಭೆಯನ್ನು ಮುಗಿಸಿ ಚಿಂತಾತುರನಾಗಿ ಒಬ್ಬನೇ ಏಕಾಂತದಲ್ಲಿ ಹೋಗಿ ಕುಳಿತು ತನ್ನ ಮನಸ್ಸಿನಲ್ಲಿ ನಿಶ್ಚಯ ವನ್ನು ಮಾಡಿದನು. ದ್ವಾರಪಾಲಕನಿಂದ ಲಕ್ಷ್ಮಣ, ಭರತ, ಶತ್ರುಘ್ನ ರನ್ನು ಕರೆಕಳುಹಿದನು. ಶ್ರೀರಾಮಚಂದ್ರನ ಆಜ್ಞೆಯಂತೆ ಅವರು ಮೂವರೂ ಅಲ್ಲಿಗೆ ಬಂದರು. ಗ್ರಹಣ ಹಿಡಿದ ಚಂದ್ರನಂತೆ ನಿಸ್ತೇ ಜವಾದ ಶ್ರೀರಾಮಚಂದ್ರನ ಮುಖವನ್ನೂ ನೇತ್ರಗಳಿಂದ ಅಶ್ರುಧಾರೆ ಗಳು ಹರಿಯುತ್ತಿರುವದನ್ನೂ ಕಂಡು ಅವರ ಎದೆ ಒಡೆದಂತಾಯಿತು. ಮೂವರೂ ಮುಂದೆ ಬಂದು ಸಾಷ್ಟಾಂಗವೆರಗಿ ಕೈಜೋಡಿಸಿ 'ಏನ ಪ್ಪಣೆ ?' ಎಂದು ನಿಂತುಕೊಂಡರು. ಶ್ರೀರಾಮನು ಅವರನ್ನು ಪ್ರೀತಿ ಯಿಂದ ಆಲಿಂಗಿಸಿ ಉತ್ತಮವಾದ ಆಸನದಲ್ಲಿ ಕುಳ್ಳಿರಿಸಿ— "ಪ್ರಿಯ ಬಂಧುಗಳೇ, ನೀವು ನನಗೆ ಪ್ರಾಣಕ್ಕಿಂತಲೂ ಪ್ರಿಯರಾಗಿರುವಿರಿ. ನೀವು ಬುದ್ಧಿವಂತರೂ ಚತುರರೂ ಇರುವಿರಿ. ಸಕಲ ಶಸ್ತ್ರವಿದ್ಯೆಯಲ್ಲಿ ಪ್ರವೀಣರಿರುವಿರಿ. ನೀವು ನಡೆಸುತ್ತಿರುವ ರಾಜ್ಯಭಾರವನ್ನು ನಾನು ಕೇವಲ ನೋಡುತ್ತಿರುವೆನು."

ಲಕ್ಷ್ಮಣ, ಭರತ, ಶತ್ರುಘ್ನರು ದೀನವದನರಾಗಿ ಶ್ರೀರಾಮನ ಮುಖದ ಕಡೆಗೆ ನೋಡುತ್ತ ಕುಳಿತರು. ಆಗ ಶ್ರೀರಾಮಚಂದ್ರನು— "ನನ್ನ ಪ್ರೀತಿಯ ತಮ್ಮಂದಿರೇ, ನಿಮ್ಮ ಮನಸ್ಸನ್ನು ಕದಲಿಸದೆ ನಾನು ಹೇಳುವಮಾತನ್ನು ಶಾಂತರಾಗಿ ಕೇಳಿರಿ. ಜನರು ನಾನು ಸೀತೆಯನ್ನು ಮನೆಯಲ್ಲಿಟ್ಟುಕೊಂಡದ್ದಕ್ಕೆ ಆಡಿಕೊಳ್ಳುತ್ತಿರುವರು. ಈ ಜನಾಪವಾ ದದಿಂದ ನನ್ನ ಅಂತಃಕರುಣವು ಹರಿದು ಹೋಗುತ್ತಿದೆ. ಲಕ್ಷ್ಮಣಾ, ನಿನಗೆ ಎಲ್ಲ ಸಂಗತಿಯು ಗೊತ್ತಿರುವುದು. ರಾವಣನು ಸೀತೆಯನ್ನು

ಬಲಾತ್ಕಾರದಿಂದ ತೆಗೆದುಕೊಂಡು ಹೋದನು. ಅದರಲ್ಲಿ ಅವಳ ತಪ್ಪೇನು ? ಆ ಅಪವಾದವನ್ನು ತೊಳೆದುಕೊಳ್ಳುವ ಸಲುವಾಗಿ ನಾನು ಲಂಕೆಯ ಮೇಲೆ ಏರಿ ಹೋಗಿ ರಾವಣನನ್ನು ಕೊಂದೆನು. ಆಗಲೇ ನಾನು ಸೀತೆಯನ್ನು ಮರಳಿ ಸ್ವೀಕರಿಸುವುದಕ್ಕೆ ಶಂಕಿಸಿದೆನು. ಲಕ್ಷ್ಮಣಾ, ಆಗ ಅವಳು ನಿನ್ನ ಸಮ್ಮುಖದಲ್ಲಿ ಚಿತೆಯನ್ನು ತಯಾರಿಸಿ ಅಗ್ನಿಯನ್ನು ಪ್ರವೇಶಿಸಿದಳು. ಮುಂದೆ ಸಾಕ್ಷಾತ್ ಅಗ್ನಿ-ನಾರಾಯಣನೇ ಪ್ರತ್ಯಕ್ಷನಾಗಿ ಅವಳು ನಿಷ್ಪಾಪಳಿರುವಳೆಂದು ತಿಳಿಸಲಿಲ್ಲವೇ ? ಇಷ್ಟಾದನಂತರ ನಾನು ಅವಳನ್ನು ಅಯೋಧ್ಯೆಗೆ ಕರೆದುಕೊಂಡು ಬಂದು ಪಟ್ಟಾಭಿಷೇಕ ಸಮಾರಂಭವನ್ನು ಮಾಡಿಸಿಕೊಂಡೆನು. ಹೀಗಿದ್ದು ಜನರು ನನ್ನನ್ನು ಆಡಿಕೊಳ್ಳುತ್ತಿರುವರು. ಈ ಎಲ್ಲ ಸಂಗತಿಯು ಲಕ್ಷ್ಮಣಾ ನಿನಗೆ ಗೊತ್ತೇ ಇರುವದು. ಪ್ರಿಯ ಸಹೋದರರೇ, ಯಾವ ಮನುಷ್ಯನು ಜನರಲ್ಲಿ ಅಪಕೀರ್ತಿಯನ್ನು ಹೊಂದುವನೋ ಅವನು ಅಧಃಪಾತಕ್ಕೀಡಾಗುವನು. ನಮ್ಮಂಥವರು ಅಪಕೀರ್ತಿಯನ್ನು ಹೊಂದುವದು ಚನ್ನಾದುದಲ್ಲ. ಸತ್ಕೀರ್ತಿಗೆ ಜನರಷ್ಟೇ ಅಲ್ಲ ದೇವರೂ ಸಹ ಪೂಜ್ಯ ಭಾವವನ್ನು ತಾಳುವನು. ಕೀರ್ತಿವಂತನಾಗಿ ಬಾಳಬೇಕೆಂದು ಎಷ್ಟೋ ಜನರು ಪ್ರಯತ್ನ ಪಡುತ್ತಿರುವರು. ಜನರು ಅಪಕೀರ್ತಿಯ ಕಲೆಯನ್ನು ಅಳಿಸಲು ತಮ್ಮ ಪ್ರಾಣವನ್ನು ಸಹ್ಯ ಕೊಡುವರು. ನಾವಂತೂ ಅರಸರು. ನಮ್ಮ ಇಕ್ಷ್ವಾಕು ವಂಶದ ಕೀರ್ತಿಯನ್ನು ಕಾಪಾಡಿಕೊಳ್ಳುವ ಸಲುವಾಗಿ ನಾನು ದೇಹವನ್ನಾದರೂ ಬಿಡಲು ಸಿದ್ಧನಾಗುವೆನು. ಅಂದಮೇಲೆ ಸೀತೆಯ ಪಾಡೇನು ? ಇದರಿಂದ ನಾನು ಶೋಕಸಾಗರದಲ್ಲಿ ಬೀಳಬಹುದು. ಆದರೂ ಚಿಂತೆಯಿಲ್ಲ. ಪ್ರಜರ ಪ್ರೇಮವನ್ನು ಗಳಿಸುವದೇ ನನ್ನ ಕರ್ತವ್ಯವಾಗಿದೆ. ಆದಕ್ಕಾಗಿ ಲಕ್ಷ್ಮಣಾ, ನಾಳೆ ಬೆಳಗಿನಲ್ಲಿ ರಥವನ್ನು ತಯಾರಿಸಿ, ಅದರಲ್ಲಿ ಸೀತೆಯನ್ನು ಕುಳ್ಳಿರಿಸಿಕೊಂಡು, ಗಂಗಾನದಿ

ಯನ್ನು ದಾಟ ಅರಣ್ಯದಲ್ಲಿ ಬಿಟ್ಟು ಬಾ. ಅವಳು "ಗಂಗಾ ತೀರದಲ್ಲಿರುವ ಋಷಿಪತ್ನಿಯರಿಗೆ ವಸ್ತ್ರಾಲಂಕಾರಗಳನ್ನು ಕೊಟ್ಟು ಬರುವೆನೆಂದು" ತನ್ನ ಇಚ್ಛೆಯನ್ನು ನನ್ನ ಮುಂದೆ ಹೇಳಿರುವಳು. ಆದರಿಂದ ಅವಳು ನಿನ್ನ ಸಂಗಡ ಆನಂದದಿಂದ ಬರುವಳು. ಕಾರಣ ಈ ಕಾರ್ಯವನ್ನು ನೀನು ನಿಃಶಂಕಮನಸ್ಸಿನಿಂದ ಮಾಡಬೇಕೆಂದು ನನ್ನ ಆಜ್ಞೆಯಿದೆ. ಇದರ ಬಗ್ಗೆ ಯಾರೂ ಏನೂ ಹೆಚ್ಚಿಗೆ ಮಾತನಾಡಬಾರದು" ಎಂದು ಅತಿ ದುಃಖದಿಂದ ಬೇರೆ ಕಡೆಗೆ ಮುಖವನ್ನು ತಿರುಗಿಸಿ ಅವರಿಗೆ ಅಪ್ಪಣೆಯನ್ನು ಕೊಟ್ಟನು. ಅವರು ಅತಿ ಭಾರವಾದ ಮನಸ್ಸಿನಿಂದ ಅಲ್ಲಿಂದ ಹೊರಟು ಹೋದರು.

ಮರುದಿವಸ ಬೆಳಗಾಗುವದರೊಳಗಾಗಿ ಶ್ರೀರಾಮಚಂದ್ರನ ಶೀಘ್ರಗಾಮಿ ಎಂಬ ರಥದಲ್ಲಿ ಸುಮಂತನು ಸೀತಾ-ಲಕ್ಷ್ಮಣರನ್ನು ಕುಳ್ಳಿರಿಸಿಕೊಂಡು ಅತಿ ಲಗುಬಗೆಯಿಂದ ಹೊರಟನು. ರಥದಲ್ಲಿ ಕುಳಿತಿರುವ ಲಕ್ಷ್ಮಣನಿಗೆ ಮನದಲ್ಲಿ ಸೀತಾಮಾತೆಯ ವಿಯೋಗ ದುಃಖವನ್ನು ತಾಳಲಾರದೆ ಅತ್ತು ಅತ್ತು ಕಣ್ಣುಗಳು ಕೆಂಪಾಗಿದ್ದವು. ಈ ಸಂಗತಿಯನ್ನರಿಯದ ಸೀತಾಮಾತೆಯು ಬಹಳ ಆನಂದದಿಂದ ಕುಳಿತಿದ್ದಳು. ಅವಳ ಹತ್ತಿರ ಸುಂದರವಾದ ವಸ್ತ್ರಾಲಂಕಾರಗಳಿದ್ದವು. ಬಸುರಿನ ಚಿಹ್ನಗಳಿಂದ ಅವಳ ಮುಖಕಾಂತಿಯು ಹುಣ್ಣಿಮೆಯ ಚಂದ್ರನಂತೆ ಬೆಳಗುತ್ತಿತ್ತು. ಅವಳು ತನ್ನ ಹತ್ತಿರಿರುವ ವಸ್ತ್ರಾಲಂಕಾರಗಳನ್ನು ಕಂಡು "ಲಕ್ಷ್ಮಣಾ, ಈ ವಸ್ತ್ರಾಲಂಕಾರಗಳನ್ನು ಕಂಡು ಋಷಿಪತ್ನಿಯರು ಸಂತೋಷಪಡಬಹುದಲ್ಲವೇ ?" ಎಂದು ಅವನನ್ನು ಮೇಲಿಂದ ಮೇಲೆ ಕೇಳುತ್ತಿದ್ದಳು. ಅವಳ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡದೇ ಲಕ್ಷ್ಮಣನು ಕೆಳಗೆ ಮೋರೆಯನ್ನು ಹಾಕಿಕೊಂಡು ಸುಮ್ಮನೆ ಕುಳಿತುಬಿಟ್ಟಿದ್ದನು. "ಮುಂದೊದಗುವ ಕಷ್ಟದ ಪ್ರಸಂಗವನ್ನು ಇವಳ ಮುಂದೆ ಹೇಗೆ ಹೇಳಬೇಕೆಂದು ಆಲೋಚಿಸು

ತ್ತಿದ್ದನು. ದೀನವದನನಾದ ಲಕ್ಷ್ಮಣನನ್ನು ಕಂಡು " ನೀನು ಇಷ್ಟು ಉದಾಸೀನನಾಗಿರುವ ಕಾರಣವೇನು ? " ನಾವು ರಾಜಾಧಿರಾಜ ಶ್ರೀರಾಮಚಂದ್ರನನ್ನಗಲಿ ಬಹಳ ಹೊತ್ತಿನವರೆಗಿರಬೇಕಾಗಿಲ್ಲ. ಇಂದೊಂದೇ ರಾತ್ರಿಯನ್ನು ಮುನಿಗಳಾಶ್ರಮದಲ್ಲಿ ಕಳೆಯಬೇಕಾಗಿದೆ" ಎಂದು ಸೀತಾಮಾತೆಯು ಹೇಳಿದಳು. ಈ ಮಾತನ್ನು ಕೇಳಿ ಲಕ್ಷ್ಮಣನ ದುಃಖವು ಮತ್ತಷ್ಟು ಹೆಚ್ಚಿತು. " ಈ ನಿರಪರಾಧಿಯಾದ ದೇವಿಯನ್ನು ಈ ರೀತಿಯಾಗಿ ಮೋಸಗೊಳಿಸಬೇಕಾಗಿದೆಯಲ್ಲವೇ " ಎಂದು ಮನದಲ್ಲಿ ವಿಚಾರಿಸಿದನು. ಹೀಗೆ ಅವರು ಕುಳಿತಿರುವಷ್ಟರಲ್ಲಿ ಸಾಯಂಕಾಲದ ಹೊತ್ತಿಗೆ ಭಾಗೀರಥಿಯ ತೀರಕ್ಕೆ ಬಂದು ತಲುಪಿದರು. ಮುಂದೆ ಅಂಬಿಗರು ಅವರನ್ನು ಡೋಣಿಯಲ್ಲಿ ಕುಳ್ಳಿರಿಸಿ ಭಾಗೀರಥಿಯ ಆಚೆಯ ದಂಡೆಗೆ ಮುಟ್ಟಿಸಿದರು. ಲಕ್ಷ್ಮಣನು ಸೀತೆಯನ್ನು ಕೆಳಗಿಳಿಸಿದನಂತರ ತುಸು ಮುಂದಕ್ಕೆ ಕರೆದುಕೊಂಡು ಹೋಗಿ ಸಾಷ್ಟಾಂಗವೆರಗಿ ಕೈಜೋಡಿಸಿ " ಸೀತಾಮಾತೆಯೇ, " ಎಂದು ಬಹಳ ದುಃಖದಿಂದ ಮಾತನಾಡದೇ ನಿಂತು ಬಿಟ್ಟನು. ಅವನ ಈ ಸ್ಥಿತಿಯನ್ನು ಕಂಡು ಅವಳ ಎದೆಯೊಡೆದಂತಾಯಿತು. ಲಕ್ಷ್ಮಣನನ್ನು ಕುರಿತು " ಲಕ್ಷ್ಮಣಾ, ನೀನು ಇಂದು ಇಡೀ ದಿನವೆಲ್ಲ ಅಳುವ ಕಾರಣವೇನು ? ಬೇಗ ಹೇಳು " ಎಂದು ಬಹಳ ಕಳಕಳಿಯಿಂದ ಕೇಳಿದಳು. ಆಗ ಅವನು ಅತಿ ಪ್ರಯಾಸದಿಂದ " ದೇವೀ, ರಾಜಾ ರಾಮಚಂದ್ರನು ಜನಾಪವಾದಕ್ಕಂಜಿ ನಿನ್ನನ್ನು ಈ ಅರಣ್ಯದಲ್ಲಿ ಬಿಟ್ಟು ಬರಲು ಆಜ್ಞೆಯನ್ನು ಮಾಡಿರುವನು " ಎಂದು ಹೇಳಿದನು. ಅವನ ಈ ಮಾತು ಮುಗಿಯುವದರೊಳಗಾಗಿ ಕಡೆದಿರುವ ಬಾಳೆಯಗಿಡದಂತೆ ಸೀತಾಮಾತೆಯು ಒಮ್ಮೆಲೇ ಮೂರ್ಛಿತಳಾಗಿ ನೆಲಕ್ಕೆ ಬಿದ್ದಳು. ಮುಂದೆ ತುಸು ಹೊತ್ತಿನಲ್ಲಿಯೇ ಎಚ್ಚತ್ತು " ಹೇ ಕಾಲನೇ, ನೀನು ಇನ್ನೂ ನನ್ನ ಬೆನ್ನು ಬಿಟ್ಟಿರುವದಿಲ್ಲವೇ ? ನಾನು ಪೂರ್ವಜನ್ಮದಲ್ಲಿ

ಯಾವ ಪಾತಕವನ್ನು ಮಾಡಿರುವೆನು ? ಯಾವ ನೂತನ ದಂಪತಿಗಳನ್ನು ಅಗಲಿಸಿರುವೆನು? ಅಂತೆಯೇ ವಿಧಿಯು ನನ್ನನ್ನು ಈ ರೀತಿಯಾಗಿ ಹಿಂಬಾಲಿಸುತ್ತಿರುವುದು. ಬ್ರಹ್ಮದೇವನು ನನ್ನ ಹಣೆಯಲ್ಲಿ ದುಃಖವನ್ನೇ ಬರೆದಿರಬಹುದೇ ? ಅಂತೆಯೇ ನಾನು ನನ್ನ ಪತಿಯನ್ನಗಲಿ ಈ ಪರಿಯಾಗಿ ದುಃಖಿಸಬೇಕಾಗಿದೆ. ಲಕ್ಷ್ಮಣಾ, ನಾನು ನಿಮ್ಮೆಲ್ಲರ ಸಮಕ್ಷಮವಾಗಿ ಅಗ್ನಿಪ್ರವೇಶವನ್ನು ಮಾಡಿ ನನ್ನ ಪಾತಿವ್ರತ್ಯದ ಬಗ್ಗೆ ಸಂದೇಹವುಂಟಾಗದಂತೆ ನಡೆದು ತೋರಿಸಲಿಲ್ಲವೇ ? ಆದರೂ ನ್ಯಾಯ ನೀತಿಗಳಿಂದ ಪ್ರಜೆಗಳನ್ನು ಪಾಲಿಸುತ್ತಿರುವ ಮಹಾರಾಜರು ಜನಾಪವಾದಕ್ಕಂಜಿ ನನ್ನನ್ನು ಬಿಟ್ಟರಲ್ಲ ! ” ಎಂದು ಬಹುಪರಿಯಾಗಿ ಶೋಕಿಸಿದಳು. “ ಲಕ್ಷ್ಮಣಾ, ನಾನು ಇನ್ನು ಜೀವದಿಂದ ಬದುಕಿಯಾದರೂ ಫಲವೇನು ? ನಿನ್ನ ಸಮಕ್ಷಮದಲ್ಲಿಯೇ ಈ ಗಂಗಾ ನದಿಯಲ್ಲಿ ಧುಮುಕಿ ಪ್ರಾಣ ತ್ಯಜಿಸಬೇಕೆಂದೆನಿಸುತ್ತದೆ. ಆದರೆ ಶ್ರೀರಾಮಚಂದ್ರನ ವಂಶಾಂಕುರವು ನನ್ನ ಉದರದಲ್ಲಿರುವದರಿಂದ ಹಾಗೆ ಮಾಡುವಂತಿಲ್ಲ. ಲಕ್ಷ್ಮಣಾ ಇನ್ನು ನೀನು ಬೇಗ ಹೊರಡು. ನಾನು ನನ್ನ ಪ್ರಾರಬ್ಧದಲ್ಲಿರುವದನ್ನು ಅನುಭೋಗಿಸಿಯೇ ತೀರುವೆನು. ಅತ್ತೆಯವರಿಗೆ ನನ್ನ ನಮಸ್ಕಾರವನ್ನು ಹೇಳು. ಸತಿಗೆ ಪತಿಯೇ ದೇವರು. ಸರ್ವಸ್ವವೂ ಪತಿಯೇ ಇರುವದರಿಂದ ಅವರ ಆಜ್ಞೆಯಂತೆ ನಡೆಯುವದೇ ನನ್ನ ಕರ್ತವ್ಯವೆಂದು ನಾನು ಭಾವಿಸಿರುವೆನು. ಪತಿಗೆ ಕಲಂಕ ಬಾರದಂತೆ ನಡೆದುಕೊಳ್ಳುವದೇ ನನ್ನ ಧರ್ಮವಾಗಿದೆ ಎಂದು ನಾನು ತಿಳಿದಿರುವೆನು. ಅಂವಮೇಲೆ ಅವರು ನನ್ನನ್ನು ತ್ಯಜಿಸಿದುದು ಸರ್ವಥೈವ ಯೋಗ್ಯವಾಗಿರುತ್ತದೆ. ಜನ್ಮಾಂತರದಲ್ಲಿಯೂ ಇವರೇ ನನಗೆ ಪತಿಯಾಗಿ ದೊರಕಲೆಂದು ನಾನು ಪರಮೇಶ್ವರನನ್ನು ಪ್ರಾರ್ಥಿಸುವೆನು ಇನ್ನು ಮುಂದೆ ಅವರು ನನ್ನನ್ನು ತಮ್ಮ ಪತ್ನಿಯೆಂದು ಪ್ರೇಮವನ್ನು ಮಾಡದೇ ಕೇವಲ ಒಬ್ಬ ತಪಸ್ವಿನಿಯೆಂದು ತಿಳಿದು ನನ್ನ ಮೇಲೆ

ಸದೈವ ಕೃಪಾದೃಷ್ಟಿಯನ್ನಿಡಲಿ.” ಎಂದು ಕಣ್ಣನ್ನೊರಿಸಿಕೊಳ್ಳುತ್ತ ಮಾತನಾಡಿದಳು. ಪತಿವ್ರತೆಯ ಪತಿಪ್ರೇಮವನ್ನೂ ಸದಾಚರಣವನ್ನೂ ಸದ್ಭಕ್ತಿಯನ್ನೂ ಕಂಡು ಲಕ್ಷ್ಮಣನ ನೇತ್ರಗಳಿಂದ ಅಶ್ರುಧಾರೆಗಳು ಒಂದೇಸವನೆ ಹರಿಯತ್ತಿಹದವು. ಅವಳು— “ಲಕ್ಷ್ಮಣಾ, ಇನ್ನು ನೀನು ಹೋಗು. ನೀನು ನಿನ್ನ ಕರ್ತವ್ಯವನ್ನು ಪರಿಪಾಲಿಸಿದೆ. ಆದರೆ ನಾನು ಬಸುರಿಯಾಗಿರುವದನ್ನು ಮಹಾರಾಜರಿಗೆ ಲಕ್ಷದಲ್ಲಿಡಲು ಹೇಳು. ಮತ್ತು ಅವರಿಗೆ ನನ್ನ ಸಾಷ್ಟಾಂಗ ನಮಸ್ಕಾರವನ್ನು ಹೇಳು.” ಎಂದು ಹೇಳಿದಳು. ಅವಳ ಆಜ್ಞೆಯನ್ನು ಪಡೆದು ಲಕ್ಷ್ಮಣನು ಸಾಷ್ಟಾಂಗವೆರಗಿ ಪ್ರದಕ್ಷಿಣೆಯನ್ನು ಹಾಕಿದನು. ಅಲ್ಲಿಂದ ಹೊರಟು ಗಂಗಾ ನದಿಯನ್ನು ದಾಟಿದನು.

ಲಕ್ಷ್ಮಣನು ಹೋದ ತರುವಾಯ ಸೀತಾಮಾತೆಯು ಮುಕ್ತಕಂಠಳಾಗಿ ಒಂದೇಸವನೆ ದೊಡ್ಡ ಧ್ವನಿಯಿಂದ ಅಳಹತ್ತಿದಳು. ಅವಳ ಈ ಶೋಕವನ್ನು ಕೇಳಿ ಅಲ್ಲಿರುವ ಪಶು—ಪಕ್ಷಿಗಳೆಲ್ಲವೂ ತಮ್ಮ ಆನಂದವನ್ನು ಹಿಂದೂಡಿ ಅವಳ ಶೋಕದಲ್ಲಿ ಭಾಗಿಗಳಾದವು. ಹೀಗೆ ಅವಳು ಬಹುಪರಿಯಾಗಿ ದುಃಖಿಸುತ್ತಿರುವಾಗ ವಾಲ್ಮೀಕಿ ಋಷಿಗಳ ಶಿಷ್ಯರು ಆ ಆರಣ್ಯಕ್ಕೆ ಫಲಪುಷ್ಪಾದಿಗಳನ್ನು ಕೊಯ್ಯಲು ಬಂದಿದ್ದರು. ಅವರು ಈ ಅಳುವ ಧ್ವನಿಯನ್ನು ಕೇಳಿ ಸೀತಾಮಾತೆಯ ಸಮೀಪಕ್ಕೆ ಬಂದು ಅವಳ ಸಂಗತಿಯನ್ನು ತಿಳಿದುಕೊಂಡು ವಾಲ್ಮೀಕಿ ಮುನಿಗಳಿಗೆ ಅರುಹಿದರು. ಶಿಷ್ಯರ ಈ ಮಾತನ್ನು ಕೇಳಿ ವಾಲ್ಮೀಕಿ ಮುನಿಗಳು ಕೈಯಲ್ಲಿ ಹಿಡಿದಿರುವ ಅರ್ಘ್ಯದ ಪಾತ್ರೆ ಸಹಿತವಾಗಿ ಓಡುತ್ತ ಅವಳ ಬಳಿಗೆಬಂದರು—“ಸೀತೇ, ನನ್ನ ಪರಮ ಮಿತ್ರನಾದ ದಶರಥನ ಸೊಸೆ ನೀನು; ಶ್ರೀರಾಮಚಂದ್ರನು ನಿನ್ನನ್ನು ಏಕೆ ತ್ಯಜಿಸಿರುವನೆಂಬುದು ನಾನು ಅಂತಜ್ಞಾನದಿಂದ ತಿಳಿದಿರುವೆನು. ನೀನು ನಿಷ್ಪಾಪಳಿರುವೆ ಎಂಬುದು ನನಗೆ ಗೊತ್ತಿರುವದು. ಇನ್ನು ನೀನು ಶೋಕಿಸಬೇಡ.

ನಿನ್ನನ್ನು ನಾನು ನನ್ನ ಹೊಟ್ಟೆಯ ಮಗಳಂತೆ ಜೋಕೆ ಮಾಡುವೆನು." ಎಂದು ಅಭಯವಚನವನ್ನಿತ್ತರು. ಅವರ ಮಾತನ್ನು ಕೇಳಿ ಧೈರ್ಯ ವನ್ನು ತಾಳಿ ಸೀತೆಯು ಅಲ್ಲಿಂದೆದ್ದು ಅವರಿಗೆ ನಮಸ್ಕರಿಸಿದಳು. ಅನಂತರ ಅವರನ್ನು ಹಿಂಬಾಲಿಸಿ ಅವರ ಆಶ್ರಮಕ್ಕೆ ಬಂದಳು.

ಸೀತಾಮಾತೆಯನ್ನು ವಾಲ್ಮೀಕಿ ಮುನಿಗಳು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದುದನ್ನು ಕೇಳಿ ಲಕ್ಷ್ಮಣನು ಅಯೋಧ್ಯೆಯ ಕಡೆಗೆ ಸಾಗಿದನು. ದಾರಿಯಲ್ಲಿ ಸುಮಂತನು— "ಲಕ್ಷ್ಮಣಾ, ವ್ಯರ್ಥ ಚಿಂತಿಸಬೇಡ. ಈ ಮೊದಲೇ ದೂರ್ವಾಸ ಮುನಿಗಳು ಮುಂದೆ ಹೀಗೆ ಆಗುವದೆಂದು ಭವಿಷ್ಯವನ್ನು ಹೇಳಿದ್ದರು. ಸೀತಾ ಮಾತೆಗೆ ಅವಳಿಜವಳಿ ಇಬ್ಬರು ಪುತ್ರರು ಜನಿಸುವರು. ಅವರನ್ನು ಪಟ್ಟಗಟ್ಟಿ ಅನಂತರ ಶ್ರೀರಾಮಚಂದ್ರನು ಪರಂಧಾಮಕ್ಕೆ ತೆರಳುವ ನೆಂದು ಅವರು ಹೇಳಿರುವರು. ಆಗಬಾರದ ಮಾತು ಆಗಿ ಹೋಗಿದೆ ವ್ಯರ್ಥವಾಗಿ ಶೋಕಿಸುವದರಲ್ಲಿ ಫಲವಿಲ್ಲ." ಎಂದು ಸಮಾಧಾನವನ್ನು ಹೇಳಿದನು. ಸುಮಂತನ ಈ ಮಾತುಗಳನ್ನು ಕೇಳಿ ಲಕ್ಷ್ಮಣನ ದುಃಖವು ಸ್ವಲ್ಪ ಕಡಿಮೆಯಾಯಿತು. ತುಸು ಹೊತ್ತಿನಲ್ಲಿಯೇ ಅವರು ಅಯೋಧ್ಯೆಗೆ ಬಂದು ತಲುಪಿದರು. ಲಕ್ಷ್ಮಣನು ಅಂತಃಪುರದಲ್ಲಿರುವ ಶ್ರೀರಾಮಚಂದ್ರನ ದರ್ಶನವನ್ನು ತೆಗೆದುಕೊಂಡು ಸಾಷ್ಟಾಂಗವೆರಗಿ "ತಮ್ಮ ಆಜ್ಞೆಯ ಮೇರೆಗೆ ಜಾನಕಿಯನ್ನು ಗಂಗಾತೀರದ ಆಚೆಯ ದಂಡೆಯಲ್ಲಿರುವ ಅರಣ್ಯದಲ್ಲಿ ಬಿಟ್ಟು ಬಂದಿರುವೆನು." ಎಂದು ಹೇಳಿ ದನು. ಮತ್ತು ಅವಳು ಹೇಳಿರುವ ಸಂದೇಶವನ್ನು ಒಂದಕ್ಷರ ಬಿಡದೇ ಶ್ರೀರಾಮಚಂದ್ರನಿಗೆ ಹೇಳಿದನು. ಆಗ ಶ್ರೀರಾಮಚಂದ್ರನ ನೇತ್ರಕಮಲಗಳಿಂದ ಅಶ್ರುಗಳು ಒಂದೇಸವನೇ ಧಾರೆಯಾಗಿ ಹರಿಯ ಹತ್ತಿದವು. ಶ್ರೀರಾಮಚಂದ್ರನ ಈ ಸ್ಥಿತಿಯನ್ನು ಕಂಡು ಲಕ್ಷ್ಮಣನು ಅವನನ್ನುಸಮಾಧಾನಗೊಳಿಸುತ್ತ—"ಪ್ರಭೋ, ಕಾಲದ ಮಹಿಮೆಯು

ಬಹಳ ವಿಚಿತ್ರವಾದುದು. ಅದನ್ನು ತಪ್ಪಿಸುವದು ಯಾರಿಂದಲೂ ಸಾಧ್ಯವಿಲ್ಲ. ಜನ್ಮದ ಹಿಂದೆ ಮೃತ್ಯುವು, ಸಂಯೋಗದ ಹಿಂದೆ ವಿಯೋಗವು ಇರುವಂತೆ ಸ್ತ್ರೀ, -ಪುತ್ರ, ಮಿತ್ರ, .ಧನ ಇತ್ಯಾದಿಗಳಲ್ಲಿ ಹೆಚ್ಚಿಗೆ ಎಂದಿಗೂ ಮಮತೆಯನ್ನಿಡಬಾರದು. ನಾನು ಅಲ್ಪಬುದ್ಧಿ ಯವನು ತಮಗೆ ಉಪದೇಶ ಮಾಡುವ ಅಧಿಕಾರವು ನನಗಿಲ್ಲ. ತಾವೇ ತಮ್ಮ ದುಃಖವನ್ನು ಶಾಂತ ರೀತಿಯಿಂದ ಸಹಿಸಬೇಕು.'' ಎಂದು ಹೇಳಿದನು. ಲಕ್ಷ್ಮಣನ ಈ ಮಾತನ್ನು ಕೇಳಿ ಶ್ರೀರಾಮ ಚಂದ್ರನು ಅವನನ್ನು ಬಿಗಿದಪ್ಪಿಕೊಂಡು '' ಲಕ್ಷ್ಮಣಾ ನೀನು ಹೇಳುವ ದೆಲ್ಲವೂ ನಿಜವಿರುತ್ತದೆ. ಆದರೆ ನೀನು ನನ್ನ ದುಃಸಾಧ್ಯವಾದ ಆಜ್ಞೆ ಯನ್ನು ಪಾಲಿಸಿದುದಕ್ಕೆ ನನಗೆ ಬಹಳ ಸಂತೋಷವಾಗಿದೆ. ಮತ್ತು ನಿನ್ನ ಮಾತಿನಿಂದ ನನ್ನ ಮನಸ್ಸಿಗೆ ಸಮಾಧಾನವಾಗಿದೆ. ಆದರೆ ಇಂದಿಗೆ ನಾಲ್ಕು ದಿವಸಗಳಾದವು. ನಾನು ರಾಜ್ಯಕಾರಭಾರ ವನ್ನು ನೋಡಿರುವದೇ ಇಲ್ಲ. ಯಾವ ಅರಸನು ಪ್ರಜೆಗಳನ್ನು ರಕ್ಷಿಸುವದಿಲ್ಲವೋ ಅವನು ನರಕದಲ್ಲಿ ಬೀಳುವನು. ಇದಕ್ಕಾಗಿಯೇ ಹಿಂದಕ್ಕೆ ನಾಗರಾಜನು ಬ್ರಾಹ್ಮಣರಿಂದ '' ನೀನು ಓತಿಕಾಟನಾಗು '' ಎಂದು ಶಾಪ ಪಡೆದನು. ಇನ್ನು ನೀನು ರಾಜಸಭೆಗೆ ಹೋಗಿ ನಿತ್ಯ ದಂತೆ ಪ್ರಜೆಗಳ ಕುಶಲಸಮಾಚಾರವನ್ನು ವಿಚಾರಿಸು. ನಾನು ಈಗ ಸಭೆಗೆ ಬರುವೆನು'' ಎಂದು ಹೇಳಿ ಹೋದನು.

ಶ್ರೀರಾಮಚಂದ್ರನು ನಿತ್ಯಕರ್ಮಗಳನ್ನು ತೀರಿಸಿಕೊಂಡು ದಿನ ದಂತೆ ರಾಜಕಾರಭಾರವನ್ನು ನೋಡಲು ಸಭೆಗೆ ಬಂದನು. ಅಷ್ಟ ರಲ್ಲಿ ದ್ವಾರಪಾಲಕನೊಬ್ಬನು ಅಲ್ಲಿಗೆ ಬಂದು '' ಮಹಾಪ್ರಭೋ, ಯಮುನಾ ತೀರದಲ್ಲಿರುವ ಚ್ಯವನಋಷಿಗಳನ್ನು ಮುಂದೆ ಮಾಡಿ ಕೊಂಡು ಕೆಲವು ಋಷಿಗಳು ತಮ್ಮನ್ನು ಕಾಣಲು ರಾಜದ್ವಾರದಲ್ಲಿ ಬಂದಿರುವರು'' ಎಂದು ಕೈಮುಗಿದು ಹೇಳಿದನು. ಅವನ ಮಾತನ್ನು

ಕೇಳಿ ಅವರನ್ನು ಬೇಗ ಕರೆತರಲು ಬಂದ ದೂತನನ್ನು ಕಳುಹಿದನು. ಆಗ ಆ ಋುಷಿಗಳು ಶ್ರೀರಾಮಚಂದ್ರನಿದ್ದಲ್ಲಿಗೆ ಬಂದರು. ಅವರನ್ನು ಕಂಡು ಕೈಮುಗಿದು ಅತಿ ಪ್ರೇಮದಿಂದ ಸ್ವಾಗತಿಸಿ ಉತ್ತಮವಾದ ಆಸನದಲ್ಲಿ ಕುಳ್ಳಿರಿಸಿದನು. ಅನಂತರ "ಋುಷಿಗಳೇ, ತಮ್ಮ ಇಚ್ಛೆಯು ಏನಿರುವದು? ಅದನ್ನು ಪೂರೈಸಲು ನಾನು ನನ್ನ ಸರ್ವಸ್ವವನ್ನೇ ನಿಮಗೆ ಅರ್ಪಿಸುವೆನು" ಎಂದು ಹೇಳಿದನು. ಆಗ ಅವರೆಲ್ಲರೂ ಶ್ರೀರಾಮಚಂದ್ರನನ್ನು "ಧನ್ಯ ಧನ್ಯ" ಎಂದು ಹೊಗಳಿದರು. ಮುಂದೆ ಚ್ಯವನ ಋುಷಿಗಳು " ಮಧುರಾಕ್ಷಸನ ಪುತ್ರನಾದ ಲವಣಾಸುರನು ಶಿವನಿಂದ ಪಡೆದ ಶೂಲದಿಂದ ಬಹಳ ಉನ್ಮತ್ತನಾಗಿರುವನು. ಅವನು ಎಲ್ಲರನ್ನೂ ಪೀಡಿಸುತ್ತಿರುವದರಿಂದ ನಿನಗೆ ಶರಣು ಬಂದಿರುವರು " ಎಂದು ಹೇಳಿದರು. ಈ ಮಾತನ್ನು ಕೇಳಿ ಶ್ರೀರಾಮಚಂದ್ರನು ಶತ್ರುಘ್ನನನ್ನು ಕರೆದು " ಶತ್ರುಘ್ನಾ ನೀನು ಮಧುಪುರಿಗೆ ಹೋಗಿ ಲವಣಾಸುರನನ್ನು ಸಂಹರಿಸಿ ಅಲ್ಲಿಯ ರಾಜ್ಯವನ್ನಾಳು" ಎಂದು ಅವನಿಗೆ ರಾಜ್ಯಾಭಿಷೇಕವನ್ನು ಮಾಡಿ ಅವನ ಸಂಗಡ ಸೈನ್ಯವನ್ನುಕೊಟ್ಟು ಕಳುಹಲುದ್ಯುಕ್ತನಾದನು. ಲವಣಾಸುರನ ದೃಷ್ಟಿಗೆ ಬೀಳುವವರೆಲ್ಲರೂ ಜೀವದಿಂದುಳಿಯುತ್ತಿರಲಿಲ್ಲ. ಅದು ಗೊತ್ತಿರುವದರಿಂದಲೇ ಶ್ರೀರಾಮಚಂದ್ರನು ವಿಷ್ಣುವಿನ ಬಾಣವನ್ನು ಕೊಟ್ಟು " ನೀನು ಗುಪ್ತ ಸ್ಥಳದಲ್ಲಿ ನಿಂತು ಅವನನ್ನು ಸಂಹರಿಸಬೇಕೆ ಎಂದು " ಹೇಳಿದ್ದನು. ಶ್ರೀರಾಮಚಂದ್ರನ ಆಜ್ಞೆಯಂತೆ ಶತ್ರುಘ್ನನು ಅವನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಸೂರ್ಯಾಸ್ತ ಸಮಯಕ್ಕೆ ಗಂಗಾನದಿಯನ್ನು ದಾಟಿ ಅಲ್ಲಿರುವ ವಾಲ್ಮೀಕಿಯ ಆಶ್ರಮಕ್ಕೆಬಂದು ತಲುಪಿದನು. ಅದೇ ದಿನ ಮಧ್ಯರಾತ್ರಿಯಲ್ಲಿ ಸೀತಾಮಾತೆಯು ಅವಳಿ ಜವಳಿ ಮಕ್ಕಳನ್ನು ಹಡೆದಿರುವದರಿಂದ ಆ ಆಶ್ರಮದಲ್ಲೆಲ್ಲ ಆನಂದವು ತುಂಬಿ ಹೋಗಿತ್ತು. ಈ ಆನಂದದ ಸಂಗತಿಯನ್ನು ತಿಳಿದು ಶತ್ರುಘ್ನನು ಸೀತಾಮಾತೆಯಿದ

ಲ್ಲಿಗೆ ಬಂದು ಅವಳಿಗೆ ನಮಸ್ಕರಿಸಿದನು. ಹುಣ್ಣಿಮೆಯ ಚಂದ್ರನಂತಿರುವ ಆ ಹಸುಗೂಸುಗಳನ್ನು ಕಂಡು ಅವನಿಗೆ ಪರಮಾನಂದವಾಯಿತು. ವಾಲ್ಮೀಕಿ ಮಹರ್ಷಿಗಳು ಆ ಮಕ್ಕಳಿಗೆ ರಕ್ಷಾಬಂಧನವನ್ನು ಮಾಡಿದರು. ದರ್ಭವನ್ನು ಮಂತ್ರಿಸಿ ಅದರಲ್ಲಿ ಎರಡು ಭಾಗ ಮಾಡಿ ಮೇಲ್ಭಾಗಕ್ಕೆ ಕುಶವೆನ್ನುತ್ತಾರೆ. ಆ ಕುಶದಿಂದ ಜ್ಯೇಷ್ಠಮಗುವಿಗೆ ಮಂತ್ರಜಲವನ್ನು ಸಿಂಪಡಿಸಲು ದಾಯಿಗೆ ಹೇಳಿದರು. ಅದರಂತೆಯೇ ಕೆಳಭಾಗಕ್ಕೆ ಲವವೆನ್ನುತ್ತಾರೆ. ಆ ಲವದಿಂದ ಚಿಕ್ಕ ಮಗುವಿಗೆ ಮಂತ್ರಜಲವನ್ನು ಸಿಂಪಡಿಸಲು ಹೇಳಿದರು. ಆದ್ದರಿಂದ ಆ ಮಕ್ಕಳಿಗೆ ಲವ-ಕುಶರೆಂದು ಹೆಸರುಬಿದ್ದಿತು. ಇವರು ಮುಂದೆ ಮಹಾನ್ ಪರಾಕ್ರಮಿಗಳಾಗಲೆಂದು ವಾಲ್ಮೀಕಿ ಮಹರ್ಷಿಗಳು ಅವರಿಗೆ ಹರಸಿದರು.

ಹೀಗೆ ಲವ-ಕುಶರು ವಾಲ್ಮೀಕರ ಆಶ್ರಮದಲ್ಲಿ ಜನಿಸಿ ಹುಣ್ಣಿಮೆಯ ಚಂದ್ರನಂತೆ ಬೆಳೆದು ದೊಡ್ಡವರಾದರು.

---

## ೨೩. ಅಶ್ವಮೇಧ ಯಜ್ಞ

ಶತ್ರುಘ್ನನು ಪ್ರಾತಃಕಾಲದಲ್ಲೆದ್ದು ನಿತ್ಯನೈಮಿತ್ತಿಕ ಕರ್ಮಗಳನ್ನು ತೀರಿಸಿ ವಾಲ್ಮೀಕಿ ಮಹರ್ಷಿಗಳ ಆಶ್ರಮವನ್ನು ಬಿಟ್ಟು ಮುಂದಕ್ಕೆ ತೆರಳಿದನು. ಏಳು ದಿನಗಳ ತರುವಾಯ ಯಮುನಾತೀರದಲ್ಲಿರುವ ಭಾರ್ಗವ ಮುನಿಗಳ ಆಶ್ರಮಕ್ಕೆ ಬಂದು ತಲ್ಪಿದನು. ಅಂದು ರಾತ್ರಿ ಅಲ್ಲಿಯೇ ಉಳಿದನು. ಲವಣಾಸುರನು ತನ್ನ ನಿತ್ಯಕರ್ಮದಂತೆ ಆಹಾರವನ್ನು ತರಲು ಬೆಳಗಾಗುವದರಲ್ಲಿಯೇ ಮಧು

ಪುರಿಯನ್ನು ಬಿಟ್ಟು ಹೋಗುತ್ತಿದ್ದನು. ಎರಡು ಗಳಿಗೆಯ ತರುವಾಯ ಮರಳಿ ಪಟ್ಟಣಕ್ಕೆ ಬರುತ್ತಿದ್ದನು. ಈ ರೀತಿ ಅವನ ಕ್ರಮವು ಸಾಗಿತ್ತು. ಲವಣನ ಈ ಸಂಗತಿಯು ಮುನಿಗಳ ಮುಖಾಂತರವಾಗಿ ಶತ್ರುಘ್ನನು ತಿಳಿದುಕೊಂಡಿದ್ದನು. ಅದರಂತೆ ಲವಣನು ಆಹಾರ ತರಲು ಹೋದ ಸಂಗತಿಯನ್ನು ತಿಳಿದು ಶತ್ರುಘ್ನನು ಅವನು ಬರುವ ಮುಂಚಿತವಾಗಿ ಪಟ್ಟಣದ ಬಾಗಿಲಿಗೆ ಬಂದು ನಿಂತಿದ್ದನು. ಎರಡು ಗಳಿಗೆಯು ತರುವಾಯ ಲವಣನು ನಿತ್ಯದಂತೆ ತನ್ನ ಆಹಾರವನ್ನು ತೆಗೆದುಕೊಂಡು ಕೋಟೆಯ ಬಾಗಿಲಿಗೆ ಬರಲು ಶತ್ರುಘ್ನನು ಆತನನ್ನು ತಡೆದು ಶ್ರೀರಾಮಚಂದ್ರನ ದಿವ್ಯ ಬಾಣವನ್ನು ಹೆದೆಗೇರಿಸಿ ಶರಸಂಧಾನವನ್ನು ಹಿಡಿದು— "ಎಲೈ ಲವಣಾಸುರನೇ, ನಾನು ದಶರಥ ಪುತ್ರನು. ಅಯೋಧ್ಯಾಪತಿ ಶ್ರೀರಾಮಚಂದ್ರನ ತಮ್ಮನು." ಎಂದು ಗಟ್ಟಿಯಾಗಿ ಒದರಿ ಹೇಳಿದನು. ಆ ಮಾತು ಕೇಳಿದೊಡನೆ ಲವಣಾಸುರನು ಸಂತಪ್ತನಾಗಿ ಶಂಕರದತ್ತವಾದ ಶೂಲವು ಇಲ್ಲದ್ದರಿಂದ ದೊಡ್ಡ ವೃಕ್ಷವನ್ನು ಕಿತ್ತು ತೆಗೆದುಕೊಂಡು ಶತ್ರುಘ್ನನ ಮೇಲೆ ಏರಿ ಹೋದನು. ಆಗ ಶತ್ರುಘ್ನನು ತಾನು ಧರಿಸಿದ ದಿವ್ಯ ಬಾಣವನ್ನು ಲವಣನ ಮೇಲೆ ಬಿಟ್ಟನು. ಆ ಬಾಣವು ಲವಣಾಸುರನ ಹೃದಯವನ್ನು ಭೇದಿಸಿ ಮರಳಿ ಸ್ವಸ್ಥಾನಕ್ಕೆ ಬಂದು ಕುಳಿತಿತು. ಈ ರೀತಿ ಲವಣಾಸುರನ ಸಂಹಾರವಾದ ತರುವಾಯ ಶತ್ರುಘ್ನನ ಶೂರ ಸೇನೆ ಬಂದು ಅಲ್ಲಿಗೆ ತಲುಪಿತು. ಮುಂದೆ ಅವರೆಲ್ಲರೂ ಮಧುಪುರಿಯನ್ನು ಸೇರಿ ಅದನ್ನೊಂದು ದೊಡ್ಡ ಪಟ್ಟಣವನ್ನಾಗಿ ಪರಿವರ್ತಿಸಿದರು. ಲವಣಾಸುರನ ಸಂಹಾರದನಂತರ ಆ ದೇಶವು ನಿರ್ಭಯವಾಯಿತು. ಶತ್ರುಘ್ನನು ಅಲ್ಲಿ ಹನ್ನೆರಡು ವರ್ಷ ರಾಜ್ಯವಾಳಿದನು. ಅವನ ಕಾಲದಲ್ಲಿ ಆ ದೇಶವು ಧನಧಾನ್ಯಾದಿಗಳಿಂದ ಸಮೃದ್ಧವಾಯಿತು. ಆ ಪಟ್ಟಣವು 'ಮಥುರಾ' ಎಂಬ ಹೆಸರಿನಿಂದ ಹಿಂದಿನಿಂದ ಪ್ರಖ್ಯಾತವಾ

ಯಿತು. ಸುತ್ತುಮುತ್ತಲಿನ ಪ್ರದೇಶಕ್ಕೆ 'ಶೂರಸೇನ' ವೆಂಬ ಹೆಸರು ಬಿದ್ದಿತು. ಆ ಮಥುರೆಯೇ ಮುಂದೆ ಶ್ರೀಕೃಷ್ಣನ ಜನ್ಮಭೂಮಿ ಯಾಯಿತು.

ಹನ್ನೆರಡು ವರ್ಷದ ತರುವಾಯ ಶತ್ರುಘ್ನನಿಗೆ ಶ್ರೀರಾಮ ಚಂದ್ರನನ್ನು ಕಾಣುವ ಲವಲವಿಕೆ ಉಂಟಾದುದರಿಂದ ಅಲ್ಲಿಂದ ಹೊರಟು ವಾಲ್ಮೀಕಿಯರ ಆಶ್ರಮಕ್ಕೆ ಬಂದು ಒಂದು ರಾತ್ರಿ ಕಳೆ ದನು. ಅಂದು ರಾತ್ರಿ ಆಶ್ರಮದಲ್ಲಿ ವೀಣಾ ಮೃದಂಗಗಳ ಸಹಿತ ವಾಗಿ ರಾಮಾಯಣವನ್ನು ಹಾಡುತ್ತಿರುವಂತೆ ಕೇಳಿತು. ಆ ಗಾಯ ನವನ್ನು ಕೇಳಿ ಶತ್ರುಘ್ನನ ಚಿತ್ತವೃತ್ತಿಯು ಅದರಲ್ಲಿ ತಲ್ಲೀನವಾಗಿ ರಾಮಚರಿತ್ರೆಯು ಅವನ ದೃಷ್ಟಿಗೋಚರವಾಗಹತ್ತಿತು. ಇದರಿಂದ ಅವನಿಗೆ ಪರಮಾಶ್ಚರ್ಯವಾಯಿತು. ಆದರೆ ಮುನಿಗಳನ್ನು ಕೇಳುವ ಧೈರ್ಯವು ಅವನಿಗಾಗಲಿಲ್ಲ. ಮುನಿಗಳ ಆಶ್ರಮದಲ್ಲಿ ಈ ರೀತಿ ಯಾಗಿ ಎಷ್ಟೋ ಚಮತ್ಕಾರಗಳು ಆಗುವವೆಂದು ಅವನು ತನ್ನ ಸೈನಿಕ ರಿಗೆ ತಿಳಿಹೇಳಿ ಮರುದಿವಸ ಅಲ್ಲಿಂದ ಹೊರಟು ಅಯೋಧ್ಯೆಗೆ ಬಂದು ತಲುಪಿದನು.

ಶತ್ರುಘ್ನನು ಅಯೋಧ್ಯೆಗೆ ಬರಲು ರಾಜಸಭೆಯಲ್ಲಿ ಕುಳಿತಿರುವ ಶ್ರೀರಾಮಚಂದ್ರನನ್ನು ಕಂಡು "ಪ್ರಭೋ, ನನ್ನನ್ನು ಯಾವಾಗಲೂ ತಮ್ಮ ಹತ್ತಿರ ಇಟ್ಟುಕೊಳ್ಳಬೇಕೆಂದು ನನ್ನ ಇಚ್ಛೆಯಿದೆ. ಆ ಇಚ್ಛೆ ಯನ್ನು ಈಡೇರಿಸಬೇಕು" ಎಂದು ಬೇಡಿಕೊಂಡನು. ಅವನ ಮಾತನ್ನು ಕೇಳಿ ಶ್ರೀರಾಮಚಂದ್ರನು— "ಶತ್ರುಘ್ನಾ, ಪ್ರಜಾಪಾಲ ನವೇ ಕ್ಷತ್ರಿಯರ ಮುಖ್ಯ ಧರ್ಮವಾಗಿದೆ. ಅದನ್ನು ನಾವು ಪಾಲಿ ಸಲೇಬೇಕು. ನೀನು ಚಿಂತಿಸಬೇಡ. ನೆನಸಿದಾಗ ನಾನು ನಿನ್ನ ಹತ್ತಿರ ಇರುವೆನು" ಎಂದು ಸಂತೈಸಿದನು. ಅನಂತರ ಶತ್ರುಘ್ನನನ್ನು ಏಳು

ದಿವಸಗಳ ವರೆಗೆ ತನ್ನ ಹತ್ತಿರ ಇಟ್ಟುಕೊಂಡು ಮರಳಿ ಮಥುರೆಗೆ ಕಳುಹಿದನು

ಶತ್ರುಘ್ನನು ಹೋದ ತರುವಾಯ ಒಂದು ದಿನ ಪ್ರಾತಃಕಾಲ ದಲ್ಲಿ ಒಬ್ಬ ಬ್ರಾಹ್ಮಣನು ತನ್ನ ಹನ್ನೆರಡು ವರ್ಷದ ಮಗುವಿನ ಶವ ವನ್ನು ತೆಗೆದುಕೊಂಡು ರಾಜಸಭೆಯ ಮಹಾದ್ವಾರಕ್ಕೆ ಬಂದು ಬಹು ಪರಿಯಾಗಿ ಶೋಕಿಸುತ್ತಿದ್ದನು. " ಅಹಹಾ ! ತಂದೆತಾಯಿಗಳು ಜೀವದಿಂದಿರುವಾಗಲೇ ನಮ್ಮ ಈ ಮಗುವು ಮೃತಪಟ್ಟಿತಲ್ಲ! ನಾವು ಎಂದೆಂದಿಗೂ ಪಾಪದ ಕೆಲಸವನ್ನು ಮಾಡಿರಲಿಲ್ಲ. ಅಸತ್ಯವನ್ನು ನುಡಿಯುತ್ತಿರಲಿಲ್ಲ. ಅಂದಮೇಲೆ ಹೀಗಾಗಲು ಕಾರಣವೇನಿರಹುದು? ಪೂರ್ವಜನ್ಮದಲ್ಲಿ ಸಹ ನಾನು ಪಾಪವನ್ನು ಮಾಡಿದಂತೆ ನನಗೆ ಅನಿಸು ವದಿಲ್ಲ. ಅಂದಮೇಲೆ ಈ ಅನರ್ಥಕ್ಕೆ ರಾಜನೇ ಕಾರಣನಿರಬಹುದು. ರಾಜನು ಮಾಡಿದ ಪಾಪವು ಪ್ರಜೆಗಳಿಗೆ ತಟ್ಟುವದು " ಎಂದೆನ್ನುತ್ತ ಶೋಕಿಸುತ್ತಿದ್ದನು. ಆ ಬ್ರಾಹ್ಮಣನ ಶೋಕಾರ್ತನಾದವನ್ನು ಕೇಳಿ ಶ್ರೀರಾಮಚಂದ್ರನು ರಾಜಸಭೆಗೆ ಬಂದನು. ಆಗ ಆ ಬ್ರಾಹ್ಮಣನು "ಹೇ ಮಹಾರಾಜನೇ, ನೀನು ನನ್ನ ಮೃತಪುತ್ರನನ್ನು ಬದುಕಿಸದಿದ್ದರೆ ನಾನು ನನ್ನಪತ್ನಿ ಸಮೇತನಾಗಿ ರಾಜದ್ವಾರದಲ್ಲಿ ಪ್ರಾಣವನ್ನು ತ್ಯಜಿಸು ವೆನು" ಎಂದು ದುಃಖಿಸುತ್ತ ಹೇಳಿದನು. ಅವನ ಈ ದುಃಖವನ್ನು ಕೇಳಿಕೊಂಡು ಶ್ರೀರಾಮಚಂದ್ರನು ವಶಿಷ್ಠಾದಿ ಮಹರ್ಷಿಗಳನ್ನೂ, ವಿದ್ವಾನ್ ಬ್ರಾಹ್ಮರನ್ನೂ ಮಂತ್ರಿ ಸಚಿವರನ್ನೂ ಕರೆಕಳುಹಿ ಬ್ರಾಹ್ಮ ಣನ ನಿಜಸಂಗತಿಯನ್ನು ಅರುಹಿದನು. ಮತ್ತು " ನನಲ್ಲಿ ಆಗಲೀ, ನನ್ನ ರಾಜ್ಯದಲ್ಲಾಗಲೀ ಇಂಥ ಪಾತಕವು ನಡೆಯುತ್ತಿರುವದೆಂದು ಈ ಬ್ರಾಹ್ಮಣನು ಅನ್ನುತ್ತಿರುವನು. ಈ ಮಾತು ನಿಜವಿರುತ್ತಿದೆಯೋ?" ಎಂದು ಸಭಾಸದರನ್ನು ಕೇಳಿದನು. ಶ್ರೀರಾಮಚಂದ್ರನ ಖಿನ್ನ ವದನ ವನ್ನೂ ಮತ್ತು ಅವನು ಮಾಡಿರುವ ಪ್ರಶ್ನೆಯನ್ನೂ ಕೇಳಿ ನಾರದ

ಮಹರ್ಷಿಗಳು— “ ಶ್ರೀರಾಮಚಂದ್ರನೇ, ಈ ಅನರ್ಥಕ್ಕೆ ಕಾರಣವೇ ನೆಂಬುವದನ್ನು ಹೇಳುತ್ತೇನೆ ಕೇಳು. ಕೃತಯುಗದಲ್ಲಿ ಬ್ರಾಹ್ಮಣರಷ್ಟೇ ತಪಸ್ಸನ್ನಾಚರಿಸುತ್ತಿದ್ದರು. ಅದರಿಂದ ಅವರು ದೀರ್ಘ ದೃಷ್ಟಿಯು ಳ್ಳವರೂ, ಆಯುರಾರೋಗ್ಯ ಸಂಪನ್ನರೂ ಆಗಿರುತ್ತಿದ್ದರು. ಅನಂತರ ತ್ರೇತಾಯುಗದಲ್ಲಿ ಕ್ಷತ್ರಿಯರು ತಪಸ್ಸನ್ನಾಚರಿಸಹತ್ತಿದರು. ಆದ್ದ ರಿಂದ ಅವರು ಮಹಾನ್‌ಪರಾಕ್ರಮಿಗಳಾದರು. ಹೀಗೆ ತ್ರೇತಾಯುಗ ದಲ್ಲಿ ಬ್ರಾಹ್ಮಣ-ಕ್ಷತ್ರಿಯರು ಸಂಪನ್ನರಾದರು. ಆದರೂ ಕಲಿಯು ತನ್ನ ಒಂದು ಚರಣವನ್ನು ಈ ಪೃಥ್ವಿಯ ಮೇಲಿಟ್ಟಿರುವದರಿಂದ ಆ ತ್ರೇತಾಯುಗದಲ್ಲಿ ಮನುಷ್ಯನ ಆಯುಷ್ಯವು ಕಡಿಮೆಯಾಗಹತ್ತಿದೆ. ಕಲಿಗೆ ನಾಲ್ಕು ಚರಣಗಳಿರುವವು. ಅವಾವವೆಂದರೆ ಅನೃತ, ಹಿಂಸಾ, ಅಸಂತೋಷ, ವಿರೋಧ ಹೀಗೆ ಇರುವವು. ಮುಂದೆ ದ್ವಾಪರ ಯುಗದಲ್ಲಿ ವೈಶ್ಯರೂ ತಪಸ್ಸನ್ನು ಆಚರಿಸಹತ್ತಿದರು. ಆದ್ದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮೂವರೂ ತಪಸ್ಸನ್ನುಮಾಡಹತ್ತಿದರು ನಂತರ ಕಲಿಯು ತನ್ನ ಎರಡನೆಯ ಚರಣವಾದ ಹಿಂಸಾ ಎಂಬುದನ್ನು ಭೂಲೋಕದ ಮೇಲಿಟ್ಟಿರುವದರಿಂದ ಶೂದ್ರರು ತಪಸ್ಸನ್ನು ಮಾಡ್ಡು ವರು. ಶೂದ್ರರಿಗೆ ತಪಸ್ಸು ಮಾಡುವ ಅಧಿಕಾರವಿಲ್ಲ. ಆದಕಾರಣ ಯಾವನಾದರೂ ಶೂದ್ರನು ತಪಸ್ಸನ್ನಾಚರಿಸುವದರಿಂದಲೇ ಈ ರೀತಿ ಯಾಗಿ ಬ್ರಾಹ್ಮಣ ಪುತ್ರನು ಮೃತಪಟ್ಟಿರುವನು. ಅವನನ್ನು ಹುಡುಕಿ ಶಿಕ್ಷಿಸಿದರೆ ಈ ಅನರ್ಥದಿಂದ ನೀನು ಪಾರಾಗುವಿ.” ಎಂದು ಹೇಳಿ ದರು. ನಾರದರ ಈ ಮಾತನ್ನು ಕೇಳಿ ಬ್ರಾಹ್ಮಣನನ್ನು ಸಂತೈಸಿ ಮೃತಪುತ್ರನ ಶವವನ್ನು ಎಣ್ಣೆಯಲ್ಲಿ ಹಾಕಿಡಲು ಲಕ್ಷ್ಮಣನಿಗೆ ಹೇಳಿ ತಾನು ಆ ಶೂದ್ರನ ಸಮಾಚಾರಕ್ಕಾಗಿ ಪುಷ್ಪಕವಿಮಾನದಲ್ಲಿ ಕುಳಿತು ಹೊರಟನು. ಅನಂತರ ಶ್ರೀರಾಮಚಂದ್ರನು ಪೂರ್ವ, ಪಶ್ಚಿಮ, ಉತ್ತರ ಈ ಮೂರೂ ದಿಕ್ಕುಗಳನ್ನು ಶೋಧಿಸಿದನು. ಆದರೆ ಆ

ಶೂದ್ರನ ಸಮಾಚಾರವು ತಿಳಿಯಲಿಲ್ಲ. ಹೀಗೆ ಅವನು ಮೂರು ದಿಕ್ಕುಗಳನ್ನು ತಿರುಗಿದ ನಂತರ ದಕ್ಷಿಣ ದಿಕ್ಕಿಗೆ ಬಂದನು. ಅಲ್ಲಿ ಶೈವಲ ಪರ್ವತದ ಹತ್ತಿರಿರುವ ಒಂದು ಸರೋವರದ ಸಮೀಪದಲ್ಲಿರುವ ಒಂದು ವೃಕ್ಷಕ್ಕೆ ಒಬ್ಬ ಮನುಷ್ಯನು ತಲೆಕೆಳಗೆ ಮಾಡಿ ತಪಸ್ಸನ್ನಾಚರಿಸುವಂತೆ ಕಂಡಿತು. ಅವನನ್ನು ಕಂಡು ಶ್ರೀರಾಮಚಂದ್ರನು ಅಲ್ಲಿಗೆ ಬಂದು— " ಈ ರೀತಿ ತಪಸ್ಸನ್ನಾಚರಿಸುವ ನೀನಾರು ? " ಎಂದು ಕೇಳಿದನು. ಆಗ ಅವನು– " ನಾನು ಶಂಬೂಕನೆಂಬ ಶೂದ್ರನು. ಸ್ವರ್ಗಪ್ರಾಪ್ತಿಯ ಸಲುವಾಗಿ ಈ ರೀತಿಯಾಗಿ ತಪಸ್ಸನ್ನಾಚರಿಸುವೆನು. ಎಂದು ಹೇಳಿದನು. ಕೂಡಲೇ ಶ್ರೀರಾಮಚಂದ್ರನು ತನ್ನ ಖಡ್ಗದಿಂದ ಅವನ ಶಿರಸ್ಸನ್ನು ಛೇದಿಸಿದನು. ಆಗ ದೇವತೆಗಳೆಲ್ಲರೂ ಪುಷ್ಪವೃಷ್ಟಿಯನ್ನು ಮಾಡಿ ದರ್ಶನವನ್ನಿತ್ತರು. ಮತ್ತು ಬ್ರಾಹ್ಮಣ ಪುತ್ರನು ಬದುಕಿದ ಸುದ್ದಿಯನ್ನು ಹೇಳಿದರು. ನೀನು ಮರಳಿ ಅಯೋಧ್ಯೆಗೆ ತೆರಳುವಾಗ್ಗೆ ಇಲ್ಲಿಯೇ ಸಮೀಪದಲ್ಲಿರುವ ಅಗಸ್ತ್ಯ ಮುನಿಗಳ ದರ್ಶನವನ್ನು ತೆಗೆದುಕೊಂಡು ಹೋಗಬಹುದು. " ಎಂದು ಹೇಳಿ ಅವರು ಅದೃಶ್ಯರಾದರು. ಮುಂದೆ ಶ್ರೀರಾಮಚಂದ್ರನು ಅಗಸ್ತ್ಯ ಮುನಿಗಳ ದರ್ಶನವನ್ನು ತೆಗೆದುಕೊಂಡನು. ಅಗಸ್ತ್ಯ ಮುನಿಗಳು ಶ್ರೀರಾಮಚಂದ್ರನನ್ನು ಕಂಡು ಪ್ರೇಮದಿಂದ ಸ್ವಾಗತಿಸಿ ಆ ಶೂದ್ರನನ್ನು ಸಂಹರಿಸಿದ್ದಕ್ಕಾಗಿ ಅವನನ್ನು ಬಹುಪರಿಯಾಗಿ ಹೊಗಳಿದರು. ಮತ್ತು ದಿವ್ಯವಾದ ಕಂಕಣವನ್ನು ಸಮರ್ಪಿಸಿದರು. ಮರುದಿವಸ ಬೆಳಗಿನಲ್ಲೆದ್ದು ತನ್ನ ನಿತ್ಯನೈಮಿತ್ತಿಕ ಕರ್ಮಗಳನ್ನು ತೀರಿಸಿಕೊಂಡು ಅಯೋಧ್ಯೆಗೆ ಬಂದನು. ಅನಂತರ ಆ ಬ್ರಾಹ್ಮಣನನ್ನುಯಥಾಯೋಗ್ಯ ರೀತಿಯಿಂದ ಸತ್ಕರಿಸಿ ಕಳುಹಿದನು.

ಶ್ರೀರಾಮಚಂದ್ರನು ಮುಂದೆ ಸ್ವಲ್ಪ ದಿನಗಳಲ್ಲಿಯೇ ಲಕ್ಷ್ಮಣ-ಭರತರ ಅನುಮತಿಯನ್ನು ಪಡೆದು ಎಲ್ಲ ಪಾಪಕ್ಷಾಲನಾರ್ಥವಾಗಿ

ಅಶ್ವಮೇಧಯಜ್ಞವನ್ನು ಮಾಡುವದನ್ನು ನಿಶ್ಚಯಿಸಿ ನಾಲ್ಕೂದಿಕ್ಕಿನ ಕಡೆಯಿಂದ ಋಷಿಸಮುದಾಯವನ್ನು ಕರೆಕಳುಹಿದನು. ಹಾಗೆಯೇ ಎಲ್ಲ ದೇಶದ ಅರಸರಿಗೆ ಆಮಂತ್ರಣವನ್ನೂ ಕಳುಹಿದನು. ಕಿಷ್ಕಿಂಧೆ ಯಿಂದ ಸುಗ್ರೀವನು ಎಲ್ಲ ವಾನರ ಸಮೇತನಾಗಿ ಅಯೋಧ್ಯೆಗೆ ಬಂದನು. ವಿಭೀಷಣನು ಎಲ್ಲ ರಾಕ್ಷಸ ಸರದಾರರ ಸಮೇತನಾಗಿ ಲಂಕೆಯಿಂದ ಬಂದನು. ಶ್ರೀರಾಮಚಂದ್ರನ ಆಜ್ಞೆಯಂತೆ ಶತ್ರುಘ್ನನು ಬಂದು ತಲುಪಿದನು. ಮುಂದೆ ಭರತ-ಶತ್ರುಘ್ನರು ಗೋಮತೀ ತೀರದಲ್ಲಿರುವ ನೈಮಿಷ್ಯಾರಣ್ಯದಲ್ಲಿ ಋಷಿ ಸಮ್ಮತಿಯಂತೆ ಯಜ್ಞ ಮಂಟಪವನ್ನು ಸಿದ್ಧಪಡಿಸಿದರು. ಮತ್ತು ಬರುವ ಅರಸರಿಗೂ, ಬ್ರಾಹ್ಮಣರಿಗೂ ಇಳಿಯಲು ಸುಂದರವಾದ ಸ್ಥಳಗಳನ್ನು ಕಟ್ಟಿಸಿದರು. ಹೀಗೆ ಧನಧಾನ್ಯಾದಿಗಳ ಎಲ್ಲ ಸಾಮಗ್ರಿಯನ್ನು ಸಿದ್ಧಪಡಿಸಿದನಂತರ ಒಂದು ಸಮುಹೂರ್ತದಲ್ಲಿ ಸುವರ್ಣ ಪ್ರತಿಮೆಯನ್ನು ಯಜ್ಞ ಮಂಟಪಕ್ಕೆ ತಂದಿಟ್ಟು ಶ್ರೀರಾಮಚಂದ್ರನಿಗೆ ಎಲ್ಲ ಋಷಿಗಳು ಯಜ್ಞ ದೀಕ್ಷೆಯನ್ನು ಕೊಟ್ಟರು. ಆ ಯಜ್ಞದಲ್ಲಿ ಎಲ್ಲ ಲಕ್ಷಣಗಳಿಂದ ಯುಕ್ತ ವಾದ ಅಶ್ವವನ್ನು ತಂದು ಅದರ ಹಣೆಯ ಮೇಲೆ ಈ ಒಂದು ಕಾಗದ ವನ್ನು ಹಚ್ಚಿ "ಅಯೋಧ್ಯಾಪತಿ ಶ್ರೀರಾಮಚಂದ್ರನು ಅಶ್ವಮೇಧ ಯಾಗವನ್ನು ಮಾಡುತ್ತಿರುವದರಿಂದ ಈ ಅಶ್ವವನ್ನು ಪೃಥ್ವಿಯಮೇಲೆ ಬಿಟ್ಟಿರುವನು. ಇದನ್ನು ಸಂರಕ್ಷಿಸಲು ತಮ್ಮನಾದ ಲಕ್ಷ್ಮಣನು ಇರುವನು. ಯಾವನು ಪರಾಕ್ರಮಿಯಾಗಿರುವನೋ ಅವನು ಈ ಅಶ್ವವನ್ನು ತಡೆದು ಯುದ್ಧಕ್ಕೆ ಬರಬೇಕು. ಇಲ್ಲವಾದರೆ ಶರಣು ಬರಬೇಕು" ಆ ಅಶ್ವವನ್ನು ಸಂಚಾರಕ್ಕೆ ಬಿಟ್ಟರು. ಹಿಂದಿನಿಂದ ಲಕ್ಷ್ಮಣನು ತನ್ನ ಸೈನ್ಯ ಸಮೇತನಾಗಿ ಸಾಗಿದನು. ಹೀಗೆ ಯಜ್ಞವು ಒಂದು ವರ್ಷದ ಪರ್ಯಂತ ನಡೆದಿತ್ತು. ಈ ರೀತಿಯಾಗಿ ಅಶ್ವ ಮೇಧಯಾಗವು ಯಥಾಸಾಂಗವಾಗಿ ಸಾಗಿತ್ತು.

## ೨೪. ತಂದೆ-ಮಕ್ಕಳ ಯುದ್ಧ

ಲವ—ಕುಶರಿಬ್ಬರೂ ವಾಲ್ಮೀಕರ ಆಶ್ರಮದಲ್ಲಿ ಹುಣ್ಣಿಮೆಯ ಚಂದ್ರಮನಂತೆ ಬೆಳೆದು ದೊಡ್ಡವರಾದರು. ಅವರು ಏಳು ವರ್ಷದವರಾದ ತರುವಾಯ ವಾಲ್ಮೀಕ ಮಹರ್ಷಿಗಳು ಅವರಿಗೆ ವ್ರತಬಂಧವನ್ನು ಮಾಡಿದರು. ಅನಂತರ ಎಲ್ಲ ವೇದಾಧ್ಯಯನವನ್ನು ಮಾಡಿಸಿದರು. ಮತ್ತು ಶತಕೋಟಿಯಾದ ರಾಮಾಯಣವನ್ನು ಅವರ ಕಡೆಯಿಂದ ಮುಖೋದ್ಗತ ಮಾಡಿಸಿದರು. ಹೀಗೆ ಅವರು ಷಟ್‌ಶಾಸ್ತ್ರಗಳಲ್ಲಿಯೂ ಹದಿನೆಂಟು ಪುರಾಣಗಳಲ್ಲಿಯೂ ಪ್ರವೀಣರಾದನಂತರ ಅವರಿಗೆ ಧನುರ್ವಿದ್ಯೆಯನ್ನು ಕಲಿಸಿದರು. ಮಹಾಪತಿವ್ರತೆಯಾದ ಸೀತಾಮಾತೆಯಂಥ ತಾಯಿಯು ಮತ್ತು ಸಕಲಶಾಸ್ತ್ರ ಪಾರಂಗತರಾದ ವಾಲ್ಮೀಕ ಮಹರ್ಷಿಯಂಥ ಗುರುಗಳು ಇರುವದರಿಂದ ಆ ಬಾಲಕರು ಎಲ್ಲ ವಿದ್ಯೆಗಳಲ್ಲಿಯೂ ಪ್ರವೀಣರಾದರು. ವಾಲ್ಮೀಕಿ ಮಹರ್ಷಿಗಳು ಹೊರಗೆ ಹೋಗಿರುವ ಸಮಯದಲ್ಲಿ ಸೀತಾಮಾತೆಯು ತಾನೇ ಅವರಿಗೆ ಧನುರ್ವಿದ್ಯೆಯನ್ನು ಕಲಿಸುತ್ತಿದ್ದಳು.

ಅವರು ಎಲ್ಲ ವಿದ್ಯೆಗಳಲ್ಲಿ ಪಾರಂಗತರಾದದ್ದನ್ನು ಕಂಡು ವಾಲ್ಮೀಕ ಮಹರ್ಷಿಗಳಿಗೆ ಪರಮಾನಂದವಾಯಿತು. ಒಂದು ದಿನ ಈ ಬಾಲಕರು ತಮ್ಮ ಧನುರ್ಬಾಣಗಳನ್ನು ತೆಗೆದುಕೊಂಡು ಸಮೀಪದಲ್ಲಿರುವ ಅರಣ್ಯಕ್ಕೆ ಮೃಗಬೇಟೆಗಾಗಿ ಹೋದರು. ಆಗ ವಾಲ್ಮೀಕಿ ಮಹರ್ಷಿಗಳ ತಮ್ಮನಾದ ಶೃಂಗಋಷಿಯು ಮೃಗವೇಷವನ್ನು ಧರಿಸಿ ಆ ಅಡವಿಯಲ್ಲಿ ಧ್ಯಾನಾಸಕ್ತನಾಗಿ ಕುಳಿತಿದ್ದನು.

ಮೃಗವೇಷವನ್ನು ಧರಿಸಿದ ಶೃಂಗಋಷಿನ್ನರಿಯದೆ ಆ ಬಾಲಕರು ಅವನಿಗೆ ಬಾಣವನ್ನು ಬಿಟ್ಟರು ಕೂಡಲೇ ಅವನು ಮೃತ



ಸೀತಾಮಾತೆಯು ಧನುರ್ವಿದ್ಯೆಯನ್ನು ಕಲಿಸುತ್ತಿರುವಳು

ಪಟ್ಟೆನು. ಆಗ ಅವರು ಆ ಮೃಗವನ್ನು ದರದರನೇ ಎಳೆದುಕೊಂಡು ತಮ್ಮ ಮಾತೆಯ ಬಳಿಗೆ ತಂದೊಗೆದರು. ಅಲ್ಲಿಯೇ ಕುಳಿತಿರುವ ವಾಲ್ಮೀಕಿ ಮಹರ್ಷಿಗಳು "ಬಾಲಕರೇ, ನೀವು ಈ ಮೃಗವನ್ನು ಎಲ್ಲಿಂದ ತಂದಿರುವಿರಿ ?" ಎಂದು ಕೇಳಿದರು. ಆಗ ಲವ-ಕುಶರು "ಗುರುಗಳೇ, ಈ ಮೃಗವನ್ನು ನಾವು ಕೊಂದು ತಂದಿರುವೆವು. ಇದರ ಚರ್ಮವು ತಮಗೆ ಆಸನಕ್ಕೆ ಉಪಯೋಗ ಬೀಳುವದು." ಎಂದು ಹೇಳಿದರು. ಅವರ ಮಾತನ್ನು ಕೇಳಿ ವಾಲ್ಮೀಕಿ ಮಹರ್ಷಿಗಳು ಆ ಮೃಗದ ಸಮೀಪಕ್ಕೆ ಬಂದು ನೋಡಲು ತಮ್ಮ ತಮ್ಮನನ್ನು ಗುರುತಿಸಿ ಖಿನ್ನವದನನಾದರು. ಅನಂತರ ಅವರು ತಮ್ಮನ ಉತ್ತರ ಕ್ರಿಯೆಯನ್ನು ಮಾಡಿದರು. ಮತ್ತು ಈ ಮಾತನ್ನು ಸೀತೆಯ ಮುಂದೆ ಅರುಹಿದರು. ಆಗ ಅವಳು "ತಂದೆಯೇ, ಸೂರ್ಯವಂಶದ ಜನರು ಮೊದಲೇ ಬಹಳ ತೀಕ್ಷ್ಣ ಬುದ್ಧಿಯವರು. ನಿಮ್ಮಂಥ ಗುರುಗಳು ದೊರೆತದ್ದರಿಂದ ಈ ಬಾಲಕರು ಅಸ್ತ್ರ ವಿದ್ಯೆಗಳಲ್ಲಿ ಬಹಳ ಪ್ರವೀಣರಾಗಿರುವರು. ಅರಿಯದೇ ಮಾಡಿರುವ ಈ ಪಾಪದಿಂದ ಅವರನ್ನು ದೋಷಮುಕ್ತರನ್ನಾಗಿ ಮಾಡಬೇಕೆಂದು ನನ್ನ ಬೇಡಿಕೆಯಿದೆ." ಎಂದು ಹೇಳಿದಳು. ಅವಳ ಮಾತನ್ನು ಕೇಳಿ ಒಂದು ಸಹಸ್ರ ಕಮಲಗಳಿಂದ ಶಂಕರನನ್ನು ಪೂಜಿಸಿದರೆ ಇವರು ಬ್ರಹ್ಮಹತ್ಯಾ ದೋಷದಿಂದ ಮುಕ್ತರಾಗುವರು. ಆ ಕಮಲಗಳು ಅಯೋಧ್ಯೆಯ ಸಮೀಪದಲ್ಲಿರುವ ಬ್ರಹ್ಮಸರೋವರದಲ್ಲಿರುವವು. ನಿತ್ಯದಲ್ಲೂ ಶ್ರೀರಾಮಚಂದ್ರನು ಅವುಗಳನ್ನು ಪೂಜೆಗೆ ಉಪಯೋಗಿಸುವನು. ಆದಕಾರಣ ಆ ಸರೋವರದ ಸುತ್ತಲೂ ಕಾವಲು ಇಟ್ಟಿರುವರು" ಎಂದು ಹೇಳಿದರು. ಗುರುಗಳ ಮಾತನ್ನು ಕೇಳಿ ಲವ-ಕುಶರು ನಗುತ್ತ "ಗುರುಗಳೇ, ತಾವು ಬೇಕಾದ ಕೆಲಸವನ್ನು ಹೇಳಬಹುದು. ಅದನ್ನು ಮಾಡಲು ನಾವು ಸಿದ್ಧರಾಗಿರುವೆವು. ಆ ಕೆಲಸಕ್ಕೆ ತೊಂದರೆ

ಮಾಡಲು ಪ್ರತ್ಯಕ್ಷ ಕಾಲನೂ ಬಂದರೂ ಕೂಡ ಅವನನ್ನು ದಂಡಿಸಲು ನಾವು ತಮ್ಮ ಕೃಪೆಯಿಂದ ಸಿದ್ಧರಿರುವೆವು” ಎಂದು ಹೇಳಿದರು.

ಲವ—ಕುಶರು ತಮ್ಮ ಮಾತೆಗೂ, ಗುರುಗಳಿಗೂ ವಂದಿಸಿ ಬ್ರಹ್ಮ ಕಮಲಗಳನ್ನು ತರಲು ಆಯೋಧ್ಯೆಯ ಸಮೀಪಕ್ಕಿರುವ ಬ್ರಹ್ಮ ಸರೋವರಕ್ಕೆ ಬಂದು ಕಮಲಗಳನ್ನು ಕಿತ್ತುಕೊಂಡರು. ಅಷ್ಟರಲ್ಲಿ ಆ ಸರೋವರವನ್ನು ಕಾಯುತ್ತಿರುವವನು ಅಲ್ಲಿಗೆ ಬಂದು ಲವನನ್ನು ತಡೆದನು. ಆಗ ಲವನು ಅತಿ ಕ್ರೋಧದಿಂದ ತನ್ನ ಬಾಣವನ್ನು ಹೆದೆಗೇರಿಸಿ ಗುರುಸ್ಮರಣೆಯನ್ನು ಮಾಡುತ್ತ ಅವನ ಮೇಲೆ ಬಿಟ್ಟನು. ಕೂಡಲೇ ಅವನು ಮೃತಪಟ್ಟನು. ಮುಂದೆ ಅಲ್ಲಿರುವ ಎಲ್ಲ ರಕ್ಷಕರು ಓಡುತ್ತ ಅಯೋಧ್ಯೆಗೆ ಬಂದು ಈ ಸಂಗತಿಯನ್ನು ಶ್ರೀರಾಮಚಂದ್ರನ ಮುಂದೆ ಅರುಹಿದರು. ಅದನ್ನು ಕೇಳಿ ಆವನಿಗೆ ಪರಮಾಶ್ಚರ್ಯವಾಯಿತು.

ಲವ–ಕುಶರ ಈ ಪರಾಕ್ರಮವನ್ನು ಕಂಡು ವಾಲ್ಮೀಕಿ ಮಹರ್ಷಿಗಳಿಗೆ ಪರಮಾನಂದವಾಯಿತು. ಅನಂತರ ಅವರು ಶಿವಲಿಂಗವನ್ನು ಸ್ಥಾಪಿಸಿ ಆ ಕಮಲಗಳಿಂದ ಪೂಜಿಸಿದರು. ಹೀಗೆ ವಾಲ್ಮೀಕಿಮಹರ್ಷಿಗಳು ಆ ಬಾಲಕರನ್ನು ಬ್ರಹ್ಮಹತ್ಯಾ ದೋಷದಿಂದ ಮುಕ್ತಮಾಡಿದರು. ಒಂದು ದಿನ ಲವ—ಕುಶರು ತಮ್ಮ ಮಾತೆಯ ಪಾದಸೇವೆಯನ್ನು ಮಾಡುತ್ತಿರುವಾಗ “ ಮಾತೇ, ಈ ದೇಶವು ಯಾರದು ? ನಾವು ಯಾವಕುಲದಲ್ಲಿ ಜನಿಸಿರುವೆವು ? ನಮ್ಮ ತಂದೆ ಯಾರು ? ” ಎಂದು ಕೇಳಿದರು. ಅವರ ಮಾತನ್ನು ಕೇಳಿ ಸೀತಾಮಾತೆಯು “ ಮಕ್ಕಳಿರಾ, ಸೂರ್ಯವಂಶದಲ್ಲಿ ಜನಿಸಿರುವ ಅಯೋಧ್ಯಾಪತಿ ಶ್ರೀರಾಮಚಂದ್ರನು ನಿಮ್ಮ ತಂದೆ. ಅವರ ರಾಜ್ಯದಲ್ಲಿಯ ಒಬ್ಬ ಅಗಸನು ನನ್ನನ್ನು ನಿಂದಿಸಿದಕ್ಕಾಗಿ ಅವರು ನನ್ನನ್ನು

ತ್ಯಜಿಸಿದರು” ಎಂದು ಹೇಳುತ್ತ ಬಹುಪರಿಯಾಗಿ ಶೋಕಿಸಿದಳು. ಆಗ ಅವರು ತಮ್ಮ ಮಾತೆಯನ್ನು ಪರಿ ಪರಿಯಾಗಿ ಸಂತೈಸಿದರು.

ಲವ–ಕುಶರು ಋಷಿಪುತ್ರರನ್ನು ಸಂಗಡ ಕರೆದುಕೊಂಡು ಫಲ–ಪುಷ್ಪಗಳನ್ನು ತರಲು ವನಕ್ಕೆ ಬಂದಿದ್ದರು. ಅವರು ಅವುಗಳನ್ನು ಕೊಯ್ಯುತ್ತಿರುವಾಗ ಶ್ರೀರಾಮಚಂದ್ರನ ಯಜ್ಞದ ಅಶ್ವವು ಆ ವನಕ್ಕೆ ಬಂದಿತು. ಆಗ ಲವನು ಒಳ್ಳೇ ಕೌತುಕದಿಂದ ಋಷಿಕುಮಾರರನ್ನು ಕರೆದು “ ಗೆಳೆಯಂದಿರೇ, ಇದು ನೋಡಿರಿ. ಈ ಅಶ್ವವು ಎಷ್ಟು ಚೆನ್ನಾಗಿದೆ. ಇದನ್ನು ನಾವು ಹಿಡಿದು ಹಾಕುವಾ ” ಎಂದೆನ್ನುತ್ತ ಆ ಅಶ್ವವನ್ನು ಹಿಡಿದು ಅದರ ಹಣೆಯ ಮೇಲಿನ ಪತ್ರಿಕೆಯನ್ನೋದಿ ಅದನ್ನು ಹರಿದೊಗೆದರು. ಮತ್ತು ಆ ಅಶ್ವವನ್ನು ಒಂದು ಮರಕ್ಕೆ ಕಟ್ಟಿಹಾಕಿದರು. ಈ ಜಗತ್ತಿನಲ್ಲಿ ಶ್ರೀರಾಮಚಂದ್ರನೊಬ್ಬನೇ ಬಲವಂತನೇ ? ಈ ಅಶ್ವವನ್ನು ಅವನು ಇಲ್ಲಿಂದ ಹೇಗೆ ಬಿಡಿಸಿಕೊಂಡು ಹೋಗುವನು ? ನೋಡಿಯೇ ಬಿಡುವೆನು. ನಾನು ಇದನ್ನು ಯುದ್ಧ ಮಾಡದೇ ಎಂದಿಗೂ ಬಿಡಲಾರೆನು” ಎಂದು ಪ್ರತಿಜ್ಞೆ ತೊಟ್ಟನು.

ಇತ್ತ ಅಶ್ವವು ಕಾಣದ್ದರಿಂದ ಅದನ್ನು ಹುಡುಕುತ್ತ ಲಕ್ಷ್ಮಣನ ಸೈನಿಕರೆಲ್ಲರೂ ಅಲ್ಲಿಗೆ ಬಂದರು. ಅವರನ್ನು ಕಂಡು ಋಷಿಕುಮಾರರೆಲ್ಲರೂ ಅಂಜಿ ಲವನ ಕಡೆಗೆ ಬೆರಳನ್ನು ಮಾಡಿ “ ಇವನೇ, ಆ ಅಶ್ವವನ್ನು ಕಟ್ಟಿರುವನೆಂದು ” ಹೇಳಿದರು. ಲವನು ಅಶ್ವವನ್ನು ಕಟ್ಟಿರುವನೆಂದು ಸೈನಿಕರು ಲಕ್ಷ್ಮಣನಿಗೆ ಹೇಳಲು ಅವನು “ ಆ ಮಗುವು ಅಶ್ವವನ್ನು ಮೋಜಿನಿಂದ ಕಟ್ಟಿರಬಹುದು. ಕಾರಣ ನೀವು ಅದನ್ನು ಬಿಡಿಸಿಕೊಂಡು ಮುಂದೆ ಸಾಗಬೇಕು ” ಎಂದು ಹೇಳಿದನು. ಅದರಂತೆ ಆ ಸೈನಿಕರು ಅಶ್ವವನ್ನು ಬಿಚ್ಚುತ್ತಿರುವಾಗ ಲವನು ಅವರನ್ನು ತಡೆದು “ ಜೋಕೆ, ಅಶ್ವವನ್ನು ಬಿಚ್ಚಿದರೆ ನಿಮ್ಮ ಕೈಗಳನ್ನು ಛೇಧಿಸಿ ಬಿಡುವೆನು” ಎಂದು ಒಳ್ಳೇ ಆವೇಶದಿಂದ ನುಡಿದನು. “ ನಾನು

ಅಶ್ವವನ್ನು ಬಿಡುವದಿಲ್ಲ. ನೀವು ನಿಮ್ಮ ರಾಮನಿಗೆ ಹೋಗಿ ಹೇಳಿರಿ. ನಿನ್ನಲ್ಲಿ ಬಲವಿದ್ದರೆ ನನ್ನ ಸಂಗಡ ಯುದ್ಧಕ್ಕೆ ಸಿದ್ಧನಾಗು " ಎಂದು ಹೇಳಿ ಲವನು ಒಂದೇ ಸವನೇ ಬಾಣಗಳನ್ನು ಬಿಡಹತ್ತಿದನು. ಸೈನ್ಯದಲ್ಲೆಲ್ಲ ಹಾ! ಹಾ!ಕಾರವೆದ್ದು ಅವರು ಹಿಂದಿರುಗಿ ಓಡಹತ್ತಿದ್ದರು. ಆಗ ಲಕ್ಷ್ಮಣನು ಮುಂದೆ ಬಂದು ಲವನನ್ನು ಬೆದರಿಸುತ್ತ "ಎಲೈ, ನೀನಾರ ಮಗನು ?" ಎಂದು ಕೇಳಿದನು. ಅದನ್ನು ಕೇಳಿ ಲವನು "ನಾನು ಯಾರ ಮಗನೇ ಆಗಲಿ, ಇನ್ನು ನೀನು ನನ್ನ ಕೈಯಿಂದ ಹೇಗೆ ಪಾರಾಗಿ ಹೋಗುವೆ ? ನೋಡುವೆನು." ನೀನು "ಹಿಂದಕ್ಕೆ ಇಂದ್ರಜಿತನನ್ನು ಕೊಂದಿರುವಿಯಂತೆ; ಮತ್ತು ಹದಿನಾಲ್ಕು ನಿರಾಹಾರದಿಂದ ವನದಲ್ಲಿ ಬಹಳ ಶ್ರಮಪಟ್ಟಿರುವಿಯುಂತೆ; ಅದಕ್ಕಾಗಿ ನಾನು ನಿನಗೆ ಅಖಂಡವಾದ ವಿಶ್ರಾಂತಿಯನ್ನು ಕೊಡುವೆನು." ಎಂದು ನುಡಿದು ಆತನ ಮೇಲೆ ಬಾಣವನ್ನು ಬಿಡಹತ್ತಿದನು. ಆಗ ಲಕ್ಷ್ಮಣನು ನಿರುಪಾಯನಾಗಿ ಯುದ್ಧಕ್ಕೆ ಸಿದ್ಧನಾದನು. ಹೀಗೆ ತಾವಿಬ್ಬರೂ ಕಾದುತ್ತಿರುವಾಗ ಲವನು ತನ್ನ ಯುದ್ಧ ಸಾಮರ್ಥ್ಯದಿಂದ ಲಕ್ಷ್ಮಣನನ್ನು ಸೋಲಿಸಿಬಿಟ್ಟನು. ಲವನ ಈ ಯುದ್ಧ ಕೌಶಲ್ಯವನ್ನು ಲಕ್ಷ್ಮಣನು "ಇವನನ್ನು ಗೆದೆಯಲು ತಮಗೆ ಅಸಾಧ್ಯವೆಂದು" ಭಾವಿಸಿ ರಾಮನಾಮಾಂಕಿತವಾದ ದಿವ್ಯ ಬಾಣವನ್ನು ಆತನ ಮೇಲೆ ಬಿಟ್ಟನು.

ರಾಮನಾಮಾಂಕಿತ ಬಾಣವನ್ನು ನಿವಾರಿಸುವದು ಕುಶನಿಗೆ ಗೊತ್ತಿದ್ದಿತು. ಆ ಸಮಯದಲ್ಲಿ ಕುಶನು ಅಲ್ಲಿರಲಿಲ್ಲ. ಆದ್ದರಿಂದ ಲವನು ಚಿಂತೆಗೊಳಗಾದನು. ಆದರೂ ಧೈರ್ಯದಿಂದ ಆ ಬಾಣವನ್ನು ತನ್ನ ಬಾಣದಿಂದ ಛೇಧಿಸಿದನು. ಆಗ ಅದರಲ್ಲಿಯ ಅರ್ಧಬಾಣವು ಲವನ ಹೃದಯವನ್ನು ಸೇರಿತು. ಆದುದರಿಂದ ಅವನು ಮೂರ್ಛಾಗತನಾಗಿ ಭೂಮಿಯ ಮೇಲೆ ಬಿದ್ದನು. ಮತ್ತು ಒಂದೇ ಸವನೆ ಆತನ ಹೃದಯದಿಂದ ರಕ್ತಪ್ರವಾಹವು ಹರಿಯಹತ್ತಿತು.

ಅನಂತರ ಅಲ್ಲಿರುವ ಸೈನಿಕರೆಲ್ಲರೂ ಆತನ ಸುತ್ತುಮುತ್ತಲೂ ನೆರೆದರು. ಲಕ್ಷ್ಮಣನು ಅಲ್ಲಿಗೆ ಬಂದು ಲವನನ್ನು ತನ್ನ ತೊಡೆಯ ಮೇಲಿಟ್ಟುಕೊಳ್ಳಲು ಅವನ ಹೃದಯವು ಪ್ರೇಮದಿಂದ ತುಂಬಿ ಹೋಯಿತು. ಮುಂದೆ ಅವರೆಲ್ಲರೂ ಲವನನ್ನು ತಮ್ಮ ರಥದಲ್ಲಿ ತೆಗೆದುಕೊಂಡು ಅಯೋಧ್ಯೆಯ ಕಡೆಗೆ ಸಾಗಿದರು.

ಲವನು ಮೂರ್ಛಿತನಾಗಿ ಬಿದ್ದುದನ್ನು ಕಂಡು ಋಷಿಕುಮಾರರೆಲ್ಲರೂ ಓಡುತ್ತ ಸೀತೆಯ ಬಳಿಗೆ ಬಂದು ಎಲ್ಲ ಸಂಗತಿಯನ್ನು ಅರುಹಿದರು. ಆಗ ಅವಳು ಅಪಾರವಾಗಿ ಶೋಕಿಸಿದಳು. ಅವಳು ಶೋಕಿಸುತ್ತಿರುವಾಗ ಕುಶನು ಅಲ್ಲಿಗೆ ಬಂದು ಎಲ್ಲ ಸಂಗತಿಯನ್ನು ತಿಳಿದುಕೊಂಡನು. ಮತ್ತು ಪ್ರತಿಜ್ಞೆಯನ್ನು ತೊಟ್ಟು ಮಾತೆಗೆ ವಂದಿಸಿ ಗುರುಸ್ಮರಣೆಯನ್ನು ಮಾಡುತ್ತ ಲಕ್ಷ್ಮಣನ ಮೇಲೆ ಏರಿಹೋದನು. ಮತ್ತು ಒಳ್ಳೆಯ ಆವೇಶದಿಂದ “ ಎಲೈ, ನನ್ನ ತಮ್ಮನನ್ನು ತೆಗೆದುಕೊಂಡು ಹೋಗುವವರು ನೀವಾರು ? ” ಎಂದೆನ್ನುತ್ತ ವೀರಾವೇಶದಿಂದ ಬಾಣಗಳನ್ನು ಬಿಡಹತ್ತಿದನು. ಆಗ ಸೈನ್ಯದಲ್ಲಿ ಹಾ ಹಾಕಾರವೆದ್ದಿತು. ಸೇನಾಪತಿಯು ಮೃತಪಟ್ಟನು. ಸೇನಾಪತಿಯ ತಮ್ಮನಾದ ನಾಗೇಂದ್ರನು ಕುಶನಮೇಲೆ ಏರಿಬರಲು ಕುಶನು ಅವನನ್ನು ಸಂಹರಿಸಿದನು. ತದನಂತರ ಲಕ್ಷ್ಮಣನು ಯುದ್ಧಕ್ಕೆ ಬರಲು ಕುಶನು ವಾಲ್ಮೀಕ ದತ್ತವೆಂಬ ಶರವನ್ನು ಲಕ್ಷ್ಮಣನ ಮೇಲೆ ಬಿಟ್ಟನು. ಆ ಶರವು ಲಕ್ಷ್ಮಣನ ಹೃದಯದಲ್ಲಿ ನಟ್ಟಿದ್ದರಿಂದ ಅವನು ಮೂರ್ಛಿತನಾಗಿ ಬಿದ್ದನು. ಆಗ ಉಳಿದೆಲ್ಲ ಸೈನ್ಯವು ಗಾಬರಿಯಾಗಿ ಅಯೋಧ್ಯೆಗೆ ಓಡಿಹೋಯಿತು. ಆನಂತರ ಕುಶನು ರಥದ ಸಮೀಪಕ್ಕೆ ಬಂದು ನೋಡುತ್ತಿರುವಷ್ಟರಲ್ಲಿ ಲವನು ಮೂರ್ಛೆಯಿಂದೆಚ್ಚತ್ತು “ ಅಣ್ಣಾ, ನಿನ್ನನ್ನು ಕಂಡು ನನ್ನ ಶ್ರಮವೆಲ್ಲ ಪರಿಹಾರವಾಯಿತು. ” ಎಂದನು.

ಅವರಿಬ್ಬರೂ ಮತ್ತೆ ಅಶ್ವವನ್ನು ಕಟ್ಟಿ ಮುಂದೆ ಒದಗುವ ಯುದ್ಧದ ದಾರಿಯನ್ನು ಕಾಯುತ್ತ ಕುಳಿತರು.

ಲಕ್ಷ್ಮಣನು ಬರುವದಾರಿಯನ್ನು ಕಾಯುತ್ತಕುಳಿತಿದ್ದ ಶ್ರೀ ರಾಮಚಂದ್ರನು ಅವನು ಬಾರದ್ದರಿಂದ ಚಿಂತೆಗೊಳಗಾಗಿದ್ದನು. ಅಷ್ಟರಲ್ಲಿ ಲಕ್ಷ್ಮಣನ ಸೈನ್ಯವು ಅಲ್ಲಿ ಬಂದಿತು. ಅನಂತರ ಅವರೆಲ್ಲರೂ " ಲಕ್ಷ್ಮಣನು ರಣದಲ್ಲಿಮೂರ್ಛಿತನಾಗಿ ಬಿದ್ದಿರುವದರಿಂದಲೂ, ಆ ಋಷಿಕುಮಾರರು ಅಶ್ವವನ್ನು ಕಟ್ಟಿ ಹಾಕಿರುವದರಿಂದಲೂ, ನಾವು ಈ ಸಂಗತಿಯನ್ನು ನಿಮಗೆ ತಿಳಿಸಲು ಬಂದಿರುವೆವು " ಎಂದು ಹೇಳಿದರು. ಆಗ ಶ್ರೀರಾಮಚಂದ್ರನು ಭರತ-ಶತ್ರುಘ್ನರಿಗೆ ಸೈನ್ಯಸಮೇತವಾಗಿ ಹೋಗಲು ಹೇಳಿದನು. ಅನಂತರ ಅವರು ಅಲ್ಲಿಂದ ಹೊರಟರು.

ಲವ-ಕುಶರು ಮುಂದೊದಗುವ ಯುದ್ಧ ಪ್ರಸಂಗದ ದಾರಿಯನ್ನು ನೋಡುತ್ತ ಕುಳಿತಿರುವದರಿಂದ ಎದುರಿಗೆ ಸೈನ್ಯಸಮೇತವಾಗಿ ಬರುತ್ತಿರುವ ಭರತ-ಶತ್ರುಘ್ನರನ್ನು ಕಂಡು ಕುಶನು " ಲವಾ, ಈ ಅಪಾರವಾದ ಸೈನ್ಯವನ್ನು ತಡೆಯಲು ನಮ್ಮಿಂದ ಅಸಾಧ್ಯವೆಂದು ನನಗೆ ತೋರುತ್ತದೆ " ಎಂದು ಹೇಳಿದನು. ಆಗ ಲವನು " ಅಣ್ಣಾ, ಚಿಂತಿಸಬೇಡ. ನೀನು ನನ್ನ ಹತ್ತಿರ ಇರುವದರಿಂದ ನಾನು ಒಳ್ಳೆಯ ವೀರಾವೇಶದಿಂದ ಕಾದುವೆನು. ಪ್ರತ್ಯಕ್ಷ ಕಾಲನೇ ಬಂದರೂ ಕೂಡ ಅವನಿಗೆ ಹೆದರುವ ಕಾರಣವಿಲ್ಲ. ಆದರೆ ನನ್ನ ಧನುಷ್ಯವು ಉಪವನದಲ್ಲಿ ಕಾದುತ್ತಿರುವಾಗ ಮುರಿದು ಹೋಯಿತು. ಕಾರಣ ಧನುಷ್ಯಬಾಣಗಳ ಸಲುವಾಗಿ ಸೂರ್ಯನನ್ನು ಪ್ರಾರ್ಥಿಸಿದರೆ ಅವನು ನಮಗೆ ದಿವ್ಯವಾದ ಅಸ್ತ್ರವನ್ನು ಕೊಡುವನು " ಎಂದು ಹೇಳಿ ಸೂರ್ಯನನ್ನು ಪ್ರಾರ್ಥಿಸಿದನು. ಆಗ ಭಗವಾನ್ ಸೂರ್ಯನಾರಾಯಣನು ಅವರ

ಪ್ರಾರ್ಥನೆಗೆ ಮೆಚ್ಚಿ ದಿವ್ಯವಾದ ಅಸ್ತ್ರವನ್ನು ಅವರಿಗೆ ಕೊಟ್ಟನು. ಆ ಅಸ್ತ್ರವನ್ನು ತೆಗೆದುಕೊಂಡು ಸೂರ್ಯನಾರಾಯಣನಿಗೆ ಸಾಷ್ಟಾಂಗ ವೆರಗಿ ವಾಲ್ಮೀಕಿ ಗುರುಗಳನ್ನುಸ್ಮರಿಸುತ್ತ ಯುದ್ಧಕ್ಕೆ ಸಿದ್ಧರಾಗಿ ನಿಂತರು.

ಭರತ-ಶತ್ರುಘ್ನರು ತಮ್ಮ ಸೈನ್ಯ ಸಮೇತವಾಗಿ ಸಮೀಪ ಬರುತ್ತಿರುವದನ್ನು ಕಂಡು ಲವನು ಆ ಸೈನ್ಯದ ಮೇಲೆ ಬಾಣದ ಸುರಿಮಳೆಯನ್ನೇ ಸುರಿಸಿದನು. ಆದ್ದರಿಂದ ಸೈನ್ಯವೆಲ್ಲ ನಾಶವಾಯಿತು. ಆಗ ಭರತ-ಶತ್ರುಘ್ನರು ಸೇನಾಪತಿ ಕಾಳಜೀತನನ್ನು ಕುರಿತು " ಈ ಬಾಲಕರು ಹಿಂದೇ ಕಡೆಗೆ ಇರುವದರಿಂದ ಅವರನ್ನು ಗೆದೆಯಲು ನಮಗೆ ಅಸಾಧ್ಯವಾಗುವದು. ಆದಕಾರಣ ಸೈನ್ಯದಲ್ಲಿ ಎರಡು ಭಾಗವನ್ನು ಮಾಡಿದರೆ ಒಳ್ಳೆಯದಾಗುವದು " ಎಂದು ಹೇಳಿದನು. ಹೀಗೆ ಅವರು ಸೈನ್ಯದಲ್ಲಿ ಎರಡು ಭಾಗಗಳನ್ನು ಮಾಡಿ ಕಾದುತ್ತಿರುವಾಗ ಆ ಬಾಲವೀರರು ಸ್ವಲ್ಪವೂ ಹೆದರದೇ ಗುರುಸ್ಮರಣೆಯನ್ನು ಮಾಡುತ್ತ ಎಲ್ಲ ಸೈನ್ಯವನ್ನು ಮೂರ್ಛೆಗೊಳಿಸಿದರು. ಅವರ ಈ ಯುದ್ಧ ಚಾತುರ್ಯವನ್ನು ಕಂಡು ಭರತ-ಶತ್ರುಘ್ನರು ಬಹಳ ಆಶ್ಚರ್ಯಪಟ್ಟರು. ಆಗ ಭರತ–ಶತ್ರುಘ್ನರು ಆ ಬಾಲಕರ ಮೇಲೆ ಒಳ್ಳೆಯ ಅವೇಶದಿಂದ ಏರಿಹೋಗಲು ಅವರದೂ ಲಕ್ಷ್ಮಣನಂತೆ ಗತಿಯಾಯಿತು. ಉಳಿದ ತುಸು ಸೈನ್ಯವೆಲ್ಲವೂ ಓಡುತ್ತ ಹೋಗಿ ಇಲ್ಲಿ ನಡೆದಿರುವ ಸಂಗತಿಯನ್ನು ಶ್ರೀರಾಮಚಂದ್ರನಿಗೆ ಅರುಹಿತು. ಹೀಗೆ ಲವ–ಕುಶರು ವಿಜಯವನ್ನು ಪಡೆದು ಆನಂದ ಭರಿತರಾಗಿ ಆ ಅಶ್ವದ ಸಂರಕ್ಷಣೆಯನ್ನು ಮಾಡುತ್ತ ನಿಂತುಕೊಂಡರು.

ಭರತ-ಶತ್ರುಘ್ನರು ಯುದ್ಧದಲ್ಲಿ ಮೂರ್ಛೆಹೊಂದಿರುವದನ್ನು ಕೇಳಿ ಶ್ರೀರಾಮಚಂದ್ರನಿಗೆ ಪರಮಾಶ್ಚರ್ಯವಾಯಿತು. " ಈ ವೀರ

ಬಾಲಕರು ಯಾರಿರಬಹುದೆಂದು ” ವಿಚಾರಿಸಹತ್ತಿದನು. “ ಇಂದು ಪರಮೇಶ್ವರನು ನಮ್ಮ ಮೇಲೆ ಕೋಪಿಸಬಹುದೆಂದು ತೋರುತ್ತದೆ. ಅಂತೆಯೇ ನಮಗೆ ಅಪಜಯವು ಪ್ರಾಪ್ತವಾಗುತ್ತಿರುವದು.” ಎಂದೆನ್ನುತ್ತ ತಾನೇ ಸುಗ್ರೀವ ಹನುಮಂತಾದಿ ವೀರರೆಲ್ಲರನ್ನು ಕರೆದುಕೊಂಡು ಯುದ್ಧಕ್ಕೆ ಬಂದನು. ಲವ–ಕುಶರು ಅವರನ್ನು ಕಂಡು ಒಳ್ಳೆಯ ವೀರಶ್ರೀಯಿಂದ ಕಾದಹತ್ತಿದರು. ಆಗ ಶ್ರೀರಾಮಚಂದ್ರನು ಬಾಲಕರನ್ನು ಕಂಡು “ ಹೇ ಋಷಿ ಕುಮಾರರೇ, ನೀವು ಯಾರು ? ನಿಮ್ಮ ತಂದೆ ತಾಯಿಗಳ್ಯಾರು ? ಯಾವ ಕುಲದಲ್ಲಿ ಜನಿಸಿರುವಿರಿ ? ನೀವು ಬಾಲಕರಿರುವಿರೆಂದು ನಾನು ನಿಮ್ಮ ಅಪರಾಧವನ್ನು ಮನ್ನಿಸಿ ಬಿಟ್ಟು ಬಿಡುವೆನು ” ಎಂದು ಹೇಳಿದನು. ಆಗ ಲವ—ಕುಶರು “ ಶ್ರೀರಾಮಚಂದ್ರಾ, ನಮ್ಮ ಕುಲಗೋತ್ರವನ್ನು ವಿಚಾರಿಸುವದು ಇದು ನಿನಗೆ ಸಮಯವಲ್ಲ. ಈಗ ನಿನ್ನ ಬಂಧುಗಳು ರಣದಲ್ಲಿ ಮಡಿದಿರುವರು. ಅವರ ಸೇಡನ್ನು ತೀರಿಸಿಕೊಳ್ಳುವದನ್ನು ಬಿಟ್ಟು ನಮ್ಮ ಕುಲವನ್ನು ವಿಚಾರಿಸುವ ಕಾರಣವೇನು ? ಇಂಥ ಮಹಾಬಲಶಾಲಿ ರಾವಣನನ್ನು ಕೊಂದವನು ನೀನೆ ಅಲ್ಲವೇ ? ಈಗ ಹೀಗೇಕೆ ಸುಮ್ಮನೆ ಕುಳಿತಿರುವೆ ? ನಿನ್ನ ಶೌರ್ಯವೆಲ್ಲವೂ ಮಾಯವಾಯಿತೇ ? ಜಗನ್ಮಾತೆಯಾದ ಸೀತೆಯನ್ನು ಒಬ್ಬ ಯಃಕಶ್ಚಿತ ರಜಕನ ಮಾತನ್ನು ಕೇಳಿ ಬಿಟ್ಟಾಗಲೇ ನಿನ್ನ ಶೌರ್ಯವು ಮಾಯವಾಗಿ ಹೋಯಿತು. ” ಎಂದು ಒಳ್ಳೆಯ ಆವೇಶದಿಂದ ನುಡಿದರು. ಆ ಬಾಲಕರ ದಿಟ್ಟತನದ ಮಾತನ್ನು ಕೇಳಿ ಶ್ರೀರಾಮಚಂದ್ರನ ಕೋಪವು ಹೆಚ್ಚಿತು. ಆಗ ಅವನು ತನ್ನ ಬಾಣಗಳನ್ನು ಹೆದೆಗೇರಿಸಿ ಯುದ್ಧವನ್ನು ಪ್ರಾರಂಭಿಸಿದನು. ಮತ್ತು ನಲ, ನೀಲಾದಿ ವೀರರೆಲ್ಲರೂ ವೃಕ್ಷಪಾಷಾಣಗಳನ್ನು ತೆಗೆದುಕೊಂಡು ಲವ—ಕುಶರ ಮೇಲೆ ಏರಿಹೋದರು.

ಆಗ ಲವ-ಕುಶರು ಶ್ರೀರಾಮಚಂದ್ರನಿಗೆ ತಮ್ಮ ಶಸ್ತ್ರಚಾತುರ್ಯವನ್ನು ತೋರಿಸಿಯೇ ಬಿಡಬೇಕೆಂದು ಒಳ್ಳೆಯ ಆವೇಶದಿಂದ ಶ್ರೀಗುರುಸ್ಮರಣೆ ಮಾಡುತ್ತ ವಾಲ್ಮೀಕಿದತ್ತವಾದ ಶಸ್ತ್ರವನ್ನು ಆ ಸೈನ್ಯಗಳ ಮೇಲೆ ಬಿಟ್ಟರು. ಆ ಒಂದೇ ಬಾಣದಿಂದ ಅನೇಕ ಬಾಣಗಳು ಉತ್ಪನ್ನವಾಗಿ ಆ ಸೈನ್ಯವನ್ನೆಲ್ಲ ಮೂರ್ಛೆಗೊಳಿಸಿದವು. ಹೀಗೆ ತನ್ನ ಸೈನ್ಯವೆಲ್ಲ ರಣಭೂಮಿಯಲ್ಲಿ ಬಿದ್ದುದನ್ನು ಕಂಡು ಶ್ರೀರಾಮಚಂದ್ರನು ಚಿಂತಿಸುತ್ತ ಒಂದು ವೃಕ್ಷದ ಬುಡದಲ್ಲಿ ಕುಳಿತುಕೊಂಡನು. ಅಷ್ಟರಲ್ಲಿ ಲವ—ಕುಶರು ಒಂದೇಬಾಣದಿಂದ ಆ ವೃಕ್ಷವನ್ನು ಬೇರು ಸಹಿತ ಕಿತ್ತೊಗೆದರು. ಅವರ ಈ ಹಸ್ತ ಕೌಶಲ್ಯವನ್ನು ಕಂಡು ಶ್ರೀರಾಮಚಂದ್ರನಿಗೆ ಪರಮಾಶ್ಚರ್ಯವಾಯಿತು "ಇವರು ನನ್ನ ಸಂಗಡವೂ ಯುದ್ಧಮಾಡದೇ ಬಿಡಲಾರರು" ಎಂದೆನ್ನುತ್ತ ಬಾಣವನ್ನು ಬಿಡಹತ್ತಿದನು. ಆ ಬಾಣಗಳೆಲ್ಲ ಆಕಾಶದಲ್ಲಿ ಹಾರಿ ಹೋದವು. ಇದನ್ನು ಕಂಡು ದೇವತೆಗಳಿಗೂ ಪರಮಾಶ್ಚರ್ಯವಾಯಿತು. ಆಗ ಕುಶನು ಮೋಹನಾಸ್ತ್ರವನ್ನು ಬಿಟ್ಟು ಶ್ರೀರಾಮಚಂದ್ರನನ್ನು ಮೋಹಗೊಳಿಸಿದನು. ಕೂಡಲೇ ಶ್ರೀರಾಮಚಂದ್ರನು ಮೋಹದಿಂದ ಬಾಲಕರ ಮುಖವನ್ನು ನೋಡುತ್ತ ಮೂರ್ಛಿತನಾಗಿ ಬಿದ್ದನು. ಅನಂತರ ಲವ—ಕುಶರು ಶ್ರೀರಾಮ—ಲಕ್ಷ್ಮಣರ ಹತ್ತಿರ ಬಂದು ಸಾಷ್ಟಾಂಗ ನಮಸ್ಕರಿಸಿ ಅವರ ಮೈಮೇಲಿನ ವಸ್ತ್ರಾಲಂಕಾರಗಳನ್ನೂ ಮುಕುಟವನ್ನೂ ತೆಗೆದುಕೊಂಡು ತಮ್ಮ ಮೈಮೇಲೆ ಹಾಕಿಕೊಂಡರು. ಮತ್ತು ಅಶ್ವಸಮೇತವಾಗಿ ರಥದಲ್ಲಿ ಕುಳಿತುಕೊಂಡು ಆಶ್ರಮದ ಕಡೆಗೆ ಸಾಗಿದರು. ಆ ಸಮಯದಲ್ಲಿ ಲವನು "ಅಣ್ಣಾ, ಈ ಕಪಿಗಳನ್ನು ನಾವು ಮಾತೆಗೆ ತೋರಿಸಲು ತೆಗೆದುಕೊಂಡು ಹೋಗುವಾ" ಎಂದೆನ್ನುತ್ತ ಹನುಮಾನ, ನಲ, ನೀಲ, ಜಾಂಬುವಂತಾದಿ ವೀರರ ಬಾಲಗಳನ್ನು ಹಿಡಿದುಕೊಂಡು ದರದರನೆ ಎಳೆಯುತ್ತ ಆಶ್ರಮಕ್ಕೆ ಬಂದರು. ಲವ-

ಕುಶರು ಬಂದದ್ದನ್ನು ಕಂಡು ಸೀತಾಮಾತೆಯು ಅವರನ್ನರಿಯದೆ ರಾಮ–ಲಕ್ಷ್ಮಣರೇ ಎಂದು ಭಾವಿಸಿದಳು. ಅವರು ಮಾತೆಯ ಚರಣಕ್ಕೆ ಬಂದೆರಗಿದರು. ಅವರನ್ನು ಕಂಡು ಸೀತಾಮಾತೆಯು ಪ್ರೇಮದಿಂದ ಆಲಿಂಗಿಸಿದಳು. ಅನಂತರ ಅವರು ರಣರಂಗದಲ್ಲಿಯ ಎಲ್ಲ ಸಂಗತಿಯನ್ನರುಹಿದರು. “ ಮಾತೇ, ಇದು ನೋಡು ನಾವು ರಣದಲ್ಲಿ ಮೂರ್ಛೆಹೊಂದಿದ ಈ ಕಪಿಗಳನ್ನು ನಿನಗೆ ತೋರಿಸಲು ತಂದಿರುವೆವು ” ಎಂದು ಹೇಳಿದರು. ಸೀತಾಮಾತೆಯು ಹನುಮಂತಾದಿ ವೀರರನ್ನು ಕಂಡು “ ಇವರಿಗೆ ನನ್ನ ಗುರುತನ್ನು ಹೇಳಿದರೆ ನಾಚಿಕೆ ಯಾಗುವದು ” ಎಂದು ಆಲೋಚಿಸಿ “ ಮಕ್ಕಳಿರಾ, ಈ ಕಪಿಗಳನ್ನು ನಮ್ಮ ಆಶ್ರಮದಲ್ಲಿಡಕೂಡದು. ಕಾರಣ ನೀವು ಇವುಗಳನ್ನು ಬಹುದೂರ ಬಿಡಬೇಕು. ಇಲ್ಲವಾದರೆ ಇವು ನಮ್ಮ ಉಪವನವನ್ನು ನಾಶಗೊಳಿಸುವವು ” ಎಂದು ಹೇಳಿದಳು. ಮಾತೆಯ ವಚನವನ್ನು ಕೇಳಿ ಬಾಲಕರು ಅವರ ಪುಚ್ಛಗಳನ್ನು ಹಿಡಿವೆತ್ತಿ ಗರಗರನೆ ತಿರುವುತ್ತ ಬೀಸಿ ಒಗೆದರು. ಮುಂದೆ ಹನುಮಂತಾದಿ ವೀರರೆಲ್ಲರೂ ಶ್ರೀರಾಮಚಂದ್ರನ ಬಳಿಗೆ ಬಂದು ಆಶ್ರಮದಲ್ಲಿ ನಡೆದ ಸಂಗತಿಗಳನ್ನೂ ಸೀತಾಮಾತೆಯು ಆಶ್ರಮದಲ್ಲಿ ಇರುವಳೆಂದೂ” ಹೇಳಿದರು.

ಹೀಗೆ ಲವ–ಕುಶರು ತಮ್ಮ ತಂದೆಯ ಸಂಗಡ ಯುದ್ಧವನ್ನಾಡಿ ವಿಜಯ ಲಕ್ಷ್ಮಿಯನ್ನು ಸಂಪಾದಿಸಿದರು.

---

# ೨೫. ಪುನರ್ಮಿಲನ.

ಶ್ರೀರಾಮಚಂದ್ರನ ಯಜ್ಞಕಾಲದಲ್ಲಿ ವಾಲ್ಮೀಕಿ ಮಹರ್ಷಿಗಳು ಆಶ್ರಮದಲ್ಲಿರಲಿಲ್ಲ. ಅವರು ಪಾತಾಳದಲ್ಲಿ ವರುಣನು ಹೂಡಿರುವ ಯಜ್ಞಕ್ಕೆ ಹೋಗಿದ್ದರಿಂದ ಅವರಿಗೆ ಇಲ್ಲಿ ನಡೆದಿರುವ ಯಾವ ಸಂಗತಿಯೂ ಗೊತ್ತಿರಲಿಲ್ಲ. ವಾಲ್ಮೀಕಿ ಮಹರ್ಷಿಗಳು ಆಶ್ರಮವನ್ನು ಬಿಟ್ಟು ತೆರಳಬೇಕಾದರೆ ತಮ್ಮ ಪ್ರೀತಿಯ ಶಿಷ್ಯರಾದ ಲವ-ಕುಶರನ್ನು ಹತ್ತಿರ ಕರೆದು "ಪ್ರಿಯ ಶಿಷ್ಯರೇ, ನಾನು ಬರುವ ವರೆಗೂ ನೀವು ಕಂದಮೂಲಾದಿಗಳನ್ನು ತರಬೇಕು. ಮತ್ತು ಉಪವನವನ್ನು ಸಂರಕ್ಷಿಸಬೇಕು" ಎಂದು ಹೇಳಿ ಹೋಗುತ್ತಿದ್ದರು. ಅದರಂತೆಯೇ ಈಗಲೂ ಅವರು ಲವ-ಕುಶರಿಗೆ ಹೇಳಿ ಹೋಗಿದ್ದರು. ವಾಲ್ಮೀಕಿ ಮಹರ್ಷಿಗಳು ವರುಣನ ಯಜ್ಞಕ್ಕೆ ಹೋದ ತರುವಾಯ ನಿತ್ಯದಂತೆ ಲವ-ಕುಶರು ತಮ್ಮ ಕರ್ತವ್ಯವನ್ನು ಪಾಲಿಸುತ್ತಿರುವಾಗ ಶ್ರೀರಾಮಚಂದ್ರನ ಯಜ್ಞದ ಅಶ್ವವನ್ನು ಕಂಡು ಅದನ್ನು ಒಂದು ವೃಕ್ಷಕ್ಕೆ ಕಟ್ಟಿ ಹಾಕಿದರು. ಅನಂತರ ಶ್ರೀರಾಮಚಂದ್ರನ ಸಂಗಡ ಕಾಳಗವನ್ನುಹೂಡಿ ಅವನನ್ನು ಪರಾಜಿತನನ್ನಾಗಿ ಮಾಡಿರುವ ಸಂಗತಿಯು ವಾಲ್ಮೀಕಿ ಮಹರ್ಷಿಗಳಿಗೆ ಗೊತ್ತಾಗಿರಲಿಲ್ಲ. ಲವ-ಕುಶರ ಕಾಳಗದ ಸಂಗತಿಯನ್ನು ಕೇಳಿದೊಡನೆ ಅವರು ಲಗುಬಗೆಯಿಂದ ತಮ್ಮ ಆಶ್ರಮಕ್ಕೆ ಬಂದರು. ಆಗ ಸೀತಾಮಾತೆಯು ಆಶ್ರಮದಲ್ಲಿ ನಡೆದಿರುವ ಸಂಗತಿಯನ್ನು ಅರುಹಿದಳು. ಅದನ್ನು ಕೇಳಿ ಅವರಿಗೆ ಪರಮಾಶ್ಚರ್ಯವಾಯಿತು. ಕೂಡಲೆ ತಮ್ಮ ಕಮಂಡಲವನ್ನು ತೆಗೆದುಕೊಂಡು ರಣರಂಗಕ್ಕೆ ಬಂದರು. ಅನಂತರ "ಪ್ರಭೋ, ನಿನ್ನ ಲೀಲೆಯು ಬಹಳ ಅಗಾಧನಾದದ್ದಿರುವದು. ಅದನ್ನು ವರ್ಣಿಸುವದು ಬಹಳ ಅಸಾಧ್ಯವು. ನೀನು ನಿನ್ನ ಮಾಯಾ ಜಾಲದಿಂದಲೇ ಈ ನಾಟಕ

ವನ್ನು ರಚಿಸಿರುವೆ " ಎಂದು ಹೇಳಿ ತಮ್ಮ ಕಮಂಡಲದಲ್ಲಿಯ ಜಲ ವನ್ನು ರಾಮಸೈನ್ಯದ ಮೇಲೆ ಪ್ರೋಕ್ಷಿಸಿದರು. ಆಗ ಆ ಸೈನ್ಯವೆಲ್ಲ ನಿದ್ರೆಯಿಂದೆಚ್ಚತ್ತವರಂತೆ ಎದ್ದು ನಿಂತಿತು. ತಮ್ಮ ಸೈನ್ಯವು ಎದ್ದು ನಿಂತುದನ್ನು ಕಂಡು ಶ್ರೀರಾಮಚಂದ್ರನು ವಾಲ್ಮೀಕರನ್ನು ಕುರಿತು " ಋಷಿಗಳೇ, ನಾನು ಆ ಬಾಲಕರ ಸಂಗಡ ಕಾಳಗವನ್ನು ಮಾಡಿ ಅವರನ್ನು ಗೆದ್ದೇ ತೀರುವೆನು. ಅವರು ನನ್ನ ಸಾಮರ್ಥ್ಯ ವನ್ನು ನೋಡದ್ದರಿಂದ ಹೀಗೆ ಮಾಡಿರುವರು " ಎಂದು ತುಸು ಕೋಪ ದಿಂದ ನುಡಿದನು. ಆಗ ಮಹರ್ಷಿಗಳು ನಗುತ್ತ—" ದೇವಾ, ನಾವು ಭೋಜನಕಾಲದಲ್ಲಿ ನಮ್ಮ ಹಲ್ಲುಗಳಿಂದಲೇ ನಾಲಿಗೆಯನ್ನು ಕಚ್ಚಿ ಕೊಂಡರೆ ಯಾರ ಮೇಲೆ ಸಿಟ್ಟಿಗೇಳಬೇಕು ? ಹಾಗೆ ನಿನ್ನ ಮಕ್ಕಳೇ ನಿನ್ನನ್ನು ಸೋಲಿಸಿದರೆ ಅದರಲ್ಲಿ ಅವರ ಅಪರಾಧವೇನು ? " ಎಂದು ಕೇಳಿದರು. ಅವರ ಮಾತನ್ನು ಕೇಳಿ ಶ್ರೀರಾಮಚಂದ್ರನಿಗೆ ಪರಮ ಆನಂದವಾಯಿತು. ಅವನು ತನ್ನ ಎಲ್ಲ ಪರಿವಾರ ಸಮೇತನಾಗಿ ಅಲ್ಲಿಯೇ ಉಳಿದನು.

ಮರುದಿನ ಶ್ರೀರಾಮಚಂದ್ರನು ಸೀತಾಮಾತೆಯನ್ನು ಕಾಣುವೆ ನೆಂದು ಮನದಲ್ಲಿ ನಿಶ್ಚಯಿಸಿದನು. ಅದನ್ನು ಕೇಳಿ ವಶಿಷ್ಠ, ವಿಶ್ವಾ ಮಿತ್ರ, ಆಗಸ್ತ್ಯಾದಿ ಋಷಿಗಳೆಲ್ಲರೂ ಮತ್ತು ಅಯೋಧ್ಯಾ ವಾಸಿ ಗಳೆಲ್ಲರೂ ಆ ಆನಂದದ ಪ್ರಸಂಗವನ್ನು ನೋಡಲು ಅಲ್ಲಿಗೆ ಬಂದು ತಲುಪಿದರು. ಅನಂತರ ವಾಲ್ಮೀಕಿ ಮಹರ್ಷಿಗಳು ತಮ್ಮ ಆಶ್ರಮಕ್ಕೆ ತೆರಳಿ ಲವ—ಕುಶರನ್ನೂ ಶ್ಯಾಮಕರ್ಣ ಅಶ್ವವನ್ನೂ ತೆಗೆದುಕೊಂಡು ಅಲ್ಲಿಗೆ ಬಂದು ಶ್ರೀರಾಮಚಂದ್ರನ ಮುಂದೆ ನಿಲ್ಲಿಸಿದರು. ಆಗ ಇಂದ್ರಾದಿ ದೇವತೆಗಳೆಲ್ಲರೂ ಪ್ರತಿ ರಾಮ—ಲಕ್ಷ್ಮಣರಂತಿರುವ ಲವ-–ಕುಶ ರನ್ನು ಕಂಡು ಆನಂದಭರಿತರಾದರು.. ಅಷ್ಟರಲ್ಲಿ ಆಕಾಶವಾಣಿಯು " ಶ್ರೀರಾಮಚಂದ್ರಾ, ಸೀತಾದೇವಿಯು ನಿರ್ದೋಷಿಯು, ಮಹಾ

ಪತಿವ್ರತೆಯೂ ಆಗಿರುವಳು. ಈ ಮಕ್ಕಳು ನಿನ್ನವೇ ಇರುವವು ಇದರಲ್ಲಿ ಸಂದೇಹವಿಲ್ಲ. ಯಾರಾದರೂ ಸಂದೇಹವನ್ನು ತೆಗೆದು ಕೊಂಡರೆ ಘೋರವಾದ ಪಾತಕಕ್ಕೆ ಗುರಿಯಾಗುವರು" ಎಂದು ಹೇಳಿ ಸ್ತಬ್ಧವಾಯಿತು. ಆಕಾಶವಾಣಿಯನ್ನು ಕೇಳಿ ಎಲ್ಲ ಜನರು ಜಯಘೋಷವನ್ನು ಮಾಡಿದರು. ಶ್ರೀರಾಮಚಂದ್ರನು. ಲವ–ಕುಶರನ್ನು ಪ್ರೇಮದಿಂದ ಆಲಿಂಗಿಸಿದನು. ಆಗ ಎಲ್ಲರ ಆನಂದಕ್ಕೆ ಪಾರಾವಾರವೇ ಇಲ್ಲದಂತಾಯಿತು.

ಮುಂದೆ ಶ್ರೀರಾಮಚಂದ್ರನು ಲವ-ಕುಶರ ವಿದ್ಯಾಭ್ಯಾಸವನ್ನು ಪರೀಕ್ಷಿಸಿ ನೋಡಿದನು. ಅವರು ಎಲ್ಲ ವಿದ್ಯೆಗಳಲ್ಲಿ ಪರಿಪೂರ್ಣ ಹೊಂದಿರುವದನ್ನು ಕಂಡು ಅವನಿಗೆ ಪರಮಾನಂದವಾಯಿತು. ಆಗ ಅವನು ಮುನಿಗಳನ್ನು ಕುರಿತು 'ಧನ್ಯ, ಧನ್ಯ ನಿಮ್ಮ ಗುರುತ್ವಕ್ಕೆ' ಎಂದು ಹೊಗಳಿದನು. ಶ್ರೀರಾಮಚಂದ್ರನ ಮಾತನ್ನು ಕೇಳಿ ವಾಲ್ಮೀಕಿ ಮಹರ್ಷಿಗಳು–'ನಾನೆಂಥ ಗುರುವು? ನಿನ್ನತೇಜವೇ ಅಂಥಹ ತೇಜೋ ಮಯವಾದು. ನಿನ್ನ ಮಕ್ಕಳ ಸ್ಮರಣ ಶಕ್ತಿಯು ಬಹಳ ಅಗಾಧ ವಾದುದಿರುತ್ತದೆ" ಎಂದು ನುಡಿದರು. ಹೀಗೆ ಅವರು ಮಾತ ನಾಡುತ್ತ ಕುಳಿತಿರುವಾಗ ಲಕ್ಷ್ಮಣನು ಅಲ್ಲಿಗೆ ಬಂದು ಸೀತಾಮಾತೆ ಯನ್ನು ಕರೆದುಕೊಂಡು ಬರಲು ಶ್ರೀರಾಮಚಂದ್ರನ ಆಜ್ಞೆಯನ್ನು ಪಡೆದನು. ಅನಂತರ ಸುಮಂತ, ಸುಗ್ರೀವ, ಹನುಮಂತಾದಿ ವೀರ ರನ್ನು ಲಕ್ಷ್ಮಣನು ಕರೆದುಕೊಂಡು ವಾಲ್ಮೀಕಿಯ ಆಶ್ರಮಕ್ಕೆ ಬಂದು ಸೀತಾಮಾತೆಯನ್ನು ರತ್ನದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಶ್ರೀರಾಮನ ಬಳಿಗೆ ಕರೆದುಕೊಂಡು ಹೋದನು. ರಾಮಚಂದ್ರನನ್ನು ಕಂಡು ಸೀತಾಮಾತೆಯು ಪಲ್ಲಕ್ಕಿಯೊಳಗಿಂದ ಕೆಳಗಿಳಿದು ಕಾಲುನಡಿಗೆ ಯಿಂದಲೇ ಅವನ ಹತ್ತರ ಹೋಗಿ ಕೈಮುಗಿದು ನಿಂತುಕೊಂಡಳು. ಆಗ ವಾಲ್ಮೀಕಿ ಮಹರ್ಷಿಗಳು—' ಶ್ರೀರಾಮಚಂದ್ರಾ, ಇಂದಿನವರೆಗೆ

ನಾನು ಇವಳನ್ನು ನನ್ನ ಧರ್ಮಪುತ್ರಿಯಂತೆ ಪ್ರತಿಪಾಲಿಸಿರುವೆನು. ಇಂದು ನಿನ್ನ ದರುಶನದಿಂದ ನನ್ನ ಜನ್ಮವು ಸಾರ್ಥಕವಾಯಿತು. ಇನ್ನು ನೀನು ಸತ್ವಶೀಲಳಾದ ಪತ್ನಿಯನ್ನೂ, ಪುತ್ರರನ್ನೂ, ನಿನ್ನ ವಾಮಾಂಕದ ಮೇಲೆ ಕುಳ್ಳಿರಿಸಿಕೊಂಡದ್ದು ನೋಡಬೇಕೆಂಬ ನನ್ನ ಆಶೆಯಿದೆ" ಎಂದು ಬಿನ್ನವಿಸಿಕೊಂಡನು. ಆಗ ಪುನಃ ಆಕಾಶವಾಣಿ ಯಾಯಿತು. "ಜಾನಕಿಯು ನಿರ್ದೋಷಿಯೂ ಪತಿವ್ರತೆಯೂ ಆಗಿರುವಳು. ಅದನ್ನು ಕೇಳಿ ಶ್ರೀರಾಮಚಂದ್ರನು ಪ್ರೇಮ ಪೂರಿತನಾಗಿ ತನ್ನ ಪತ್ನೀ ಪುತ್ರರನ್ನು ವಾಮಾಂಕದ ಮೇಲೆ ಕುಳ್ಳಿರಿಸಿಕೊಂಡು, ಪುತ್ರರನ್ನು ಪ್ರೇಮದಿಂದ ಚುಂಬಿಸಿದನು. ಆಗ ದೇವತೆಗಳು ಆಕಾಶದಿಂದ ಪುಷ್ಪವೃಷ್ಟಿ ಸುರಿಸಿದರು. ಸಕಲ ಪ್ರಜರಿಂದೊಡಗೂಡಿ ಶ್ರೀರಾಮಚಂದ್ರನು ಅಯೋಧ್ಯೆಗೆ ಬಂದನು. ಸೀತಾ ಮಾತೆಯನ್ನೂ, ಲವ-ಕುಶರನ್ನೂ ಕಂಡು ಕೌಸಲ್ಯಾ, ಸುಮಿತ್ರೆಯರು ಪರಮಾನಂದಭರಿತರಾದರು. ಮುಂದೆ ಋಷಿಗಳೆಲ್ಲರೂ ಶ್ರೀರಾಮ ಚಂದ್ರನ ಹಸ್ತದಿಂದ ಅಶ್ವಮೇಧಯಾಗವನ್ನು ಪೂರ್ತಿಗೊಳಿಸಿದರು. ಅನಂತರ ವಾಲ್ಮೀಕಿ ಮಹರ್ಷಿಗಳು ತಮ್ಮ ಪ್ರಿಯ ಶಿಷ್ಯರಾದ ಲವ-ಕುಶರ ಕಡೆಯಿಂದ ರಾಮಚರಿತ್ರೆಯನ್ನು ಗಾಯನಮಾಡಿಸಿದರು. ಅದನ್ನು ಕೇಳುತ್ತ ಜನರು ತಲ್ಲೀನರಾದರು. ಮುಂದೆ ಶ್ರೀರಾಮ ಚಂದ್ರನು ಬ್ರಹ್ಮವೃಂದಕ್ಕೆ ಭೂಂವಕ್ಷಿಣೆಯನ್ನು ದಾನಮಾಡಿ, ಅವರನ್ನು ಸಂತುಷ್ಟ ಚಿತ್ತರನ್ನಾಗಿ ಮಾಡಿ ಕಳಿಸಿದನು. ಇಂತು ಅಯೋಧ್ಯೆಯು ಆನಂದಸಾಗರದಲ್ಲಿ ಮುಳುಗಿತು.

# ೨೬. ಪರಂಧಾಮ ಗಮನ

ಶ್ರೀರಾಮಚಂದ್ರನು ಯಜ್ಞವು ಮುಗಿಸಿದನಂತರ ಎಲ್ಲ ಋಷಿ ಸಮುದಾಯಕ್ಕೂ, ಸುಗ್ರೀವಾದಿ ವಾನರವೀರರಿಗೂ, ವಿಭೀಷಣಾದಿ ರಾಕ್ಷಸರಿಗೂ ಒಳ್ಳೆಯ ಸನ್ಮಾನಪೂರ್ವಕವಾಗಿ ಸತ್ಕರಿಸಿ ಕಳುಹಿದನು. ತದನಂತರ ನಿತ್ಯದಂತೆ ರಾಜ್ಯಕಾರಭಾರವನ್ನೂ, ಪ್ರಜೆಗಳ ಸುಖ ದುಃಖಗಳನ್ನೂ ವಿಚಾರಿಸಿದನು. ಈ ರೀತಿಯಾಗಿ ಪ್ರಜರ ಕಲ್ಯಾಣ ಕೋಸ್ಕರ ತನ್ನ ಆಯುಷ್ಯವನ್ನೇ ವಿನಿಯೋಗಿಸಲಾಗಿಟ್ಟುಕೊಂಡು ಕರ್ತವ್ಯ ಭ್ರಷ್ಟನಾಗದೇ ಒಂದು ಸಾವಿರವರ್ಷ ಸುಖವಾಗಿ ರಾಜ್ಯವಾಳಿದನು. ಆತನ ರಾಜ್ಯದಲ್ಲಿ ಬರಗಾಲವೆಂಬುದನ್ನೇ ಜನರು ಕಂಡಿರಲಿಲ್ಲ. ಎಲ್ಲ ಜನರು ಸುಖ ಸಂಪನ್ನರಾಗಿ ತಮ್ಮ ತಮ್ಮ ಕರ್ಮಾನುಷ್ಠಾನಗಳಲ್ಲಿ ನಿರತರಾಗಿದ್ದರು. ಬ್ರಾಹ್ಮಣರು ತಮ್ಮ ವೈದಿಕಧರ್ಮಕರ್ಮಗಳನ್ನು ಪರಿಪಾಲಿಸುತ್ತ ಒಳ್ಳೆಯ ಆಚರಣೆಯಿಂದ ನಡೆಯುತ್ತ ಭಗವಂತನ ಸೇವೆಯನ್ನು ಮಾಡುತ್ತ ಕಾಲಕಳೆಯುತ್ತಿದ್ದರು. ಅದರಂತೆ ಕ್ಷತ್ರಿಯರು ತಮ್ಮ ಕ್ಷಾತ್ರಧರ್ಮವನ್ನು ಪರಿಪಾಲಿಸುತ್ತ ಪ್ರಜಾರಕ್ಷಣೆಯೇ ತಮ್ಮ ಕರ್ತವ್ಯವೆಂದು ಭಾವಿಸಿ ಪ್ರಜರಿಗೋಸ್ಕರ ಹಗಲಿರುಳು ಒಂದೇ ಸವನೆ ದುಡಿದು ಪ್ರಜೆಗಳನ್ನು ತಮ್ಮ ಹೊಟ್ಟೆಯಮಕ್ಕಳಂತೆ ಪರಿಪಾಲಿಸುತ್ತಿದ್ದರು. ಹಾಗೆಯೇ ವೈಶ್ಯರೂ, ಶೂದ್ರರೂ, ತಮ್ಮ ತಮ್ಮ ಧರ್ಮಗಳಂತೆ ನಡೆದುಕೊಂಡು "ಜನರಸೇವೆಯೇ ಜನಾರ್ದನ ಸೇವೆ" ಎಂದು ಭಾವಿಸಿ ಕರ್ತವ್ಯದಕ್ಷರಾಗಿದ್ದರು.

ಹೀಗಿದ್ದ ಕಾಲದಲ್ಲಿ ಅಯೋಧ್ಯಾನಗರಿಯು ಸುಖಸಂಪನ್ನವಾಗಿರುವಲ್ಲಿ ಆಶ್ಚರ್ಯವೇನು ? ಒಂದು ದಿನ ಶ್ರೀರಾಮಚಂದ್ರನು ನಿತ್ಯದಂತೆ ರಾಜಸಭೆಗೆ ಬಂದು ಕುಳಿತಿರುವಷ್ಟರಲ್ಲಿ ಆಗಸ್ತ್ಯಮುನಿಗಳು

ಆಗಮಿಸಿದರು. ಶ್ರೀರಾಮಚಂದ್ರನು ಅವರನ್ನು ಆದರದಿಂದ ಬರ ಮಾಡಿಕೊಂಡು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಅವರ ಕುಶಲ ವಾರ್ತೆಗಳನ್ನು ಕೇಳುತ್ತಿರುವಷ್ಟರಲ್ಲಿ ಗೂಗೆಯೂ ಮತ್ತು ಹಾಳೆಹದ್ದೂ ಈ ಎರಡು ಪಕ್ಷಿಗಳು ಅಲ್ಲಿಗೆ ಬಂದು ತಮ್ಮ ಕಲಹವನ್ನು ಹೇಳಹತ್ತಿ ದವು. ಗೂಗೆಯು " ಮಹಾರಾಜಾ, ನಾನಿರುವ ಮನೆಯು ನನ್ನ ದಿರುತ್ತದೆ. ಆದರೆ ಈ ಹಾಳೇಹದ್ದು ತನ್ನದೆಂದು ಅನ್ನುತ್ತಿರುವದು. ಇದನ್ನು ನಿಜವಾಗಿ ವಿಚಾರಿಸಬೇಕು " ಎಂದು ಹೇಳಿತು. ಅದರಂತೆ ಹಾಳೆಹದ್ದು ಕೂಡ " ಅನಾದಿಕಾಲದಿಂದ ಈ ಮನೆಯು ನನ್ನದಿರು ವದು " ಎಂದಿತು. ಅನೆರಡರ ಮಾತನ್ನು ಕೇಳಿ ಶ್ರೀರಾಮಚಂದ್ರನು ಇವರ ನ್ಯಾಯಾನ್ಯಾಯಗಳನ್ನು ವಿಚಾರಿಸಲು ಪ್ರಧಾನಿಗೆ ಹೇಳಿ " ಅವರ ಮನೆಯನ್ನು ಅವರಿಗೆ ಕೊಡಿಸು " ಎಂದು ಹೇಳಿದನು. ಆಗ ಹಾಳೇಹದ್ದು " ಪ್ರಭೋ, ಈ ಪೃಥ್ವಿಯು ಹುಟ್ಟುವದರ ಮೊದಲೆ ನಾನು ಈ ಗಿಡದ ಮೇಲೆ ವಾಸಿಸುತ್ತಿದ್ದೆನು " ಎಂದು ಹೇಳಿತು. ಆಗ ಗೂಗೆಯು " ಪ್ರಭೋ, ಈಶ್ವರನು ಮೊದಲು ಪೃಥ್ವಿ ಯನ್ನು ಹುಟ್ಟಿಸಿದನು. ಅನಂತರ ಗಿಡಗಳು ಹುಟ್ಟಿದವು. ಅಂದಿ ನಿಂದ ಈ ಗಿಡದ ಮೇಲೆ ನಾನು ವಾಸಿಸುತ್ತಿರುವೆನು " ಎಂದು ಹೇಳಿತು. ಅವರಿಬ್ಬರ ಮಾತನ್ನು ಕೇಳಿ ಪ್ರಧಾನಿಯು ಹಾಳೇಹದ್ದಿನ ಮಾತನ್ನೇ ನಿಜವೆಂದು ಹೇಳಿದನು. ಆಗ ಶ್ರೀರಾಮಚಂದ್ರನು " ಪ್ರಧಾನನೇ, ನೀನು ಈ ರೀತಿಯಾಗಿ ನ್ಯಾಯಕೊಡುವದು ತಪ್ಪು. ಗಿಡಗಳಿಗೆ ಪೃಥ್ವೀಯೇ ಆಧಾರವಲ್ಲವೇ ? ಪೃಥ್ವಿಯು ಹುಟ್ಟುವದರ ಮೊದಲೇ ನಾನು ಈ ಗಿಡದ ಮೇಲೆ ವಾಸಿಸುತ್ತಿದ್ದೆನೆಂದು ಹೇಳುತ್ತಿ ರುವ ಹಾಳೇಹದ್ದಿನ ಮಾತು ತೀರ ಸುಳ್ಳು. ಅಸತ್ಯ ಮಾತನಾಡು ವವನಿಗೆ ಈಗಲೇ ಶಿಕ್ಷಿಸಬೇಕು " ಎಂದು ಧನುಷ್ಯ ಬಾಣಗಳಿಂದ ಆ ಹಾಳೆಯ ಹದ್ದನ್ನು ಶಿಕ್ಷಿಸಲು ಸಿದ್ಧನಾದನು. ಕೂಡಲೇ ಆಕಾಶ

ವಾಣಿಯಾಯಿತು. “ ಶ್ರೀರಾಮಚಂದ್ರಾ, ಇವನನ್ನು ವಧಿಸಬೇಡ. ಈತನು ಪೂರ್ವದಲ್ಲಿ ಬ್ರಹ್ಮದತ್ತನೆಂಬ ಅರಸನು. ಗೌತಮ ಋಷಿಯ ಶಿಷ್ಯನಿದ್ದು ಒಂದು ದಿನ ತನ್ನ ಗುರುವಿಗೆ ಭೋಜನಕಾಲದಲ್ಲಿ ಮಾಂಸವನ್ನು ಉಣಬಡಿಸಿದನು. ಆದ್ದರಿಂದ ಋಷಿಗಳು “ ನೀನು ಹಾಳೆಯಹದ್ದಿನ ಜನ್ಮವನ್ನು ತಾಳು ” ಎಂದು ಶಪಿಸಿದರು. ಆಗ ಅವನು ಅವರಿಗೆ ಶರಣು ಬಂದನಂತರ “ ಶ್ರೀರಾಮಚಂದ್ರನ ದರ್ಶನದನಂತರ ನಿನ್ನ ಉದ್ಧಾರವಾಗುವದು ಎಂದು” ಗೌತಮ ಮುನಿಗಳು ಅವನಿಗೆ ಉಃಶಾಪವಿತ್ತರು. ಅದರಂತೆಯೇ ನಿನ್ನ ದರ್ಶನ ಮಾತ್ರದಿಂದ ಇವನು ಶಾಪಮುಕ್ತನಾದನು ” ಎಂದು ಹೇಳುವಷ್ಟರಲ್ಲಿ ಬ್ರಹ್ಮದತ್ತನು ಶ್ರೀರಾಮಚಂದ್ರನಿಗೆ ನಮಸ್ಕರಿಸಿ ವಿಮಾನಾರೂಢನಾಗಿ ಸ್ವರ್ಗಲೋಕಕ್ಕೆ ಪ್ರಯಾಣಬೆಳಸಿದನು. ಶ್ರೀರಾಮಚಂದ್ರನ ನ್ಯಾಯಾನ್ಯಾಯ ಕೊಡುವ ಚಾತುರ್ಯವನ್ನು ಕಂಡು ಸಭಿಕರೆಲ್ಲರೂ ಆಶ್ಚರ್ಯಪಟ್ಟು ಶ್ರೀರಾಮಚಂದ್ರನನ್ನು ಹೊಗಳಿದರು. ಅನಂತರ ಶ್ರೀರಾಮಚಂದ್ರನು “ ಮುನಿಗಳೇ, ಹಿಂದಕ್ಕೆ ನಾವು ಹೋಗಿರುವ ಅಡವಿಗೆ ದಂಡಕಾರಣ್ಯವೆಂಬ ಹೆಸರು ಬೀಳಲು ಕಾರಣವೇನು ? ” ಎಂದು ಕೇಳಿದನು. ಆಗ ಅಗಸ್ತ್ಯಮುನಿಗಳು “ರಾಮಾ, ಸೂರ್ಯವಂಶದಲ್ಲಿ ಯಮನು ಎಂಬವನ ಮಗನು ಇಕ್ಷ್ವಾಕುವು ಮತ್ತು ಅವನ ಮಗ ದಂಡಕರಾಜನೂ ಇವರಿಬ್ಬರೂ ಮೃಗ ಬೇಟೆಗಾಗಿ ಅಡವಿಗೆ ಹೋಗಿದ್ದರು. ಅಲ್ಲಿಯೇ ಸಮೀಪದಲ್ಲಿ ಭೃಗುಋಷಿಯ ಆಶ್ರಮವಿದ್ದದ್ದರಿಂದ ವಿಶ್ರಾಂತಿ ಗೋಸ್ಕರ ಅಲ್ಲಿಗೆ ಹೋದರು. ಆ ಸಮಯದಲ್ಲಿ ಭೃಗುಮುನಿಗಳು ಆಶ್ರಮದಲ್ಲಿರಲಿಲ್ಲ. ಅವರ ‘ಅರಜಾ’ ಎಂಬ ಹೆಸರಿನ ಕನ್ಯೆಯೊಬ್ಬಳಿದ್ದಳು. ಆ ಹತ್ತು ವರ್ಷದ ಕನ್ಯೆಯನ್ನು ಕಂಡು ದಂಡಕರಾಜನು ಬಹಳ ಕಾಮಾತುರನಾಗಿ ಅವಳನ್ನು ಬಲಾತ್ಕಾರದಿಂದ ಭೋಗಿಸಿದ್ದರಿಂದ ಅವಳು ನಿಶ್ಚೇ

ಸ್ಥಿತಳಾಗಿ ಭೂಮಿಯ ಮೇಲೆ ಬಿದ್ದಳು. ಮುಂದೆ ರಾಜನು ಸ್ವಸ್ಥಾನಕ್ಕೆ ಹೊರಟು ಹೋದನು. ತುಸು ಹೊತ್ತಿನಲ್ಲಿಯೇ ಭೃಗುಮುನಿಗಳು ಅಲ್ಲಿಗೆಬಂದು ತಮ್ಮ ಮಗಳ ಅವಸ್ಥೆಯನ್ನು ಅಂತರ್ಜ್ಞಾನದಿಂದ ತಿಳಿದು ಕೊಂಡು " ರಾಜಾ ನೀನು ನಿನ್ನ ರಾಜ್ಯಸಮೇತನಾಗಿ ಏಳು ದಿನಗಳಲ್ಲಿ ಭಸ್ಮವಾಗಿ ಹೋಗು " ಎಂದುದಂಡಕ ರಾಜನಿಗೆ ಶಾಪವನ್ನಿತ್ತರು. ಅಂದಿನಿಂದ ಆ ದೇಶವು ಹಾಳು ಬಿದ್ದದ್ದರಿಂದ ದಂಡಕಾರಣ್ಯವೆಂದು ಹೆಸರು ಬಿದ್ದಿತು." " ಒಂದು ದಿನ ನಾರದ ಮುನಿಗಳು ವಿಂಧ್ಯಾ ಚಲಕ್ಕೂ ಮೇರು ಪರ್ವತಕ್ಕೂ ಕಲಹವನ್ನುಂಟು ಮಾಡಿದರು. ಆಗ ವಿಂಧ್ಯಾಚಲವೂ ಮತ್ತು ಮೇರು ಪರ್ವತವೂ ಈರ್ಷೆಯಿಂದ ಬಹಳ ಎತ್ತರವಾಗಿ ಬೆಳೆದರು. ಆದಕಾರಣ ಸೂರ್ಯನು ತನ್ನ ನಿತ್ಯದ ಕಾರ್ಯಕ್ರಮವನ್ನು ಸಹ ನಿಲ್ಲಿಸಿಬಿಟ್ಟನು. ಆದ್ದರಿಂದ ದೇವತೆಗಳೂ ತಾಪಸಿಗಳೂ ನನ್ನ ಹತ್ತಿರ ಬಂದು " ತಾವು ದಕ್ಷಿಣದ ಯಾತ್ರೆಗೆ ಹೋಗಬೇಕು " ಎಂದು ನನಗೆ ಹೇಳಿದರು. ಆಗ ನಾನು ಎಲ್ಲ ಋಷಿಸಮೇತನಾಗಿ ವಾರಣಾಶಿಯನ್ನು ಬಿಟ್ಟು ದಕ್ಷಿಣಕ್ಕೆ ತೆರಳಿದೆನು. ನನ್ನನ್ನು ನೋಡಿ ವಿಂಧ್ಯಾಚಲವು ಸಾಷ್ಟಾಂಗವೆರಗಿದನು. ಕೂಡಲೇ ನಾನು 'ಮರಳಿ ಬರುವವರೆಗೆ ನೀನು ಹೀಗೇ ಬಿದ್ದಿರು' ಎಂದು ಹೇಳಿ ದೆನು. ಅಂದಿನಿಂದ ಆ ಪರ್ವತವು ಹಾಗೆಯೇ ಉಳಿದಿರುವದು. ಅನಂ ತರ ನಾನು ಋಷಿಸಮೇತನಾಗಿ ಅಲ್ಲಿಯೇ ಉಳಿದು ಇಂದ್ರನ ಕಡೆ ಯಿಂದ ಮೇಘವೃಷ್ಟಿಯನ್ನು ಮಾಡಿಸಿದೆನು. ಆಗ ಅಲ್ಲಿಯ ಬರಗಾಲ ಇಲ್ಲದಂತಾಗಿ ಆ ದೇಶವು ಒಂದು ಪಟ್ಟಣವಾಗಿ ಪರಿಣಮಿಸಿತು. ಆದರೆ ಅದಕ್ಕೆ ಈಗಲೂ ದಂಡಕಾರಣ್ಯವೆಂದೇ ಕರೆಯುವರು" ಎಂದು ಹೇಳಿದರು. ಈ ಎಲ್ಲ ಸಂಗತಿಯನ್ನು ಕೇಳಿ ಶ್ರೀರಾಮಚಂದ್ರನು ಬಹಳ ಆಶ್ಚರ್ಯಪಟ್ಟನು. ಅಗಸ್ತ್ಯಮುನಿಗಳು ಸ್ವಸ್ಥಾನಕ್ಕೆ ತೆರಳಿದರು.

ಶ್ರೀರಾಮಚಂದ್ರನು ವಾಜಪೇಯ, ಅಗ್ನಿಷ್ಟೋಮ, ಅತಿರಾತ್ರ ಹೀಗೆ ಮತ್ತು ಕೆಲವು ಯಜ್ಞ—ಯಾಗಾದಿಗಳನ್ನು ಮಾಡಿದನು. ಕೆಲವು ಕಾಲ ಗತಿಸಿದ ನಂತರ ರಾಜಮಾತೆಯರಾದ ಕೌಸಲ್ಯಾ, ಸುಮಿತ್ರಾ, ಕೈಕೆಯಿಯವರು ಸ್ವರ್ಗಸ್ಥರಾದರು. ತದನಂತರ ಶ್ರೀರಾಮಚಂದ್ರನು ಅವರ ಉತ್ತರ ಕ್ರಿಯೆಗಳನ್ನು ಉತ್ತಮವಾಗಿ ನೆರವೇರಿಸಿ ಬಂದ ಬ್ರಾಹ್ಮಣರಿಗೆಲ್ಲ ವಸ್ತ್ರಾಲಂಕಾರಗಳನ್ನು ದಾನ ಕೊಟ್ಟು ಸಂತೋಷ ಪಡಿಸಿದನು. ಹೀಗೆ ಅವನು ರಾಜ್ಯಕಾರ್ಯ ದಲ್ಲಿಯೂ, ಧರ್ಮಕಾರ್ಯದಲ್ಲಿಯೂ ಎಂದಿಗೂ ತನ್ನ ಕರ್ತವ್ಯವನ್ನು ಬಿಡಲಿಲ್ಲ. ಕೆಲಕಾಲವಾದನಂತರ ಭರತನ ಸೋದರಮಾವನಾದ ಯುಧಾಜಿತನು ಕಪ್ಪ—ಕಾಣಿಕೆಗಳನ್ನು ಕೊಟ್ಟು ತನ್ನ ಗುರುವಾದ ಗಾರ್ಗ್ಯ ಮುನಿಗಳನ್ನು ಶ್ರೀರಾಮಚಂದ್ರನ ಬಳಿಗೆ ಕಳುಹಿದನು. “ಗಂಧರ್ವರು ಸಿಂಧೂ ನದಿಯ ತೀರದ ಪ್ರದೇಶವನ್ನು ಬಲಾತ್ಕಾರ ದಿಂದ ತೆಗೆದುಕೊಂಡಿದ್ದಾರೆ. ನೀವು ಅವರನ್ನು ಗೆದ್ದು ಆ ದೇಶವನ್ನು ತಮ್ಮ ವಶಪಡಿಸಿಕೊಂಡರೆ ಒಳಿತಾಗುವದು” ಎಂದು ಹೇಳಿಕಳು ಹಿದ್ದನು. ಗಾರ್ಗ್ಯ ಮುನಿಗಳನ್ನು ಕಂಡು ಶ್ರೀರಾಮಚಂದ್ರನು ಒಳ್ಳೆ ಸಂಭ್ರಮದಿಂದ ಎದುರುಗೊಂಡು ಅಯೋಧ್ಯೆಗೆ ಕರೆದುಕೊಂಡು ಬಂದನು. ಮತ್ತು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಕುಶಲವಾರ್ತೆ ಯನ್ನು ಕೇಳಿದನು. ಅವರು ಯುಧಾಜಿತನ ಸಂದೇಶವನ್ನು ಅವನಿಗೆ ಹೇಳಿದರು. ಕೂಡಲೆ ಭರತನನ್ನು ಕರೆಕಳುಹಿ ಎಲ್ಲ ಸಂಗತಿಯನ್ನು ಆತನಿಗೆ ಅರುಹಿದನು. “ನೀನು ಸೈನ್ಯಸಮೇತನಾಗಿ ಅಲ್ಲಿಗೆ ಹೋಗಿ ಗಂಧರ್ವರನ್ನುಸೋಲಿಸಿ ನಿನ್ನ ಮಕ್ಕಳಾದ ತಕ್ಷ ಮತ್ತು ಪುಷ್ಕಲ ಇವ ರಿಬ್ಬರಿಗೆ ಅದನ್ನು ಹಂಚಿಕೊಟ್ಟು ಬರಬೇಕು” ಎಂದು ಹೇಳಿದನು. ಅದರಂತೆ ಭರತನು ಸೈನ್ಯಸಮೇತನಾಗಿ ಕೈಕೇಯ ದೇಶಕ್ಕೆ ಬಂದನು. ತನ್ನ ಸೋದರಮಾವನಾದ ಯುಧಾಜಿತುವನ್ನು ಸಂಗಡ ಕರೆದು

ಕೊಂಡು ಗಂಧರ್ವರ ಮೇಲೆ ಏರಿಹೋಗಿ ಆ ದೇಶವನ್ನು ವಶಪಡಿಸಿ ಕೊಂಡನು. ಸಿಂಧೂನದಿಯ ಪೂರ್ವದ ಕಡೆಯ ಪ್ರದೇಶವನ್ನು ತಕ್ಷ ನಿಗೆ ಕೊಟ್ಟು ತಕ್ಷಶಿಲಾ ಎಂಬ ಪಟ್ಟಣವನ್ನು ನಿರ್ಮಿಸಿದನು. ಪಶ್ಚಿ ಮದ ಕಡೆಯ ಪ್ರದೇಶವನ್ನು, ಪುಷ್ಕಲಾವತಿಯೆಂಬ ಪಟ್ಟಣವನ್ನು ಸ್ಥಾಪಿಸಿ ಪುಷ್ಕಲನಿಗೆ ಕೊಟ್ಟು ಆತನು ಮರಳಿ ಅಯೋಧ್ಯೆಗೆ ಬಂದ ದ್ದನ್ನು ಕಂಡು ಶ್ರೀರಾಮಚಂದ್ರನಿಗೆ ಪರಮಾನಂದವಾಯಿತು. ಅದ ರಂತೆ ಲಕ್ಷ್ಮಣನ ಇಬ್ಬರೂ ಪುತ್ರರಿಗೆ ವಾಯುವ್ಯದ ಕಡೆಯ ಪ್ರದೇಶ ವನ್ನೂ ಅಂಗದೆಯ ಮತ್ತು ಚಂದ್ರಕಾಂತ ಎಂಬ ಪಟ್ಟಣವನ್ನೂ ಕಟ್ಟಿಸಿ ಅಂಗದನಿಗೂ, ಚಂದ್ರಸೇನನಿಗೂ ಅವುಗಳನ್ನು ಹಂಚಿಕೊಟ್ಟನು. ಶತ್ರುಘ್ನನಂತೂ ಮೊದಲೇ ಮಥುರೆಯ ರಾಜ್ಯವನ್ನಾಳುತ್ತಿದ್ದನು. ಈ ರೀತಿಯಾಗಿ ತನ್ನ ತಮ್ಮನ ಮಕ್ಕಳಿಗೆ ಹೊಸ ರಾಜ್ಯಗಳ ಪಟ್ಟ ಗಟ್ಟಿ ಶ್ರೀರಾಮಚಂದ್ರನು ಅವರನ್ನು ಸುಖಿಗಳನ್ನಾಗಿ ಮಾಡಿದನು

ಒಂದು ದಿನ ಜಗತ್ ಸಂಹಾರ ಕರ್ತನಾದ ಕಾಲನು. ತಾಪಸ ವೇಷವನ್ನು ಧರಿಸಿ ದರ್ಶನಕ್ಕೆಂದು ಬಂದ ಸಂಗತಿಯು ದೂತನ ಮುಖಾಂತರವಾಗಿ ಶ್ರೀರಾಮಚಂದ್ರನಿಗೆ ತಿಳಿದು ಬಂದಿತು. ಅವ ನನ್ನು ಆದರದಿಂದ ಬರಮಾಡಿಕೊಂಡು ಉತ್ತಮವಾದ ಆಸನದಲ್ಲಿ ಕುಳ್ಳಿರಿಸಿ ತಾನು ಅವರ ಕುಶಲ ಸಮಾಚಾರವನ್ನು ಕೇಳಿದನು. ಮುನಿವೇಷ ಧರಿಸಿದ ಕಾಲನು–"ತಾನು ಬಂದ ಸಂಗತಿಯನ್ನು ಅನ್ಯ ರಿಗೆ ತಿಳಿದರೆ ಅವರಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಡುವೆನೆಂದು ವಚನವಿತ್ತರೆ ನಾನು ಹೇಳುವೆನು. ಎಂದು ನುಡಿದನು. ಆಗ ಶ್ರೀರಾಮನು ಲಕ್ಷ್ಮಣನನ್ನು ಕರೆದು ನೀನು ಯಾರನ್ನೂ ಬಿಡ ಕೂಡದು" ಎಂದು ಅಪ್ಪಣೆಯನ್ನಿತ್ತನು. ವಿಶ್ವ ಸಂಹಾರ ಕರ್ತೃ ವಾದ ಕಾಲನು "ಪ್ರಭು ನೀವು ದೇವಾಧಿ ದೇವರು. ಪ್ರತ್ಯಕ್ಷ ವಿಷ್ಣು ವಿನ ಅವತಾರವು. ಯಾವ ಕಾರ್ಯ ಗೋಸ್ಕರ ಅವತಾರವನ್ನು ತಾಳಿ

ದಿರೋ, ಆ ಕಾರ್ಯವು ಸಮಾಪ್ತಿಯಾಯಿತು. ಇನ್ನು ನೀವು ಬೇಗ ಬರಬೇಕೆಂದು ಬ್ರಹ್ಮದೇವರು ಹೇಳಿರುವರು. ದೇವತೆಗಳು ತಮ್ಮ ದಾರಿಯನ್ನೇ ಕಾಯುತ್ತಿರುವರು ” ಎಂದು ಹೇಳಿದನು.

ಅಷ್ಟರಲ್ಲಿ ದೂರ್ವಾಸ ಮುನಿಗಳು ಅಲ್ಲಿಗೆ ಬಂದು “ ನಾನು ಈಗಲೇ ಶ್ರೀರಾಮಚಂದ್ರನ ಬಳಿಗೆ ಹೋಗಬೇಕಾಗಿದೆ ” ಎಂದು ಹೇಳಿದರು. ಆಗ ಲಕ್ಷ್ಮಣನು “ ಮುನಿಗಳೇ ಸ್ವಲ್ಪ ತಡೆದರೆ ಶ್ರೀರಾಮಚಂದ್ರನ ಬಳಿಗೆ ತಮ್ಮನ್ನು ಕರೆದುಕೊಂಡು ಹೋಗುವೆನೆಂದು ಹೇಳಲು ದೂರ್ವಾಸಮುನಿಗಳು ಬಹಳ ಕ್ರೋಧದಿಂದ ತಡ ಮಾಡಿದರೆ ನಿನಗೂ, ಭರತನಿಗೂ, ಶ್ರೀರಾಮಚಂದ್ರನಿಗೂ ಸಹ ಶಾಪವನ್ನು ಕೊಟ್ಟುಬಿಡುವೆನು ” ಎಂದು ಹೇಳಿದರು. ಅವರ ಮಾತನ್ನು ಕೇಳಿ ಲಕ್ಷ್ಮಣನು ಒಳ್ಳೆ ಸಂಕಟಸಮಯವು ಒದಗಿತೆಂದು ಭಾವಿಸಿದನು. ಆ ಸಂಕಟವು ಅನ್ಯರಿಗೆ ತಗಲಬಾರದೆಂದು ತಾನೊಬ್ಬನೇ ಅದಕ್ಕೆ ಗುರಿಯಾಗಬೇಕೆಂದು ಅರಿತು– ಶ್ರೀರಾಮಚಂದ್ರನ ಬಳಿಗೆ ಬಂದು ದೂರ್ವಾಸರು ಬಂದಿರುವ ಸಂಗತಿಯನ್ನು ಹೇಳಿದನು. ಮುನಿ ವೇಷ ಧರಿಸಿದ ಕಾಲನಿಗೆ ಶ್ರೀರಾಮಚಂದ್ರನು ಅಪ್ಪಣೆಕೊಟ್ಟು ಕಳುಹಿ ದೂರ್ವಾಸರನ್ನು ಎದುರುಗೊಂಡು ಆದರದಿಂದ ಬರಮಾಡಿಕೊಂಡು ತಮ್ಮ ಇಚ್ಛೆಯನ್ನು ಹೇಳಬೇಕೆಂದು ಬೇಡಿಕೊಂಡನು. ಆಗ ಅವರು “ ಸಾವಿರ ವರ್ಷ ತಪಸ್ಸನ್ನಾಚರಿಸಿ ನಾನು ಈಗಲೇ ನಿನ್ನ ಬಳಿಗೆ ಬಂದಿರುವೆನು. ನನಗೆ ಬಹಳ ಹಸಿವೆಯಾಗಿದೆ. ಕಾರಣ ಉಣಲು ಬಡಿಸಬೇಕು ” ಎಂದು ಹೇಳಿದರು. ಅವರ ಮಾತಿನಂತೆ ಉತ್ತಮೋತ್ತಮವಾದ ಷಡ್ರಸಾನ್ನಗಳನ್ನು ತರಿಸಿ ಅವರಿಗೆ ಯಥೇಚ್ಛವಾಗಿ ಉಣಬಡಿಸಲು ಅವರು ಆನಂದದಿಂದ ಶ್ರೀರಾಮಚಂದ್ರನಿಗೆ ಆಶೀರ್ವದಿಸಿ ಹೊರಟು ಹೋದರು.

ದೂರ್ವಾಸರು ಹೋದತರುವಾಯ ಇದುವರೆಗೆ ಶ್ರೀರಾಮಚಂದ್ರನಲ್ಲಿದ್ದ ಆನಂದವು ಒಮ್ಮೆಲೇ ಮಾಯವಾಯಿತು. ತಾನು ಪ್ರತಿಜ್ಞೆ ಮಾಡಿದಂತೆ “ ಲಕ್ಷ್ಮಣನಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಬೇಕಲ್ಲವೇ ? ಎಂದು ಅತಿ ದುಃಖದಿಂದ ಕಣ್ಣೀರುದುರಿಸುತ್ತ ಮುಖ ತಗ್ಗಿಸಿ ಸುಮ್ಮನೇ ಕುಳಿತುಬಿಟ್ಟನು. ಶ್ರೀರಾಮಚಂದ್ರನ ಮನಸ್ಥಿತಿಯನ್ನರಿತ ಲಕ್ಷ್ಮಣನು ಕೈಜೋಡಿಸಿ “ ಮಹಾರಾಜಾ, ನೀವು ಕೊಟ್ಟ ವಚನವನ್ನು ಪಾಲಿಸಲೇಬೇಕು. ನಿಃಶಂಕಮನಸ್ಸಿನಿಂದ ನೀವು ನನಗೆ ಶಿಕ್ಷೆಕೊಡಬೇಕು. ಮುಂದಾಲೋಚನೆಯನ್ನರಿತು ನಾನು ನಿಮ್ಮ ಏಕಾಂತದಲ್ಲಿ ಬಂದೆನು. ಇನ್ನು ನನಗೆ ಯಾವ ಆಶೆಯೂ ಇರುವದಿಲ್ಲ. ದೇಹವನ್ನು ತ್ಯಜಿಸಲು ಸಿದ್ಧನಾಗಿರುವೆನು. ನಿಮ್ಮ ಹಸ್ತಗಳಿಂದ ನನಗೆ ಮರಣವು ಒದಗಿದರೆ ಅದು ನನ್ನ ಭಾಗ್ಯವೇ ಸರಿ. ನೀವು ಸ್ವಲ್ಪವೂ ಕೂಡ ದುಃಖಿಸಬೇಡಿರಿ ” ಎಂದು ಹೇಳಿ ಮರಣಕ್ಕೆ ಸಿದ್ಧನಾಗಿನಿಂತನು. ಆಗ ಶ್ರೀರಾಮಚಂದ್ರನು ವಶಿಷ್ಠ ಮಹರ್ಷಿಗಳನ್ನೂ, ಎಲ್ಲ ಮಂತ್ರಿಗಳನ್ನೂ, ಸಭಿಕರನ್ನೂ ಒಂದು ಗೂಡಿಸಿ ಈ ಸಂಗತಿಯನ್ನವರಿಗೆ ಅರುಹಿ— “ ಇನ್ನು ಮುಂದೆ ನಾನು ಹೇಗೆ ಮಾಡಬೇಕು ? ಎಂಬುದನ್ನು ನೀವೆಲ್ಲರೂ ವಿಚಾರಿಸಿ ಹೇಳಿರಿ ” ಎಂದನು. ಅವನ ಈ ಪ್ರಶ್ನೆಯನ್ನರಿತ ವಶಿಷ್ಠ ಮಹರ್ಷಿಗಳು “ ಶ್ರೀರಾಮಚಂದ್ರಾ, ಲಕ್ಷ್ಮಣನಿಗೆ ಗಡೀಪಾರುಮಾಡುವದೇ ಉಚಿತವೆಂದು ನನಗೆ ತೋರುತ್ತದೆ. ಅದರಿಂದ ನೀನು ಕೊಟ್ಟ ವಚನವನ್ನು ಪಾಲಿಸಿದಂತಾಗುವದು. ವಚನ ಭ್ರಷ್ಟನಾದರೆ ಧರ್ಮನಷ್ಟವಾಗುವದು. ಧರ್ಮನಷ್ಟವಾದರೆ ಪ್ರಜರ ಅಕಲ್ಯಾಣವಾಗುವದು. ಅದ ಕಾರಣ ಲಕ್ಷ್ಮಣನನ್ನು ಗಡೀಪಾರುಮಾಡಿ ನೀನು ಧರ್ಮವನ್ನು ಕಾಪಾಡು ” ಎಂದು ಶ್ರೀರಾಮಚಂದ್ರನಿಗೆ ಹೇಳಿದರು. ಆಗ ಶ್ರೀರಾಮಚಂದ್ರನು “ ಲಕ್ಷ್ಮಣಾ, ಧರ್ಮಕ್ಕೋಸ್ಕರ ನಾನು ನಿನ್ನನ್ನು

ತ್ಯಜಿಸಿರುವೆನು. ಸಜ್ಜನರು ತಮ್ಮನ್ನು ತ್ಯಜಿಸುವದೇ ಮೃತ್ಯು ಸಮಾನವೆಂದು ಭಾವಿಸುವರು" ಎಂದು ಹೇಳಿದನು. ಕೂಡಲೇ ಲಕ್ಷ್ಮಣನು ಶ್ರೀರಾಮಚಂದ್ರನಿಗೆ ಪ್ರದಕ್ಷಿಣೆ ಹಾಕಿ ಸಾಷ್ಟಾಂಗವೆರಗಿ ಸಭೆಯನ್ನು ಬಿಟ್ಟು ಹೊರಗೆ ಬಂದನು. ಅನಂತರ ಶರಯೂನದಿಗೆ ಬಂದು ಅಲ್ಲಿ ಸ್ನಾನಮಾಡಿ ದರ್ಭಾಸನದ ಮೇಲೆ ಕುಳಿತು ಪ್ರಾಣಾಯಾಮದಿಂದ ದೇಹವನ್ನು ಬಿಟ್ಟನು.

ಮನುಷ್ಯನಿಗೆ ಎಷ್ಟೇ ದುಃಖವು ಒದಗಿದರೂ ಕೂಡ ಧರ್ಮದ ಸಲುವಾಗಿ ಪ್ರಿಯವಾದ ವಸ್ತುವನ್ನೂ ಸಹ ತ್ಯಜಿಸಬೇಕಾಗುವದು. ಅದರಂತೆ ಶ್ರೀರಾಮಚಂದ್ರನು ಹಿಂದಕ್ಕೆ ಪ್ರಜರಿಗೋಸ್ಕರ ಸೀತೆಯನ್ನು ತ್ಯಜಿಸಿದ್ದನು. ಹಾಗೆಯೇ ಈಗಲೂ ವಚನ ಪರಿಪಾಲನೆಗಾಗಿ ಲಕ್ಷ್ಮಣನನ್ನು ತ್ಯಜಿಸಬೇಕಾಯಿತು. ಆತನಿಗೆ ಎಷ್ಟೋ ಕಷ್ಟಗಳು ಒದಗಿದರೂ ಸಹ ತನ್ನ ಕರ್ತವ್ಯವನ್ನು ನೆರವೇರಿಸಿದನು.

ಲಕ್ಷ್ಮಣನು ಹೋದ ತರುವಾಯ ಶ್ರೀರಾಮಚಂದ್ರನುದುಃಖಾತಿರೇಕದಿಂದ ಸಭಿಕರನ್ನೂವಶಿಷ್ಠ ಮುನಿಗಳನ್ನೂ ಕುರಿತು ಮಾತನಾಡಿದನು. "ನಾನು ಭರತನಿಗೆ ರಾಜ್ಯಾಭಿಷೇಕವನ್ನು ಮಾಡಿ ಈಗಲೇ ವನಕ್ಕೆ ತೆರಳುವೆನು. ಲಕ್ಷ್ಮಣನು ಹೋದ ದಾರಿಯನ್ನೇ ನಾನು ಹಿಡಿಯುವೆನು. ಕಾರಣ ಭರತನ ರಾಜ್ಯಾಭಿಷೇಕದ ಸಿದ್ಧತೆಯನ್ನು ಬೇಗ ನೆರವೇರಿಸಿರಿ. ಇಂದೇ ನಾನು ಹೊರಡುವ ಸಿದ್ಧತೆಯಲ್ಲಿರುವೆನು" ಎಂದು ಹೇಳಿದನು. ಅವನ ಈ ದುಃಖೋದ್ಗಾರವನ್ನು ಕೇಳಿ ಭರತನೂ, ಪ್ರಜೆಗಳೂ ಬಹು ಶೋಕಾಕುಲರಾದರು. ಮತ್ತು ಎಲ್ಲರೂ ಶ್ರೀರಾಮಚಂದ್ರನಿಗೆ ನಮಸ್ಕರಿಸಿದರು. ಆಗ ಭರತನು ಮುಂದೆ ಬಂದು "ರಾಮಚಂದ್ರಾ, ನನಗೆ ರಾಜ್ಯವಾಳುವ ಆಶೆಯಿರುವದಿಲ್ಲ. ನಾನೂ ನಿಮ್ಮ ಸಂಗಡ ಬರುವೆನೆಂದು" ಹಟ

ಹಿಡಿದನು. ಮತ್ತು "ಈ ಕೋಸಲದೇಶವನ್ನು ಲವ-ಕುಶರಿಗೆ ಹಂಚಿ ಕೊಡಬೇಕು" ಎಂದು ಬೇಡಿಕೊಂಡನು. ಅವನ ಈ ಮಾತಿಗೆ ಮಂತ್ರಿಗಳು ಒಪ್ಪಿಕೊಂಡು ತಾವೂ ಸಹ ಶ್ರೀರಾಮಚಂದ್ರನ ಸಂಗಡ ಸ್ವರ್ಗಕ್ಕೆ ಹೋಗಲು ಸಿದ್ಧರಾದರು. ವಶಿಷ್ಠ ಮಹರ್ಷಿಗಳೂ ಸಹ ಹೊರಡಲು ಅನುವಾದರು. ಎಲ್ಲ ಪ್ರಜೆಗಳೂ ಕೈಜೋಡಿಸಿ "ಶ್ರೀರಾಮ ಚಂದ್ರಾ, ನಿಮ್ಮ ಪ್ರೀತಿಯು ಇದು ವರೆಗೆ ನಮ್ಮ ಮೇಲಿದ್ದದ್ದು ನಿಜ ವಾದರೆ ತಾವು ನಮ್ಮನ್ನು ಸಂಗಡ ಕರೆದುಕೊಂಡು ಹೋಗಬೇಕು" ಎಂದು ಹೇಳಿದರು. ಆಗ ಶ್ರೀರಾಮಚಂದ್ರನು ಅವರ ಮಾತಿಗೆ ಒಪ್ಪಿಕೊಂಡನು. ಅನಂತರ ದಕ್ಷಿಣ ಕೋಸಲದಲ್ಲಿ ಕುಶನಿಗೆ ಕುಶಾ ವತಿ ಎಂಬ ಪಟ್ಟಣವನ್ನೂ ಕಟ್ಟಿಸಿ ಕೊಟ್ಟನು. ಮತ್ತು ಉತ್ತರ ಕೋಸಲದಲ್ಲಿ ಸ್ರಾವಸ್ತಿ ಎಂಬ ಪಟ್ಟಣವನ್ನು ಕಟ್ಟಿಸಿ ಲವನಿಗೆ ಕೊಟ್ಟನು. ಅವರಿಬ್ಬರಿಗೂ ರಾಜ್ಯಾಭಿಷೇಕವನ್ನು ಮಾಡಿ ಅವರಿಗೆ ಆನೆ, ಕುದುರೆ, ಧನಧಾನ್ಯ ನವರತ್ನಾದಿಗಳನ್ನೂ ದಾಸದಾಸಿಯರನ್ನೂ ಸಮನಾಗಿ ಹಂಚಿಕೊಟ್ಟು ಅವರವರ ಪಟ್ಟಣಕ್ಕೆ ಅವರನ್ನು ಕಳಿಸಿ ದನು. ತದನಂತರ ಈ ಸಂಗತಿಯನ್ನು ಶತ್ರುಘ್ನನಿಗೆ ಅರುಹಲು ಒಬ್ಬ ದೂತನನ್ನು ಮಥುರೆಗೆ ಕಳಿಸಿದನು. ಕೂಡಲೆ ದೂತನು ಮೂರು ದಿನಗಳಲ್ಲಿ ಮಥುರೆಯನ್ನು ಮುಟ್ಟಿ ಎಲ್ಲ ಸಂಗತಿಯನ್ನು ಶತ್ರುಘ್ನನಿಗೆ ಅರುಹಲು ಅವನು ಖಿನ್ನ ವದನನಾಗಿ ಎರಡೂ ಮಕ್ಕಳಿಗೆ ತನ್ನ ರಾಜ್ಯ ವನ್ನು ಹಂಚಿಕೊಟ್ಟು ತಾನೊಬ್ಬನೇ ಅಯೋಧ್ಯೆಗೆ ಬಂದು ಶ್ರೀರಾಮ ಚಂದ್ರನ ದರುಶನವನ್ನು ತೆಗೆದುಕೊಂಡು ಅವರ ಸಂಗಡ ಹೊರಡಲು ಸಿದ್ಧನಾದನು. ಶ್ರೀರಾಮಚಂದ್ರನು ಪರಂಧಾಮಕ್ಕೆ ಹೊರಡುವ ಸಂಗತಿಯು ಗುಪ್ತಚಾರರಿಂದ ಸುಗ್ರೀವಾದಿ ವೀರರಿಗೂ ವಿಭೀಷಣಾದಿ ಅಸುರರಿಗೂ ತಿಳಿಯಿತು. ಅವರು ಕೂಡಲೆ ಅಯೋಧ್ಯೆಗೆ ಸೈನ್ಯ ಸಮೇತವಾಗಿ ಬಂದು ತಲ್ಪಿದರು. ಸುಗ್ರೀವನು ರಾಮಚಂದ್ರನನ್ನು

ಕಂಡು ಕೈಜೋಡಿಸಿ— “ ಮಹಾಪ್ರಭು, ತಾವು ಪರಂಧಾಮಕ್ಕೆ ಹೋಗುವ ಸಂಗತಿಯನ್ನು ಕೇಳಿ ಅಂಗದನಿಗೆ ರಾಜ್ಯಾಭಿಷೇಕವನ್ನು ಮಾಡಿ ತಮ್ಮ ಸಂಗಡ ಬರಲು ಸಿದ್ಧನಾಗಿ ಬಂದಿರುವೆನು. ಸುಗ್ರೀವ ನಂತೆ ಇತರರು ಸಹ ಹಟಹಿಡಿದರು. ಆಗ ರಾಮಚಂದ್ರನು ಅವರ ಮಾತಿಗೂ ಒಪ್ಪಿಗೆಯನ್ನಿತ್ತನು. ವಿಭೀಷಣನನ್ನು ಕುರಿತು—“ ವಿಭೀ ಷಣಾ, ಚಂದ್ರ-ಸೂರ್ಯರು ಇರುವವರೆಗೆ ನೀನು ಲಂಕೆಯ ರಾಜ್ಯ ವನ್ನಾಳು’ ಎಂದು ಹೇಳಿದನು. ಹನುಮಂತನನ್ನು ಕುರಿತು—‘ಹನು ಮಂತಾ, ಈ ಜಗತ್ತಿನಲ್ಲಿ ಶ್ರೀರಾಮ ಕಥೆಯು ಇರುವವರೆಗೂ ನೀನು ಜೀವಿಸು; ಎಂದು ಅನುಗ್ರಹಿಸಿದನು. ತದನಂತರ ಕಲಿಯುಗವು ಪ್ರಾಪ್ತವಾಗುವವರೆಗೆ ನೀನು ಇರಬೇಕೆಂದು ಜಾಂಬುವಂತನಿಗೆ ವರವಿತ್ತನು: ಉಳಿದವರೆಲ್ಲರೂ ನನ್ನ ಸಂಗಡ ಬರಲು ಅಡ್ಡಿಯಿಲ್ಲ, ಎಂದು ಆಜ್ಞೆಕೊಟ್ಟನು.

ಮರುದಿನ ಬೆಳಗಿನಲ್ಲಿ ವಿಶಾಲಾಕ್ಷನಾದ ಶ್ರೀರಾಮಚಂದ್ರನು ತಮ್ಮ ಗುರುಗಳಾದ ವಶಿಷ್ಠರನ್ನು ಕರೆಕಳುಹಿ, ಗುರುಗಳೇ, ಪ್ರಜ್ವ ಲಿತವಾದ ಅಗ್ನಿಯನ್ನು ತೆಗೆದುಕೊಂಡು ನೀವು ಮುಂದೆ ನಡೆಯಿರಿ. ವಾಜಪೇಯ, ಮತ್ತು ಅತಿರಾತ್ರ ಅಗ್ನಿಗಳನ್ನೂ ಸಹ ತೆಗೆದುಕೊಳ್ಳಿರಿ” ಎಂದು ಹೇಳಿದನು. ಆಗ ತೇಜೋಮಯರಾದ ವಶಿಷ್ಠ ಮುನಿಗಳು ಮನದಲ್ಲಿ ಎಲ್ಲ ಸಂಗತಿಯನ್ನು ಜ್ಞಾಪಿಸಿಕೊಂಡು ವಿಧಿಪೂರ್ವಕವಾಗಿ ಮಹಾಪ್ರಸ್ಥಾನ ಕಾಲೋಚಿತ ಕರ್ಮವನ್ನರಿತು ಹೊರಟರು. ತದ ನಂತರ ಶ್ರೀರಾಮಚಂದ್ರನು ರೇಶಿಮೆಯ ವಸ್ತ್ರವನ್ನು ಉಟ್ಟು ಕೈಯಲ್ಲಿ ಕುಶವನ್ನು ಧರಿಸಿ, ಮೌನವ್ರತವನ್ನು ಸ್ವೀಕರಿಸಿ, ಪಟ್ಟಣದ ಹೊರಗೆ ಹೊರಟನು. ಆಗ ಎಡಭಾಗದಲ್ಲಿರುವ ಸೀತಾಮಾತೆಯು ಕರದಲ್ಲಿ ಕಮಲಗಳನ್ನು ಧರಿಸಿ ಶ್ರೀರಾಮನ ಸನ್ನಿಧಿಗೆ ಆಗಮಿಸಿದಳು. ಮತ್ತು ಬಲಭಾಗದಲ್ಲಿರುವ ವಿಶಾಲನೇತ್ರವುಳ್ಳ ಲಜ್ಜಾದೇವಿಯು ಸಹ ಆಗ

ಮಿಸಿದಳು. ಎಲ್ಲ ಶಸ್ತ್ರಾಸ್ತ್ರಗಳು ಸಹ ಮನುಷ್ಯ ರೂಪವನ್ನು ಧರಿಸಿ ಶ್ರೀರಾಮಚಂದ್ರನ ಹಿಂದೆ ಹಿಂದೆ ಸಾಗಿದವು. ಬ್ರಾಹ್ಮಣ ರೂಪವನ್ನು ಧರಿಸಿದ ವೇದಗಳು ಉತ್ತರ ಕಡೆಯಿಂದಲೂ ಗಾಯಿತ್ರಿಯು ದಕ್ಷಿಣ ಕಡೆಯಿಂದಲೂ ಪ್ರಾಪ್ತವಾದರು. ಓಂಕಾರ, ವಷಟ್‌ಕಾರಗಳು ಸಹ ಶ್ರೀರಾಮಚಂದ್ರನ ಸಂಗಡ ನಡೆದವು. ಮಹಾತ್ಮರಾದ ತಾಪಸಿಗಳು ಪರ್ವತಗಳು ಸಹ ಪರಂಧಾಮ ಹೋಗುತ್ತಿರುವ ಶ್ರೀರಾಮಚಂದ್ರನನ್ನು ಹಿಂಬಾಲಿಸಿದರು. ಅಂತಃಪುರದಲ್ಲಿಯ ಸ್ತ್ರೀಯರು, ಬಾಲಕರು ದಾಸ-ದಾಸಿಯರು, ದ್ವಾರಪಾಲಕರು ಸಹ ಹೊರಟರು. ರಾಣೀವಾಸದಲ್ಲಿಯ ಸ್ತ್ರೀಯರನ್ನು ಕರೆದುಕೊಂಡು ಶತ್ರುಘ್ನನು ಭರತ ಸಮೇತನಾಗಿ ಹೊರಟನು. ಹೀಗೆ ಅಯೋಧ್ಯೆಯಲ್ಲಿರುವ ಎಲ್ಲ ಜನರು ಮತ್ತು ಅತಿ ಸೂಕ್ಷ್ಮ ದೇಹವುಳ್ಳ ಸಜೀವ ಪ್ರಾಣಿಸಹ ಒಂದೂ ಬಿಡದೆ ಶ್ರೀರಾಮಚಂದ್ರನ ಸಂಗಡ ಹೊರಟವು. ಹೀಗೆ ಎಲ್ಲರೂ ಶ್ರೀರಾಮಚಂದ್ರನ ಸಮೇತವಾಗಿ ಅರ್ಧಯೋಜನದಷ್ಟು ದೂರವಿರುವ ಸರಯೂ ನದಿಯ ದಕ್ಷಿಣ ದಂಡೆಗೆ ಬಂದು ಪಶ್ಚಿಮಾಭಿಮುಖವಾಗಿ ಹೊರಟರು. ಆಗ ಶ್ರೀರಾಮಚಂದ್ರನು ಮುಂದೆ ಹೋಗಿ ಆ ಪುಣ್ಯಮಯವಾದ ಸರಯೂನದಿಯ ದರ್ಶನವನ್ನು ತೆಗೆದುಕೊಂಡನು. ಆ ಸಮಯದಲ್ಲಿ ಲೋಕಪಿತಾಮಹನಾದ ಬ್ರಹ್ಮನು ಎಲ್ಲ ದೇವತೆಗಳ ಸಮೇತನಾಗಿ ಶ್ರೀರಾಮಚಂದ್ರನ ಬಳಿಗಾಗಮಿಸಿದನು. ಅವನ ಸಂಗಡ ಒಂಮ ನೂರುಕೋಟಿ ದಿವ್ಯವಿಮಾನಗಳು ಬಂದಿದ್ದವು. ಆಕಾಶವು ದಿವ್ಯವಾದ ವಿಮಾನಗಳಿಂದ ತೇಜೋಮಯವಾಗಿ ಶೋಭಿಸುತ್ತಿತ್ತು. ಪರಮ ಪವಿತ್ರನಾದ ವಾಯುದೇವನು ಸುಗಂಧಿತ ದ್ರವ್ಯಸಮೇತನಾಗಿ ಓಡಾಡುತ್ತಿದ್ದನು. ತದನಂತರ ಶ್ರೀರಾಮಚಂದ್ರನು ತನ್ನ ಚರಣ ಕಮಲಗಳಿಂದ ಸರಯೂ ಜಲವನ್ನು ಸ್ಪರ್ಶಮಾಡಿದನು.

ಆಗ ಬ್ರಹ್ಮದೇವನು ಎಲ್ಲ ದೇವತೆಗಳ ಸಮೇತನಾಗಿ ಶ್ರೀರಾಮಚಂದ್ರನನ್ನು ಕುರಿತು-"ಹೇ ದೇವದೇವೇಶ್ವರನೇ, ನೀನು ಎಲ್ಲ ಲೋಕದ ಒಡೆಯನಾಗಿರುವೆ. ನಿನ್ನ ಸ್ವರೂಪವು ಅನ್ಯರಿಗೆ ತಿಳಿಯಲಾರದು. ವಿಶಾಲಲೋಚನನಾದ ಪರಮೇಶ್ವರನೇ, ನೀನು ಅಚಿಂತ್ಯನೂ, ಅವಿನಾಶನೂ, ಆಗಿರುವಿ ಬ್ರಹ್ಮರೂಪಿಯಾಗಿರುವಿ. ಮಹಾವೀರ್ಯವುಳ್ಳ ಈಶ್ವರನೇ, ಇನ್ನು ನೀನು ನಿನ್ನ ದಿವ್ಯರೂಪವನ್ನು ಧರಿಸು." ಎಂದು ಸ್ತುತಿಸಿದನು. ಕೂಡಲೇ ಭಗವಾನ್ ಶ್ರೀರಾಮಚಂದ್ರನು ತನ್ನ ತಮ್ಮಂದಿರಸಹಿತವಾಗಿ ದಿವ್ಯವಾದ ವೈಷ್ಣವ ತೇಜದಲ್ಲಿ ಸಶರೀರವಾಗಿ ಪ್ರವೇಶಿಸಿದನು. ಎಲ್ಲ ದೇವತೆಗಳೂ ಭಗವಾನ್ ವಿಷ್ಣುವಿನನ್ನು ಪೂಜಿಸಿದರು. ಮಹಾತೇಜಸ್ವಿಯಾದ ಭಗವಂತನು ಪಿತಾಮಹನಾದ ಬ್ರಹ್ಮನನ್ನು ಕುರಿತು, "ಸೂರತನೇ ಈ ಎಲ್ಲ ಜನಸಮುದಾಯಕ್ಕೂ ಉತ್ತಮ ಲೋಕವನ್ನು ನಿರ್ಮಿಸು" ಎಂದು ಹೇಳಿದನು. ಬ್ರಹ್ಮನು "ಈ ಎಲ್ಲ ಮನುಜರು ಸಾಂತಾನಿಕ ಲೋಕದಲ್ಲಿ ವಾಸಿಸುವರು. ಸಾಂತಾನಿಕ ಲೋಕವು ಬ್ರಹ್ಮಲೋಕಕ್ಕಿಂತಲೂ ಮೇಲಿರುವದು. ಎಲ್ಲ ವಾನರರು ಯಾವ ದೇವತಾಂಶವಾಗಿ ಜನಿಸುವರೋ ಅವರು ಆ ಸ್ವರೂಪವನ್ನು ಹೊಂದುವರು. ಸೂರ್ಯಪುತ್ರನಾದ ಸುಗ್ರೀವನು ಸೂರ್ಯಮಂಡಲಕ್ಕೆ ಹೋಗುವನು. ಉಳಿದವರೆಲ್ಲರೂ ತಮ್ಮ ತಮ್ಮ ಸ್ಥಳಕ್ಕೆ ಹೋಗುವರೆಂದು ಬ್ರಹ್ಮನು ಹೇಳಿದನು. ತದನಂತರ ಉಳಿದ ಎಲ್ಲ ಪರಿವಾರವು ಸರಯೂ ನದಿಯ ಸ್ನಾನಮಾಡಿ ತಮ್ಮ ತಮ್ಮ ದೇಹವನ್ನು ತ್ಯಜಿಸಿ ದಿವ್ಯದೇಹದಿಂದ ವಿಮಾನಾರೂಢರಾಗಿ ದೇವಲೋಕಕ್ಕೆ ಹೊರಟು ಹೋದರು.

ಈ ರೀತಿಯಾಗಿ ಶ್ರೀರಾಮಚಂದ್ರನು ತನ್ನ ಪ್ರಜರ ಮೇಲಿನ ಅಪರಿಮಿತ ಪ್ರೀತಿಯಿಂದ ಅಯೋಧ್ಯೆಯ ಎಲ್ಲ ಜನರಿಂದ ಉತ್ತಮ

ಲೋಕವನ್ನು ಹೊಂದಿದನು. ಶ್ರೀರಾಮಚಂದ್ರನು ಪರಂಧಾಮಕ್ಕೆ ತೆರಳಿದನಂತರ ಅಯೋಧ್ಯಾಪಟ್ಟಣವು ಎಷ್ಟೋವರ್ಷಗಳವರೆಗೆ ಶೂನ್ಯ ವಾಗಿ ಉಳಿಯಿತು.

— ಶ್ರೀರಾಮಚಂದ್ರಾರ್ಪಣಮಸ್ತು —

---

## ಉಪಸಂಹಾರ.

ರಾಮಾಯಣವು ಭಾರತೀಯ ಆರ್ಯರ ವಾಙ್ಮಯದಲ್ಲಿಯ ಒಂದು ಸರ್ವೋತ್ಕೃಷ್ಟವಾದ ಗ್ರಂಥವಿರುತ್ತದೆ. ಇದನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ ಅನ್ನಿಸುವದು. ಈ ಗ್ರಂಥಕ್ಕೆ ಕೋಹಿನೂರ ವಜ್ರದ ಉಪಮೆಯನ್ನು ಕೊಟ್ಟರೂ ಸಹ ಅದು ಕಡಿಮೆಯೇ ಸರಿ. ಇದರ ತೇಜವು ಎಲ್ಲ ಕಡೆಯಲ್ಲಿ ಪಸರಿಸಿ ಉಜ್ವಲವಾದ ನೀತಿಯ ಮಾರ್ಗದ ಬೆಳಕನ್ನು ಬೀರುತ್ತಲಿದೆ. ರಾಮಾಯಣದಂಥ ಪವಿತ್ರ ಗ್ರಂಥವು ಯಾವ ಭಾಷೆಯಲ್ಲಿಯೂ ಯಾವ ದೇಶದಲ್ಲಿಯೂ ನೋಡಲು ಸಿಗಲಾರದು.

ರಾಮಚಂದ್ರನಂಥ ಅಲೌಕಿಕ ಸಾಮರ್ಥ್ಯವುಳ್ಳವನೂ, ಉದಾತ್ತ ಬುದ್ಧಿಯುಳ್ಳ ಮನುಷ್ಯನೂ ಹಿಂದಕ್ಕೆ ಎಂದಿಗೂ ಆಗಿಲ್ಲ ಮುಂದಾದರೂ ಆಗುವದು ಅಶಕ್ಯವು. ರಾಮನು ಅವತಾರಕಾರ್ಯ ವನ್ನು ಮಾಡಿ ಎಷ್ಟೋಸಾವಿರ ವರ್ಷಗಳಾಗಿ ಹೋದವು. ಆದರೂ ಸಹ ಭರತಖಂಡದ ನಿವಾಸಿಗಳು ಶ್ರೀರಾಮಚಂದ್ರನನ್ನು ಪರಮೇಶ್ವರ ನೆಂದು ಭಾವಿಸಿ ಆತನ ಗುಣಗಾನಗಳನ್ನು ಮಾಡಿ ಈ ಭವಸಾಗರ

ದಿಂದ ಮುಕ್ತರಾದ ಅನೇಕರ ಉದಾಹರಣೆಗಳು ಇತಿಹಾಸದ ಪುಟಗಳಲ್ಲಿ ದೊರೆಯುತ್ತವೆ. ಹಿಂದುಸ್ಥಾನದ ಆರ್ಯಸ್ತ್ರೀಯರ ಅಂತಃಕರಣದಲ್ಲಿ ಸೀತಾಮಾತೆಯ ಪವಿತ್ರವಾದಚರಿತ್ರೆಯು ತುಂಬಿರುವದು. ಅವಳ ನಿಶ್ಚಲವಾದ ಪತಿಪ್ರೇಮವೂ, ಅಚಲವಾದ ಚರಿತ್ರೆಯೂ ಪಾತಿವ್ರತ್ಯವೂ, ಪತಿಗೆ ಒದಗಿದ ಎಲ್ಲ ಸಂಕಟಗಳನ್ನು ತಾನು ಅನುಭೋಗಿಸಲು ಸಿದ್ಧಳಾಗಿರುವದೂ ಇತ್ಯಾದಿ ಅನೇಕ ಸದ್ಗುಣಗಳು ನಮ್ಮ ಆರ್ಯಸ್ತ್ರೀಯರ ಅಂತಃಕರಣದಮೇಲೆ ಒಡಮೂಡಿದ್ದರಿಂದ ಅವರು ಸಮಾಜದಲ್ಲಿ ಭೂಷಣರಾಗಿ ಉಳಿದಿರುವರು. ರಾಮ–ಸೀತೆಯರ ಹೆಸರನ್ನರಿಯದ ಮನುಷ್ಯನು ಹಿಂದೆ ಮುಂದೆ ಯಾವ ಕಾಲದಲ್ಲಿಯೂ ಸಹ ಸಿಗಲಾರನು. ರಾಮನ ಉದಾತ್ತವಾದ ಮತ್ತು ಹೃದಯಂಗಮವಾದ ಚರಿತ್ರೆಯನ್ನು ಓದಿದರೆ ಮನುಷ್ಯನು ಸಂಸಾರದಲ್ಲಿ ನೀತಿಯಿಂದ ಹೇಗೆ ಬಾಳಬೇಕೆಂಬುದನ್ನು, ಕನ್ನಡಿಯಲ್ಲಿ ಮುಖವು ಹೇಗೆ ಕಾಣುವದೋ ಹಾಗೆ ಇದರಿಂದ ಕಂಡುಬರುತ್ತದೆ. ಶ್ರೀರಾಮಚಂದ್ರನ ಹೆಸರನ್ನು ನೆನೆಸಿದೊಡನೆಯೇ ಎಲ್ಲ ಸದ್ಗುಣಗಳಿಂದ ತುಂಬಿರುವ ಒಂದು ಸುಂದರವಾದ ಮೂರ್ತಿಯು ನಮ್ಮ ಕಣ್ಣೆದುರಿಗೆ ನಿಲ್ಲುತ್ತದೆ. ಕಾರಣವೇನಂದರೆ ಒಳ್ಳೆಯ ಮಿತ್ರನು, ಒಳ್ಳೆಯ ಪತಿಯು ಒಳ್ಳೆಯ ಬಂಧುವು ಒಳ್ಳೆ ಪುತ್ರನು ಒಳ್ಳೆಯ ಶತ್ರುವು ಒಳ್ಳೆಯ ರಾಜನು ಈ ಎಲ್ಲ ಉದಾಹರಣೆಗಳು ಶ್ರೀರಾಮಚರಿತ್ರೆಯಲ್ಲಿಯೇ ದೊರೆಯುತ್ತವೆ. ಆದಕಾರಣ ಈ ಪುಸ್ತಕಕ್ಕೆ " ಭಗವಾನ್ ಶ್ರೀರಾಮ " ಎಂಬ ಹೆಸರನ್ನು ಕೊಡಲಾಗಿದೆ.

ಇಕ್ಷ್ವಾಕು ವಂಶದಲ್ಲಿ ಜನಿಸಿದ ಶ್ರೀರಾಮಚಂದ್ರನು ತನ್ನ ಇಂದ್ರಿಯಗಳನ್ನೂ ಮನಸ್ಸನ್ನೂ ತನ್ನನ್ನು ತಾನೇ ಗೆದ್ದುಕೊಂಡನು. ತನ್ನ ಪರಾಕ್ರಮದಿಂದ ಶತ್ರುವನ್ನು ಜಯಿಸಿದನು. ಅವನು ನೀತಿ

ವಂತನೂ, ಬುದ್ಧಿವಂತನೂ, ಧರ್ಮಜ್ಞನೂ, ಸತ್ಯವಂತನೂ, ಜ್ಞಾನವಂತನೂ ಆಗಿದ್ದನು. ಅವನು ಉದಾರ ಹೃದಯುದವನಾಗಿದ್ದನು. ಮತ್ತು ಸಜ್ಜನರಿಗೆ ಆಶ್ರಯುದಾತನಾಗಿದ್ದನು. ಸಕಲರಲ್ಲಿ ಸಮದೃಷ್ಟಿಯುಳ್ಳವನಾಗಿದ್ದನು. ಅವನು ಸಮುದ್ರದಂತೆಗಂಭೀರನೂ, ಹಿಮಾಲಯದಂತೆ ಧೈರ್ಯವಂತನೂ, ಅಗ್ನಿಯಂತೆ ಪ್ರಖರವುಳ್ಳವನೂ, ಪೃಥ್ವಿಯಂತೆ ಕ್ಷಮಾಶೀಲನೂ, ಕುಬೇರನಂತೆ ಉದಾರನೂ, ಧರ್ಮನಂತೆ ಸತ್ಯವಾದಿಯೂ ಆಗಿದ್ದನು. ಆದ್ದರಿಂದ ಎಲ್ಲ ಸದ್ಗುಣಗಳ ತವರುಮನೆಯಂತೆ ಶ್ರೀರಾಮಚಂದ್ರನು ಪ್ರತ್ಯಕ್ಷ ಪರಮೇಶ್ವರನ ಅವತಾರವಿರುವಲ್ಲಿ ಆಶ್ಚರ್ಯವೇನು ? ಸಕಲ ಸದ್ಗುಣಗಳ ಸಮುಚ್ಚಯವೇ ಪರಮೇಶ್ವರನ ದೃಶ್ಯರೂಪವು.

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ||೧|| ಪರಿತ್ರಾಣಾಯ ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ||೨|| ಪೃಥ್ವಿಯಲ್ಲಿ ಧರ್ಮವು ಲಯವಾಗಿ ಅಧರ್ಮವು ಹೆಚ್ಚಿದಾಗ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲಿಸುವದಕ್ಕೋಸ್ಕರ ಪರಮೇಶ್ವರನು ತನ್ನ ಅಂಶಭೂತವಾಗಿ ಪೃಥ್ವಿಯ ಮೇಲೆ ಜನಿಸುವನು. ಅದರಂತೆ ಆ ಕಾಲದಲ್ಲಿ ಶ್ರೀರಾಮಚಂದ್ರನು ಜನಿಸಿ ದುಷ್ಟರಾವಣ ಮೊದಲಾದ ರಾಕ್ಷಸರನ್ನು ಸಂಹರಿಸಿ ಭೂಭಾರವನ್ನು ಇಳಿಸಿದನು.

ಶ್ರೀರಾಮಚಂದ್ರನು ಗುರುಹಿರಿಯರನ್ನೂ ಸಾಧು ಸಂತರನ್ನೂ ಒಳ್ಳೇ ಭಾವದಿಂದ ಕಾಣುತ್ತಿದ್ದನು. ಶ್ರೀರಾಮನು ಏಕವಚನವುಳ್ಳವನಾಗಿದ್ದನು. ಎಂಥ ಕಠಿಣ ಕಾಲದಲ್ಲಿಯೂ ಸಹ ಕೊಟ್ಟ ವಚನವನ್ನು ಹಿಂದಿರುಗಿಸುತ್ತಿರಲಿಲ್ಲ. ತಂದೆಯು ತನ್ನ ಪತ್ನಿಗೆ ಕೊಟ್ಟ ವಚನವನ್ನು ಪಾಲಿಸುವದಕ್ಕೋಸ್ಕರ ಈತನು ರಾಜ್ಯ ವೈಭವಗಳನ್ನು ತ್ಯಜಿಸಿ

ಹದಿನಾಲ್ಕು ವರುಷ ವನವಾಸ ಕಷ್ಟವನ್ನು ತನ್ನ ತಮ್ಮ ಹಾಗು ಪತ್ನಿಯ ರೊಡಗೂಡಿ ಅನುಭೋಗಿಸಿದನು. ತಂದೆತಾಯಿಗಳಲ್ಲಿ ಈತನ ಪ್ರೇಮವು ಅಪಾರವಾಗಿದ್ದಿತು. ಅವನು ನಿತ್ಯದಲ್ಲಿಯೂ ಪ್ರಾತಃಕಾಲ ದಲ್ಲಿ ಎದ್ದು ಮಾತಾ-ಪಿತೃಗಳನ್ನೂ ಗುರುಹಿರಿಯರನ್ನೂ ವಂದಿಸುತ್ತಿ ದ್ದನು. ಮಲತಾಯಿಯಾದ ಕೈಕೇಯಿಯು ಅಡವಿಗೆ ಅಟ್ಟಿದರೂ ಸಹ ಅವನು ಅವಳ ಮೇಲೆ ಕೋಪಿಸದೇ ಆನಂದದಿಂದ ನಾರುಬಟ್ಟೆಗಳನ್ನು ಧರಿಸಿ ಅರಣ್ಯಕ್ಕೆ ತೆರಳಿದನು. ಮತ್ತು ಶಾಂತರೀತಿಯಿಂದ ಯಾರನ್ನು ದೂಷಿಸದೇ ತನಗೆ ಒದಗಿದ್ದ ಕಷ್ಟನಷ್ಟಗಳನ್ನು ಸಂತೋಷದಿಂದ ಅನುಭೋಗಿಸಿದನು. ಇದರಿಂದ ಅವನಲ್ಲಿ ಸುಖದುಃಖಗಳಸಮ ವುಳ್ಳಭಾವವೂ. ಅಚಲವಾದ ತಾಳ್ಮೆಯೂ ಕಂಡುಬರುವದು. ಲಕ್ಷ್ಮಣ-ಭರತ, ಶತ್ರುಘ್ನರು ಶ್ರೀರಾಮಚಂದ್ರನಿಗೆ ಮಲತಮ್ಮಂದಿ ರಾದರೂ ಕೂಡ ಅವನು ಅವರನ್ನು ಒಂದೇ ಉದರದಿಂದ ಜನಿಸಿದ ವರಿಗಿಂತಲೂ ಹೆಚ್ಚಾಗಿ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದನು. ಅದ ರಂತೆ ಅವರೂ ಸಹ ಶ್ರೀರಾಮಚಂದ್ರನಿಗೆ ತಂದೆಯಂತೆ ಮರ್ಯಾದೆ ಕೊಡುತ್ತಿದ್ದರು. ಹೀಗೆ ಅವರಲ್ಲಿ ಒಳ್ಳೆಯ ಪ್ರೇಮಭಾವವು ನೆಲೆ ಗೊಂಡಿದ್ದಿತು. ಶ್ರೀರಾಮಚಂದ್ರನು ವನಕ್ಕೆ ತೆರಳಿದರೆ ಲಕ್ಷ್ಮಣನು ತನ್ನ ಸಕಲ ಸೌಖ್ಯಗಳನ್ನು ತ್ಯಜಿಸಿ ಆತನನ್ನು ಹಿಂಬಾಲಿಸಿ ೧೪ವರ್ಷ ಬ್ರಹ್ಮಚರ್ಯದಿಂದ ಕಾಲಕಳೆದು ಏಕನಿಷ್ಠತೆಯಿಂದ ಆತನ ಸೇವೆಯನ್ನು ಮಾಡಿದನು. ಸೀತಾಮಾತೆಯು ತನ್ನ ಅತ್ತಿಗೆಯಾದರೂ ಕೂಡ ಅವಳನ್ನು ಎಂದಿಗೂ ಕಣ್ಣೆತ್ತಿ ನೋಡಲಿಲ್ಲ. ಅಂತೆಯೇ ಅವನು ಸೀತೆಯ ಅಲಂಕಾರಗಳನ್ನು ನೋಡಿದಾಗ ಕರ್ಣಕುಂಡಲಗಳನ್ನು ಆತನು ಗುರುತಿಸಲಿಲ್ಲ. ಪಾದಗಳಲ್ಲಿಯ ನೂಪುರಗಳಷ್ಟೇ ಆತನಿಗೆ ಗೊತ್ತಾದವು. ಇದನ್ನು ನೆನೆಸಿದರೆ ಅವನು ಪರಸ್ತ್ರೀಯರನ್ನು ಮುಖ ವೆತ್ತಿ ಎಂದಿಗೂ ನೋಡುತ್ತಿರಲಿಲ್ಲವೆಂಬುದು ತಿಳಿದು ಬರುತ್ತದೆ.

ಆದರಂತೆ ಭರತನೂ ಸಹ ಶ್ರೀರಾಮಚಂದ್ರನ ಮೇಲಿನ ಬಂಧುಪ್ರೇಮ ದಿಂದ ತಾನು ತನ್ನ ಪಾಲಿಗೆಬಂದ ರಾಜ್ಯವನ್ನು ತ್ಯಜಿಸಿ ೧೪ ವರ್ಷದ ವರೆಗೆ ನಂದಿಗ್ರಾಮದಲ್ಲಿ ನಾರು ಬಟ್ಟೆಯನ್ನು ಉಟ್ಟು, ತಪವನ್ನು ಆಚರಿಸುತ್ತ ಕುಳಿತನು. ಅದೆಂಥ ಅವರ ಅಗಾಧವಾದ ಬಂಧು ಪ್ರೇಮವು ? ಶ್ರೀರಾಮಚಂದ್ರನು ಗುರುಕುಲದಲ್ಲಿ ಇರುವಾಗ್ಗೆ ಅವನು ತನ್ನ ಗುರುಗಳನ್ನು ಅನನ್ಯಭಾವದಿಂದ ಸೇವಿಸಿ ಅವರನ್ನು ಮೆಚ್ಚಿಸಿ ದನು. ಮುಂದೆ ಆದರೂ ಅವನು ತನ್ನ ಗುರುಗಳನ್ನು ಪ್ರೇಮಾದರ ದಿಂದ ಕಾಣುತ್ತಿದ್ದನು. ಗುರುವಾಕ್ಯವೆಂದರೆ ವೇದವಾಕ್ಯವೆಂದು ಭಾವಿಸುತ್ತಿದ್ದನು. ಗುರುಗಳೂ ಸಹ ತಮ್ಮ ಶಿಷ್ಯರನ್ನು ಹೊಟ್ಟೆಯ ಮಕ್ಕಳಂತೆ ಪಾಲಿಸುತ್ತಿದ್ದರು. ಆದ್ದರಿಂದ ಅವರಲ್ಲಿ ಗುರುಶಿಷ್ಯರೆಂಬ ಭಿನ್ನ ಭಾವವು ಇರುತ್ತಿರಲಿಲ್ಲ. ಅಹಹಾ ! ಎಂಥ ಅವರ ಗುರು ಭಕ್ತಿಯು ! ಇದ್ದರೆ ಇರಬೇಕು ಇಂಥ ಶಿಷ್ಯರು. ಅಂಥವರನ್ನು ಕಾಣುವದೂ ತೀರ ವಿರಳ.

ಶ್ರೀರಾಮಚಂದ್ರನು ಏಕಪತ್ನೀ ವ್ರತವವನಾಗಿದ್ದನು. ಅವನ ಪತ್ನಿಯ ಪ್ರೇಮವು ಬಹಳ ಅಗಾಧವಾದದ್ದಿತ್ತು. ಜಗನ್ಮಾತೆಯಾದ ಪಾರ್ವತಿಯು ಸೀತಾರೂಪವನ್ನು ಧರಿಸಿ ಅವನನ್ನು ಪರೀಕ್ಷಿಸಲು ಬಂದಾಗ್ಗೆ ಅವನು “ ದೇವಿ ” ಎಂದು ಆಕೆಯಪಾದಕ್ಕೆರಗಿದನು. ಇವರಿಂದ ಅವನು ಎಂಥ ಸುಂದರವಾದ ಸ್ತ್ರೀಯುಳನ್ನು ಕಂಡರೂ ಸಹ ಯಾವರೀತಿಯಾಗಿ ನಡೆದುಕೊಳ್ಳುತ್ತಿದ್ದನು ಎಂಬದು ಕಂಡು ಬರು ತ್ತದೆ. ಹಾಗೆಯೇ ಅವನು ಯಾವಾಗಲೂ ತನ್ನ ಆತ್ಮ ನಿರೀಕ್ಷಣೆ ಯನ್ನು ಮಾಡಿಕೊಳ್ಳುತ್ತಿದ್ದನು. ಮಾನವನಿಗೆ ಪತ್ನೀವಿಯೋಗದ ದು:ಖವು ಹೇಗೆ ಇರುತ್ತದೆಂಬದನ್ನು ತೋರಿಸುವದರಸಲುವಾಗಿಯೇ ತಾನು ಸೀತೆಯ ಸಲುವಾಗಿ ಅಪಾರವಾಗಿ ದು:ಖಿಸಿದನು. ತನ

ಪತ್ನಿಯ ಮೇಲೆ ಇಷ್ಟು ಅಗಾಧವಾದ ಪ್ರೇಮವಿದ್ದರೂ ಸಹ ಜನರಿಗೋಸ್ಕರ ಅವಳನ್ನು ರಾವಣನ ಸೆರೆಯಿಂದಬಿಡಿಸಿದಾಗ ಅಗ್ನಿಪರೀಕ್ಷೆಯನ್ನು ಮಾಡದೇ ಸ್ವೀಕರಿಸಲಿಲ್ಲ. ಅದರಿಂದ ಅವಳ ಅಚಲವಾದ ಪಾತಿವ್ರತ್ಯೆಯ ಪ್ರಭಾವವು ಜನರಿಗೆ ಕಂಡು ಬಂದಿತು. ಅವನು ಪ್ರಜರಿಗೋಸ್ಕರ ಗರ್ಭವತಿಯಾದ ಸೀತೆಯನ್ನು ತ್ಯಜಿಸಲು ಹಿಂದು ಮುಂದೆ ನೋಡಲಿಲ್ಲ. ಹೀಗೆ ಅವನು ಪ್ರಜರನ್ನು ತನ್ನ ಹೊಟ್ಟೆಯ ಮಕ್ಕಳಂತೆ ಪಾಲಿಸುತ್ತ ರಾಜ್ಯಕಾರಭಾರವನ್ನು ನ್ಯಾಯನೀತಿಯಿಂದ ನೋಡಿಕೊಳ್ಳುತ್ತಿದ್ದನು. ಅವನು ಸತ್ಯಕ್ಕೋಸ್ಕರ ತನ್ನ ತಮ್ಮನಾದ ಲಕ್ಷ್ಮಣನಿಗೆ ಸಹ ದೇಹಾಂತ ಶಿಕ್ಷೆಯನ್ನು ವಿಧಿಸಿದೇ ಬಿಡಲಿಲ್ಲ. ಆದ್ದರಿಂದ ಅವನು ಸತ್ಯಪ್ರಿಯನಿದ್ದನೆಂಬುದು ಕಂಡು ಬರುತ್ತದೆ. ಶ್ರೀರಾಮಚಂದ್ರನ ಚರಿತ್ರೆಯು ದೋಷರಹಿತವಾಗಿದ್ದು ಪರಿಪೂರ್ಣವಾಗಿದೆ. ಆದ್ದರಿಂದಲೇ ಶ್ರೀರಾಮಾವತಾರವು ಪೂರ್ಣಾವತಾರವೆಂದು ತಿಳಿಯಲ್ಪಡುತ್ತದೆ. ಶ್ರೀರಾಮರಾಜ್ಯದಲ್ಲಿ ಪ್ರಜೆಗಳಿಗೆ ದೊರೆತ ಸುಖಗಳು ಇಂದಿಗೂ ಕನಸಿನಂತೆ ಆಗಿವೆ. ಶ್ರೀರಾಮಚಂದ್ರನ ಸತ್ಯ ನಿಷ್ಠೆಯಿಂದ ಅಧರ್ಮದ ನಾಶವಾಯಿತು. ಹಾಗೂ ಅದರಿಂದ ದೇಶದಲ್ಲಿ ಸುಖಶಾಂತಿಗಳು ಚಿರಸ್ಥಾಯಿಯಾಗಿ ನೆಲೆಸಿದವು. ಶ್ರೀರಾಮಚಂದ್ರನು ತಾನೊಬ್ಬನೇ ಪರಂಧಾಮ ಗಮನವನ್ನು ಮಾಡಲಿಲ್ಲ. ಅವನನ್ನು ಸ್ಪರ್ಶಿಸಿದವರು ಅತನ ವಿರೋಧವನ್ನು ಮಾಡಿದವರು ಆತನನ್ನು ಕಂಡವರು. ಆತನ ನೆರಳಿನಲ್ಲಿದ್ದವರು ಸಹ ಮುಕ್ತರಾದರು. ಇದರಿಂದ ಆತನ ದಯಾಳುತ್ವದ ಕಲ್ಪನೆಯು ಎಲ್ಲರಿಗೆ ಬರುವದು. ರಾಮನಿಗಿಂತ ರಾಮನಾಮವೇ ಶ್ರೇಷ್ಠವೆಂಬದರಬಗ್ಗೆ ಸೇತುವೆಕಟ್ಟುತ್ತಿರುವಾಗ ಪಾಷಾಣಗಳು ಸಹ ರಾಮನಾಮದಿಂದ ನೀರಿನಮೇಲೆ ತೇಲಿದುದು ಕಂಡು ಬರುತ್ತದೆ. ಅದರಂತೆ ಇಂದಿಗೂ ಭಗವದ್ಭಕ್ತರು ಸಾರುತ್ತಿದ್ದಾರೆ. ಕಬ್ಬುಡೊಂಕಾಗಿದ್ದರೂ ಎತ್ತಕಡೆ

ಯಿಂದ ಮುರಿದರೂ ಸವಿಯಾಗಿರುವಂತೆ ಶ್ರೀರಾಮನಾಮ, ರಾಮ ಚರಿತ್ರೆ, ರಾಮಸೇವೆ ಪಾವನಕರವಾಗಿರುತ್ತವೆ. ಕಾರಣ ಶ್ರೀರಾಮ ಚಂದ್ರನನ್ನು ಆಶ್ರಯಿಸಿದವರು ಸಂಸಾರಸಾಗರದಿಂದ ಪಾರಾಗಿ ಜನನ ಮರಣವೆಂದೆಂಬ ಚಕ್ರದಿಂದ ಬಿಡುಗಡೆಹೊಂದುವದರಲ್ಲಿ ಆಶ್ಚರ್ಯ ವೇನು ? ಶ್ರೀರಾಮಚಂದ್ರನ ಸದ್ಗುಣಗಳನ್ನು ನೆನೆಯುತ್ತ ಹೋದಂತೆ ಅವು ಹನುಮಂತನ ಬಾಲದಂತೆ ಕೊನೆಯಿಲ್ಲದೆ ಮುಂದೆ ಸಾಗು ತ್ತವೆ. ಪರಮಾತ್ಮನನ್ನು ವರ್ಣಿಸಲು ವೇದಗಳು ಕೂಡ ನೇತಿ, ನೇತಿ (ಇಲ್ಲ, ಇಲ್ಲ) ಎಂದು ಹೇಳಿರುವಾಗ ನಮ್ಮ ವಾಣಿಯು ಕುಂಠಿತ ವಾಗದೆ ಏನು ಮಾಡೀತು. ?

ಇನ್ನು ಸೀತಾಮಾತೆಯ ಗುಣಗಾನವನ್ನು ಮಾಡುವಾ. ಅವಳ ಚರಿತ್ರೆಯು ಪರಮಪಾವನಮಯುವಾದುದೂ ಪವಿತ್ರವಾದುದೂ ಆಗಿದೆ. ಸ್ವಯಂವರವಾದಂದಿನಿಂದ ಪತಿಯನ್ನು ನೆರಳಿನಂತೆ ಆಶ್ರ ಯಿಸಿದಳು. ಪತಿಯ ಇಚ್ಛೆಯೇ ತನ್ನ ಇಚ್ಛೆಯೆಂದು ತಿಳಿದು ಕೊಂಡಳು. ಪತಿ ಶ್ರೀರಾಮ ವನಕ್ಕೆ ಹೊರಟರೆ ತಾನೂ ಹೊರಟಳು. ಪತಿಯ ಸುಖದುಃಖಗಳನ್ನು ತನ್ನವನ್ನಾಗಿ ಮಾಡಿಕೊಂಡಳು. ಸಕಲ ಸಂಪತ್ತನ್ನು ತ್ಯಜಿಸಿ ನಾರು ಬಟ್ಟೆಗಳನ್ನು ಧರಿಸಿದಳು. ಅಡವಿಯಲ್ಲಿ ಕಲ್ಲು ಮುಳ್ಳುಗಳೆನ್ನದೇ ಆಹಾರ ನಿದ್ರೆಯನ್ನು ತೊರೆದು ಪತಿಯನ್ನು ಹಿಂಬಾಲಿಸಿದಳು. ಸಹಿಸಲುಅಸಾಧ್ಯ ಕಷ್ಟಗಳನ್ನು ಸಾನಂದದಿಂದ ಸಹನ ಮಾಡಿದಳು. ಇದು ಎಂಥ ತಾಳ್ಮೆ! ಅಹಹಾ! ಇವಳು ಅಪ್ರತಿಮ ಸಾಧ್ವಿ.

ಅವಳ ಸೌಂದರ್ಯಕ್ಕೆ ಮೋಹಿತನಾದ ದುಷ್ಟನಾದ ರಾವಣನು ಆಕೆಯನ್ನು ಕದ್ದೊಯ್ದು ತನ್ನ ಐಶ್ವರ್ಯದ ಆಶೆತೋರಿಸಿದನು. ಆದರೂ ಅವಳು ಅವನ ಮುಖವನ್ನು ಕಣ್ಣೆತ್ತಿಸಹ ನೋಡಲಿಲ್ಲ. ಹಗಲಿರುಳು ರಾಮಧ್ಯಾನದಿಂದ ತನ್ನ ಮಾನಸಿಕ ಬಲವನ್ನು ಹೆಚ್ಚಿಸಿ

ಕೊಂಡಳು. ಕೊನೆಗೆ ರಾಮಚಂದ್ರನು ಅವಳನ್ನು ಸೆರೆಮನೆಯಿಂದ ಬಿಡಿಸಿಕೊಂಡು ಬಂದಾಗ್ಯೂ ಸಹ ಪಾತಿವ್ರತ್ಯದಬಗ್ಗೆ ಅಗ್ನಿ ಪರೀಕ್ಷೆ ಕೊಡಬೇಕಾಯಿತು. ಆದರೇನು ಅವಳ ನಿಚ್ಚಳಮನದ ಪ್ರತಿಬಿಂಬವು ಜಗವನ್ನು ಬೆರಗುಗೊಳಿಸುವಂತಾಯಿತು. ರಾಮನು ರಾಜ್ಯಭಾರ ಮಾಡಿದಾಗ ಸೀತೆಯು ರಾಣಿಯಾದಳು. ಜನಾಪವಾದಕ್ಕಂಜಿ ಅವ ಳನ್ನು ವನಕ್ಕೆ ಕಳುಹಿದನು. ಆಗ ಅವಳು ತನ್ನದೈವವನ್ನೇ ಹಳಿದು ಕೊಂಡಳೇ ಹೊರತು ಪತಿಗೆ ದೋಷಕೊಡಲಿಲ್ಲ. ಆಗು ಹೋಗುಗಳು ಕರ್ಮದಫಲವೆಂದು ನಂಬಿದಳು. ಹೀಗೆ ಅವಳ ಚರಿತ್ರೆಯು ಸ್ತ್ರೀ ಯರಿಗೆ ಆದರ್ಶವಾಗಿಯೂ, ದೋಷರಹಿತವಾಗಿಯೂ ಅಜರಾಮರ ವಾಗಿಯೂ ಉಳಿದೆದೆ. ಜಗದಲ್ಲಿ ಇಂಥ ಸಾಧ್ವಿಯು ಹಿಂದೆ ಮುಂದೆ ಇನ್ನೊಬ್ಬಳು ಆಗಲಿಲ್ಲ.

ಶ್ರೀರಾಮಚಂದ್ರನ ಸೇವೆಯನ್ನು ಕೈಕೊಂಡವರಲ್ಲಿ. ಹನು ಮಂತನೇ ಶ್ರೇಷ್ಠನಾದವನು. ಅವನು ತನ್ನ ಸೇವಕ ಭಾವದಿಂದ ಶ್ರೀರಾಮಚಂದ್ರನನ್ನು ಮೆಚ್ಚಿಸಿದನು. ಅವನು ಶ್ರೀರಾಮಚಂದ್ರನ ಸಲುವಾಗಿ ಶತಯೋಜನದಷ್ಟು ಅಗಲವಾದ ಸಮುದ್ರವನ್ನು ರಾಮ ನಾಮಸ್ಮರಣೆ ಮಾಡುತ್ತ ಉಲ್ಲಂಘಿಸಿ ಸೀತೆಯನ್ನು ಶೋಧಿಸಿದನು. ಲಕ್ಷ್ಮಣನು ಬ್ರಹ್ಮಾಸ್ತ್ರದಿಂದ ಮೂರ್ಛಿತನಾದಾಗ ದ್ರೋಣಾಚಲ ವನ್ನು ರಾಮನಾಮ ಸ್ಮರಣೆಯನ್ನು ಮಾಡುತ್ತ ಎತ್ತಿತಂದನು. ಹನು ಮಂತನು ಇಡೀ ಆಯುಷ್ಯವನ್ನೇ ರಾಮ ಸೇವೆಯ ಸಲುವಾಗಿ ಮೀಸ ಲಾಗಿಟ್ಟನು. ಅದರಿಂದ ಅವನ ಆಯುಷ್ಯಕ್ಕೆ ಕೊನೆಯೇ ಆಗಲಿಲ್ಲ. ಅವನು ಚಿರಂಜೀವಿಯಾಗಿ ಉಳಿದನು. ಅವನ ರಾಮ ಭಕ್ತಿಯನ್ನು ಪರೀಕ್ಷಿಸುವದಕ್ಕೋಸ್ಕರ ಸುಗ್ರೀವಾದಿ ವೀರರೆಲ್ಲರೂ ಅವನಿಗೆ ಎದೆ ಯನ್ನು ಸೀಳಿತೋರಿಸಲು ಹೇಳಿದರು. ಆಗ ಅವನು ಶ್ರೀರಾಮ ಚಂದ್ರನನ್ನು ನೆನೆಸುತ್ತ ತನ್ನ ಹರವಾದ ಎದೆಯನ್ನು ಕೈಯಿಂದ

ಸೀಳಿ ತನ್ನ ಹೃದಯ ಕಮಲದಲ್ಲಿ ಶ್ರೀರಾಮಚಂದ್ರ ಸೀತೆಯರನ್ನು ತೋರಿಸಿದನು. ಅಹಹಾ! ಎಂಥ ಸೇವ್ಯ ಭಾವವಿದು? ಇದ್ದರೆ ಇರಬೇಕು ಇಂಥ ಸೇವಕನು. ಅವನು ಜನ್ಮದಿಂದಲೂ ಬ್ರಹ್ಮಚಾರಿಯಾಗಿ ಉಳಿದನು. ಈ ರೀತಿ ಆತನು ಶ್ರೀರಾಮನ ಸೇವೆಯನ್ನು ಮಾಡಿ ಜನರಿಗೆ ಶಕ್ತಿ ಮುಕ್ತಿದಾತನಾಗಿರುವನು.

ಶ್ರೀರಾಮ ಚರಿತ್ರೆಯನ್ನು ಓದುವವರು ಎಂಥ ಪಾಷಾಣ ಹೃದಯಿಗಳಾದರೂ ಸಹ ಅವರ ನೇತ್ರಗಳಿಂದ ಅಶ್ರುಗಳುದರದೇ ಇರಲಾರವು. ಅವರ ಮನಸ್ಸು ಕರಗಿ ನೀರಾಗುವದರಲ್ಲಿ ಆಶ್ಚರ್ಯವೇನು? ಇಂಥ ಅದ್ಭುತವಾದ ಶ್ರೀರಾಮ ಚರಿತ್ರೆಯನ್ನು ಸೇವಿಸಿದವರು ಶ್ರೀರಾಮರೂಪವನ್ನು ಹೊಂದಿ ಜೀವನ್ ಮುಕ್ತರಾಗುವದರಲ್ಲಿ ಆಶ್ಚರ್ಯವೇನು? ವಾಚಕರು ಶ್ರೀರಾಮನು ಪಟ್ಟ ಕಷ್ಟಗಳನ್ನು ನೆನೆಸಿಕೊಂಡು ಆ ಪ್ರಮಾಣದಿಂದ ತಮಗೊದಗುವ ಕಷ್ಟಗಳು ಅತ್ಯಲ್ಪವೆಂದು ಭಾವಿಸಿ ಇದ್ದದ್ದರಲ್ಲಿಯೇ ಸುಖಸಮಾಧಾನಗಳನ್ನು ತಾಳಿ ಹಗಲಿರುಳು ಶ್ರೀರಾಮನನ್ನು ನೆನೆದು ಆತನ ಚರಿತ್ರೆಯನ್ನು ಕೇಳಿ ಅತನ ಮಹಿಮೆಯನ್ನು ಗಾನಮಾಡಿ ಆತನಲ್ಲಿ ಧ್ಯಾನಾಸಕ್ತರಾಗಿ ಈ ಸಂಸಾರ ಶಕಟದಿಂದ ಪಾರಾಗುವರೆಂದು ಭಾವಿಸುವೆವು.

ಶ್ರೀರಾಮಚಂದ್ರನು ಸಕಲರಿಗೆ ಆಯುರಾರೋಗ್ಯ ಸಂಪತ್ತುಗಳನ್ನು ದಯಪಾಲಿಸಲೆಂದು ಆತನ ಚರಣಾರವಿಂದಗಳಲ್ಲಿ ಪ್ರಾರ್ಥಿಸುವಾ.

**ಶ್ರೀರಾಮ ಜಯರಾಮ ಜಯ**

**ಸಮಾಪ್ತ**